# ಹೊಸತು

## ಒಳಗೇನಿದೆ.....




ಚಿತ್ರಗಳು : ಶ್ರೀಹರಿ, ಸತೀಶ್‌ಕುಮಾರ್, ಸ್ಯಾಮ್, ಜಿ. ಎಂ. ಬೊಮ್ನಳ್ಳಿ

ಮುಖಪುಟದ ಛಾಯಾಚಿತ್ರ : ಆರ್. ಎಸ್. ಆರ್.

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಆತ್ಮಹತ್ಯೆ ಮಾಡಿಕೊಂಡ ರೈತರಿಗೆ ನೀಡಲಾಗುವ ಪರಿಹಾರ ಧನವನ್ನು ನಿಲ್ಲಿಸಿದರೆ ರೈತರ ಆತ್ಮಹತ್ಯಾ ಸರಣಿಯನ್ನು ತಡೆಗಟ್ಟಬಹುದೆಂಬ ಮಾತನ್ನು ಕೆಲವು ಅಧಿಕಾರಿಗಳು ಮತ್ತು ಮಂತ್ರಿಗಳು ಹೇಳಿದ್ದಾರೆ. ಇದನ್ನು ಮೂರ್ಖತನವೆಂದು ಹೇಳಬೇಕೋ ದುರಹಂಕಾರ ವೆಂದು ಟೀಕಿಸಬೇಕೋ ಎಂಬುದನ್ನು ಜನ ತೀರ್ಮಾನಿಸುತ್ತಾರೆ. ಹೀಗೆ ಹೇಳುವವರಿಗೆ ರೈತರು ಬೇಕಾದರೆ ಹತ್ತು ಲಕ್ಷ ಸಂಗ್ರಹಿಸಿ ಕೊಡುತ್ತಾರೆ, ಇವರೆಲ್ಲಾ ಪ್ರಪಂಚದಿಂದ ಹೊರನಡೆಯಲು ಸಿದ್ಧರಿದ್ದಾರೇನು ? ನಮ್ಮ ಇಡೀ ಕೃಷಿ ನೀತಿಯನ್ನು ವಿಮರ್ಶೆ ಮಾಡದೆ ಆತ್ಮಹತ್ಯಾ ಪ್ರಕರಣಗಳನ್ನು ಕೇವಲ ಮನೋವೈಜ್ಞಾನಿಕ ಪ್ರಶ್ನೆಯೆಂದು ತರ್ಕಿಸುವುದು ಅಸಂಗತವಾಗುತ್ತದೆ. ಅಡಿಕೆ ಬೆಲೆ ಬಿದ್ದಾಗ, ತೆಂಗಿಗೆ ನುಸಿಪೀಡೆ ತಗುಲಿದಾಗ, ತೊಗರಿ ನಷ್ಟವಾದಾಗ ಹೀಗೆ ರೈತರು ಪ್ರಾಣ ಕಳೆದುಕೊಳ್ಳಲಿಲ್ಲ. ಹಿಂದೆಯೂ ನಮ್ಮ ರಾಜ್ಯದಲ್ಲಿ ಮಳೆಯಿಲ್ಲದೆ ಜನ ಕಂಗಾಲಾಗಿದ್ದುದುಂಟು, ಆದರೆ ರೈತರು ವಿಷ ಸೇವಿಸಿ ಸಾಯಲಿಲ್ಲ. ಬ್ಯಾಂಕುಗಳಿಂದ ಕೋಟಿಗಟ್ಟಲೆ ಸಾಲ ಪಡೆದು ಒಂದು ಚಿಕ್ಕಾಸೂ ಹಿಂದಿರುಗಿಸದಿರುವ ಭಾರಿ 'ಉದ್ಯಮಿ'ಗಳು ನಮ್ಮ ದೇಶದಲ್ಲಿದ್ದಾರೆ. ಒಟ್ಟು ಎಂಭತ್ತು ಸಾವಿರ ಕೋಟಿಯನ್ನವರು ತಿಂದು ತೇಗಿದ್ದಾರೆ. ಯಾರೂ ನೇಣು ಹಾಕಿಕೊಳ್ಳಲಿಲ್ಲ. ರಾಜ್ಯದ ಎಲ್ಲ ರೈತರ ಅಧಿಕೃತ ಸಾಲವು ಪೆಪ್ಸಿ ಕಂಪನಿಯೊಂದಕ್ಕೆ ಕೃಷ್ಣ ಸರ್ಕಾರ ನೀಡಿರುವ ೧೮೦ ಕೋಟಿ ತೆರಿಗೆ ರಿಯಾಯಿತಿಗೆ ಸಮನಾಗಬಹುದು, ಅಷ್ಟೆ. ಆದರೂ ರೈತರು ಹತಾಶರಾಗಿ ಅಸು ನೀಗುತ್ತಿದ್ದಾರೆಂದರೆ ನಾವೆಲ್ಲಾ ತಲೆ ತಗ್ಗಿಸಬೇಕು, ಎಚ್ಚೆತ್ತುಕೊಳ್ಳಬೇಕು.

ಅಮೆರಿಕಾ ಮತ್ತು ಯೂರೋಪು ರಾಷ್ಟ್ರಗಳ ಜೊತೆ ಸೇರಿ ವಿಶ್ವ ವ್ಯಾಪಾರ ಸಂಸ್ಥೆಯ ಇತ್ತೀಚಿನ ಅಧಿವೇಶನದಲ್ಲಿ ಭಾರತವು ತನ್ನ ವ್ಯಾಪಾರ ನಿಬಂಧನೆಗಳನ್ನು ಸಡಿಲಿಸಿದ್ದರೆ ದೇಶಕ್ಕೆ ಒಳ್ಳೆಯದಾಗುತ್ತಿತ್ತೆಂದು ಸುಬ್ರಹ್ಮಣ್ಯ ಸ್ವಾಮಿ ಹೇಳಿದ್ದಾರೆ. ಅಂದರೆ, ರೈತರ ಆತ್ಮಹತ್ಯೆ ಸಾಲದು, ಸರ್ಕಾರವೂ ಅವರ ಹತ್ಯೆ ಮಾಡಬೇಕೆಂದು ಇವರ ಸಂದೇಶ. ಕಳೆದ ಹದಿನಾಲ್ಕು ವರ್ಷಗಳಲ್ಲಿ ಕೃಷಿ ನೀತಿಯನ್ನು ರೈತ ವಿರೋಧಿ ಮತ್ತು ದೇಶ ವಿರೋಧಿ ಮಾಡಿದ ಎಲ್ಲ ಕೇಂದ್ರ ಸರ್ಕಾರಗಳೂ ಇಂದಿನ ಪರಿಸ್ಥಿತಿಗೆ ಕಾರಣ. ಕೃಷಿ ಉತ್ಪನ್ನಗಳ ಉತ್ಪಾದನೆಗೆ ತಗಲುವ ವೆಚ್ಚ ಮತ್ತು ಮಾರುಕಟ್ಟೆಯಲ್ಲಿ ಮಾರಾಟದ ಬೆಲೆಗಳ ನಡುವೆ ವಿಪರೀತ ಕಂದರ ಉಂಟಾಗಿರುವುದು ರೈತರ ತಲೆಯ ಮೇಲೆ ಬಂಡೆ ಎಳೆದಂತಾಗಿದೆ. ಸಾಂಸ್ಥಿಕ ಸಾಲಗಳನ್ನು ಮೀರಿ ಖಾಸಗಿ ಲೇವಾದೇವಿಗಾರರ ಬಳಿ ರೈತರು ಹಣ ಪಡೆದಿರುವುದು ಅವರನ್ನು ಸಾವಿನ ದವಡೆಗೆ ನೂಕುತ್ತಿದೆ. ಈ ಲೇವಾದೇವಿಗಾರರು ಶೇ. ೬೦ರಷ್ಟು ಬಡ್ಡಿ ವಸೂಲಿ ಮಾಡುತ್ತಾರೆ. ಸಾಲದ ವಸೂಲಾತಿಗೆ ಅವರು ಅನುಸರಿಸುವ ಪದ್ಧತಿಯು ರೈತರ ಆತ್ಮಗೌರವಕ್ಕೆ ಧಕ್ಕೆ ತರುತ್ತದೆ. ಜೊತೆಗೆ ಸಾರಾಯಿ ಮತ್ತು ಲಾಟರಿಗಳು ಅವರ ರಕ್ತವನ್ನು ಹೀರಿವೆ.

ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ತರುವುದೇ ದುರ್ಗಮವಾಗುತ್ತಿದೆ. ಮಧ್ಯವರ್ತಿಗಳು ಲಾಭವನ್ನು ಕಬಳಿಸುತ್ತಾರೆ. ರೈತರು ತಾವು ಹೂಡಿದ್ದ ಬಂಡವಾಳದ ಅರ್ಧದಷ್ಟನ್ನು ಸಹ ಹಿಂದಕ್ಕೆ ಪಡೆಯದೆ ಸಾಲದ ಹೊರೆಯಲ್ಲಿ ಬಗ್ಗಿಹೋಗುತ್ತಾರೆ. ಇನ್ನು ನಮ್ಮ ಕೃಷಿ ಸಂಶೋಧನೆಗಳು ಎಷ್ಟು ಅವಾಸ್ತವವಾಗಿವೆಯೆಂದರೆ ಕಡಲೆಕಾಯಿಗೆ ಕ್ರಿಮಿ ಹಿಡಿದರೆ ಏನು ಮಾಡಬೇಕು, ತೊಗರಿಗೆ ಹುಳು ಬಿದ್ದಾಗ ಹೇಗೆ ಸಂಭಾಳಿಸುವುದು ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯುವ ಬದಲು ಎಂಥದೋ ಜೆನೆಟಿಕ್ ಇಂಜಿನಿಯರಿಂಗನ್ನು ಹವ್ಯಾಸವನ್ನಾಗಿ ಮಾಡಿಕೊಳ್ಳುತ್ತವೆ ! ಇಲ್ಲವೆ, 'ಭಯೊ' - ಟೆಕ್ನಾಲಜಿ ಬೆನ್ನು ಹತ್ತುತ್ತಾರೆ !

ಕೃಷಿಗೆ ದಕ್ಕುವ ಭೂಮಿಯ ಪರಿಮಾಣ ಸಹ ಕಡಿಮೆಯಾಗಿದೆ. ಔದ್ಯಮಿಕ ಸಾಹಸಿಗಳು ಒಂದು ಕಡೆ ಭೂಮಿಯನ್ನು ಪಡೆದು ರೈತರನ್ನು ಕೂಲಿಯಾಳುಗಳನ್ನಾಗಿ ಮಾಡುತ್ತಿದ್ದರೆ ಸರ್ಕಾರ ಇನ್ನೊಂದೆಡೆ ರಸ್ತೆ ಯೋಜನೆ ಮುಂತಾದುವುಗಳ ಹೆಸರಿನಲ್ಲಿ ಭೂಮಿಯನ್ನು ಕಿತ್ತುಕೊಳ್ಳುತ್ತಿದೆ. ಸಾವಿರಾರು ಮರಗಳನ್ನು ನಾಶಪಡಿಸಿ ನಂತರ ಕೃತಕ ಮಳೆಯ ಯೋಜನೆ ಹಾಕಿಕೊಳ್ಳುವ ನಮ್ಮ ವರ್ತನೆಯು ರೈತರಿಗೆ ಸಾಂತ್ವನ ನೀಡುವ ಕ್ರಮವೆನಿಸಿಕೊಳ್ಳಲಾರದು.

ಸ್ವಾಭಿಮಾನಕ್ಕೆ ಕುಂದುಂಟುಮಾಡುವ ಸನ್ನಿವೇಶದಲ್ಲಿ ಅಸಹಾಯಕರಾದ ರೈತರು ಹೋರಾಟಕ್ಕಿಳಿದು ಸರ್ಕಾರಗಳನ್ನು ಮಣಿಸುವುದರ ಬದಲು ಆತ್ಮಹತ್ಯೆಯ ಹಾದಿ ಹಿಡಿದು ತಮ್ಮ ಕುಟುಂಬಗಳನ್ನು ಹೀನಾಯವನ್ನಾಗಿಸುವುದು ಒಂದು ದುರಂತ. ಕೃಷಿ ನೀತಿಯ ಸಮಗ್ರ ವಿಶ್ಲೇಷಣೆಗಾಗಿ ಆಗ್ರಹಿಸಿ ಜನಪರ ಮತ್ತು ದೇಶದ ಸ್ವಾವಲಂಬನಾ ಪರವಾದ ನೀತಿಗಳನ್ನು ಜಾರಿಗೊಳಿಸಬೇಕೆಂದು ಹೋರಾಟಕ್ಕಿಳಿಯಬೇಕಾದ್ದು ಕೇವಲ ರೈತರ ಜವಾಬ್ದಾರಿಯಲ್ಲ, ಅದು ಎಲ್ಲ ನಾಗರಿಕರ ಕರ್ತವ್ಯ.




ಸಂಪುಟ-೫ ಸಂಚಿಕೆ - ೩ ಅಕ್ಟೋಬರ್ ೨೦೦೩



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೮೩೯೭೪೯೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

# ಸಾಂಸ್ಕೃತಿಕ ಚಳುವಳಿಗಳ ಹೊಣೆಗಾರಿಕೆ

**ಸಂಪಾದಕೀಯ**

**ಜಾ**ಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಇವುಗಳ ದಾಳಿಯಿಂದಾಗಿ ಭಾರತದ ಇಂದಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಲಯಗಳಲ್ಲಿ ತೀವ್ರ ತೆರನಾದ ಏರುಪೇರುಗಳನ್ನು ಕಾಣುತ್ತಿದ್ದೇವೆ. ಹಲವಾರು ದಶಕಗಳಿಂದ ಕಟ್ಟಿ ಬೆಳೆಸಿದ ಜನಪರ ಮೌಲ್ಯಗಳು ಕರಗಿಹೋಗುತ್ತಿವೆ. ಜಡ್ಡು ಧಾರ್ಮಿಕ ಸಂಪ್ರದಾಯಗಳ ವಕ್ತಾರರು ನಮ್ಮ ಸಾಮಾಜಿಕ ಜೀವನದ ಎಲ್ಲ ಕ್ಷೇತ್ರಗಳನ್ನು ಆಕ್ರಮಿಸಿಕೊಳ್ಳುತ್ತಿರುವ ಪರಿಣಾಮವಾಗಿ ಪ್ರತಿಗಾಮಿ ಜೀವನ ಶೈಲಿ ಮತ್ತು ಅದಕ್ಕೆ ಅಂಟಿಕೊಂಡ ಮಾನವ ವಿರೋಧಿ ಅಂಶಗಳು ಹೆಡೆಯೆತ್ತುತ್ತಿವೆ. ಇತಿಹಾಸದತ್ತ ಕಣ್ಣು ಹಾಯಿಸಿದಲ್ಲಿ, ಇಂಥ ಪ್ರತಿಗಾಮಿ ಬೆಳವಣಿಗೆಗಳು ಹಿಂದೆಯೂ ಆಯಾ ಕಾಲಘಟ್ಟಗಳಲ್ಲಿ ಉದ್ಭವಿಸಿದ್ದನ್ನು ಕಾಣಬಹುದು. ಆ ಸವಾಲುಗಳನ್ನು ಸ್ವೀಕರಿಸಿ ಆ ಬಗೆಯ ಸಮಾಜ ವಿರೋಧಿ ಬೆಳವಣಿಗೆಗಳನ್ನು ಹಿಮ್ಮೆಟ್ಟಿಸಿದ ಪರಂಪರೆ ಈ ದೇಶದ ಪ್ರಗತಿಪರ ಸಮುದಾಯಕ್ಕಿದೆ. ಆ ಎಲ್ಲ ಸಂಘರ್ಷಗಳಲ್ಲಿಯೂ ಹಾಸುಹೊಕ್ಕಾಗಿ ಮತ್ತು ಅವಕ್ಕೆ ಪೂರಕವಾಗಿ ತಮ್ಮನ್ನು ತೊಡಗಿಸಿಕೊಂಡ ಸಾಂಸ್ಕೃತಿಕ ಚಳುವಳಿಗಳ ಮತ್ತು ಚಿಂತನಶೀಲರ ಪಾತ್ರ ಹಿರಿದಾದ್ದು, ಹೆಮ್ಮೆ ಪಡುವಂಥಾದ್ದು. ಭಾರತದ ಇತಿಹಾಸದಲ್ಲಿ ಅನೇಕರು ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ಹೊಸ ಚಿಂತನೆಗಳನ್ನು, ಕ್ರಾಂತಿಕಾರಿ ಆಲೋಚನೆಗಳನ್ನು ಹುಟ್ಟುಹಾಕಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಆದರೆ, ಇಂದು ಬದಲಾಗುತ್ತಿರುವ ಪರಿಸ್ಥಿತಿಯ ಸಂಕೀರ್ಣತೆ ಮತ್ತು ಸಮಸ್ಯೆಗಳ ತೀವ್ರತೆಗಳ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಚಳುವಳಿಗಳ ಕಾರ್ಯಕರ್ತರು ತಮ್ಮ ಕಾರ್ಯವಿಧಾನಗಳನ್ನು ವಿಮರ್ಶೆಗೆ ಒಡ್ಡಿಕೊಂಡು ಮುನ್ನಡೆಯಬೇಕಾದ ಅವಶ್ಯಕತೆ ಇದೆ.

ನಮ್ಮ ಇತ್ತೀಚಿನ ಚಾರಿತ್ರಿಕ ಸಂದರ್ಭದಲ್ಲಿಯೂ ಹೋರಾಟಗಳ ಮೂಲಕ ಪ್ರಗತಿಪರತೆಯು ಅರಳಿಕೊಂಡ ಅನೇಕ ಉದಾಹರಣೆಗಳು ನಮ್ಮ ಮುಂದಿವೆ. ಅವು ಇಂದಿಗೂ ಸ್ಫೂರ್ತಿದಾಯಕವೇ. ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ರಾಷ್ಟ್ರೀಯತೆ, ಸ್ವಾತಂತ್ರ್ಯ ಪ್ರಿಯತೆಗಳಂತಹ ಉದಾತ್ತ ಮೌಲ್ಯಗಳು ಚಿಗುರೊಡೆದು ಹೊಸ ಸಾಂಸ್ಕೃತಿಕ ವಾತಾವರಣದ ನಿರ್ಮಾಣಕ್ಕೆ ಅನುವಾದುವು. ಸ್ವಾತಂತ್ರ್ಯ ಸಂಗ್ರಾಮದ ಕೆಚ್ಚು ಹೊಸ ಭರವಸೆ ಹುರುಪುಗಳನ್ನು ಮೂಡಿಸಿತು. ಆಗಾಗ್ಗೆ ಭುಗಿಲೇಳುತ್ತಿದ್ದ ಹಿಂದೂ-ಮುಸ್ಲಿಂ ಕೋಮುವಾದಿ ಶಕ್ತಿಗಳನ್ನು ಹತ್ತಿಕ್ಕಲು ಇದರಿಂದಾಗಿ ಸಾಧ್ಯವಾಯಿತು. ಇದರ ಪೂರಕವಾಗಿಯೇ ರೂಪುಗೊಂಡ ಅಂದಿನ ಜನಮುಖೀ ಕಲಾಮಾಧ್ಯಮಗಳಿಂದ ಕೋಮುಸೌಹಾರ್ದ, ಹಿಂದು-ಮುಸ್ಲಿಂ ಸಹಬಾಳ್ವೆ, ಆರ್ಥಿಕ ಸ್ವಾವಲಂಬನೆ, ವಿಶ್ವಶಾಂತಿ ಮತ್ತಿತರ ಪುರೋಗಾಮಿ ಚಿಂತನೆಗಳು ಮತ್ತಷ್ಟು ಗಟ್ಟಿಗೊಂಡದ್ದು ಎರಡನೇ ಜಾಗತಿಕ ಯುದ್ಧದ ಸಂದರ್ಭದಲ್ಲಿ ಜರುಗಿದ ಫ್ಯಾಸಿಸ್ಟ್ ವಿರೋಧಿ ಚಳುವಳಿಯ ಪ್ರಭಾವದಿಂದ. ಅಂತೆಯೇ ರಾಷ್ಟ್ರದ ವಿಭಜನೆಯ ವಿಪ್ಲವದಿಂದಾಗಿ ತಲೆಯೆತ್ತಿದ ಧರ್ಮಾಂಧತೆ, ಸ್ವಾರ್ಥ, ಭೀತಿ, ಅಪನಂಬಿಕೆಗಳನ್ನು ನಿಭಾಯಿಸಲು ಸಾಧ್ಯವಾದದ್ದು ಕೂಡ. ಈ ಪ್ರಕ್ರಿಯೆಯಿಂದಾಗಿ ಸಾಹಿತ್ಯ, ಸಂಗೀತ, ಸಿನಿಮಾ, ರಂಗಭೂಮಿಗಳನ್ನೊಳಗೊಂಡಂತೆ ಸಾಂಸ್ಕೃತಿಕ ಜಗತ್ತು ಮಹತ್ತರ ಆಶಯಗಳನ್ನು, ಅವಕಾಶಗಳನ್ನು ಸೃಷ್ಟಿಸಿಕೊಂಡಿತು.

ಜಾಗತೀಕರಣದ ಬಿಸಿ ಇಂದು ನಮ್ಮ ಸಂಸ್ಕೃತಿಯ ಮೇಲೆ ಅಸಹ್ಯಕರ ಪರಿಣಾಮವನ್ನು ಬೀರುತ್ತಿದೆ. ಪಾಶ್ಚಿಮಾತ್ಯ ಹಾಗೂ ಬಂಡವಾಳಶಾಹಿ ಎಲಿಟಿಸ್ಟ್ ಮೌಲ್ಯಗಳು ಜನಜೀವನದ ಎಲ್ಲ ಹಂದರಗಳಲ್ಲೂ ಹರಡಿಕೊಳ್ಳುತ್ತಿವೆ. ಲೈಂಗಿಕ ಹಿಂಸೆ, ಕಾಮಕೇಳಿಗಳನ್ನು ಮೆರೆಯುವ ಚಲನಚಿತ್ರಗಳು ಯುವಜನತೆಯ ಮೇಲೆ ಕೆಟ್ಟ ಪರಿಣಾಮ ಬೀರುತ್ತಿವೆ. ಸ್ವಾತಂತ್ರ್ಯದ ಕ್ರಾಂತಿಕಾರಕ ಆಶಯಗಳು ಪೇಲವವಾಗಿ ಬಡತನ, ನಿರುದ್ಯೋಗ, ಅಸ್ಪೃಶ್ಯತೆ, ಜಾತಿಪದ್ಧತಿ, ಸ್ತ್ರೀ ಶೋಷಣೆ ಮತ್ತು ಕೋಮುವಾದ ಸಮಾಜವನ್ನು ಕಿತ್ತು ತಿನ್ನುತ್ತಿವೆ. ಏಕಧರ್ಮ, ಏಕಮುಖೀ ಜೀವನಮೌಲ್ಯಗಳನ್ನು ಪ್ರತಿಪಾದಿಸುವ ಶಕ್ತಿಗಳು ಮೇಲ್ಗೈ ಪಡೆಯುತ್ತಿವೆ. ಮಧ್ಯಮ ವರ್ಗದ ನಗರ ಪ್ರಜ್ಞೆಯ ಅಭಿವ್ಯಕ್ತಿ ಪ್ರಧಾನವಾಗುತ್ತಿದೆ; ಬದುಕಿನ ಎಲ್ಲ ಕ್ಷೇತ್ರಗಳಲ್ಲಿಯೂ ಹಿಟ್ಲರನ ಪ್ರತಿನಿಧಿಗಳು ದಾಂಧಲೆ ಎಬ್ಬಿಸುತ್ತಿದ್ದಾರೆ.

ಹತಾಶೆ, ದುಗುಡ, ದುಮ್ಮಾನ ತುಂಬಿಕೊಂಡಿರುವ ಇಂದಿನ ಸಂದರ್ಭದಲ್ಲಿ ಪ್ರಗತಿಪರ ರಾಜಕೀಯ ಚಳುವಳಿಗಳ ತುಡಿತಗಳಿಗೆ ಪೂರಕವಾಗಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿರುವ ಸಾಂಸ್ಕೃತಿಕ ಚಳುವಳಿಗಳು ಹಾಗೂ ಸಂಘಟನೆಗಳ ಅಂತಃಶಕ್ತಿ ಉಡುಗಿಹೋಗಿದೆಯೇ ಎಂಬ ಸಂದೇಹ ಉಂಟಾಗುವುದು ಸಹಜವೇ ಆಗಿದೆ. ಸ್ಥಾವರವನ್ನು ವಿರೋಧಿಸುವ ಎಲ್ಲ ಚಿಂತನಾಕ್ರಮಗಳಿಗೂ ಒಗ್ಗೊಟ್ಟು ಬಹುಮುಖೀ ಧೋರಣೆಯನ್ನನುಸರಿಸಿ ಮುಖ್ಯವಾಹಿನಿಯಾಗಿ ಕಾರ್ಯನಿರತರಾಗಬೇಕಿದ್ದ ಎಷ್ಟೋ ಸಂಘಟನೆಗಳು ತಮ್ಮದೇ ಸಂಕುಚಿತ ದೃಷ್ಟಿಕೋನಗಳಿಂದಾಗಿ, ಒಣ ಪ್ರತಿಷ್ಠೆಗಳಿಂದಾಗಿ ಒಡೆದು ಹೋಳಾಗಿ ದಿಕ್ಕೆಟ್ಟಿವೆ. ಆಶಯ ಗುರಿ ಒಂದೇ ಆದರೂ ರಾಜಕೀಯ ಪಕ್ಷಗಳಂತೆ ಅಥವಾ ಕಾರ್ಮಿಕ ಸಂಘಟನೆಗಳಂತೆ ಈ ಚಳುವಳಿಗಳೂ ಬೇರೆ ಬೇರೆಯಾದುದರಿಂದ ಗಳಿಸಿದ ಸಾಧನೆಗಳಾದರೂ ಏನು ? ನೋವಿನ ಈ ಮಾತನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿಕೊಳ್ಳಬೇಕು. ಮಹಾನ್ ಕಲಾವಿದರು, ನಾಟಕಕಾರರು, ಸಾಹಿತಿಗಳು, ಸಂಗೀತಗಾರರು ಕಟ್ಟಿ ಬೆಳೆಸಿದ ಈ ಸಂಘಟನೆಗಳು ಮತ್ತೆ ಒಂದಾಗುವುದಿರಲಿ, ಈಗಲಾದರೂ ತಮ್ಮ ಜವಾಬ್ದಾರಿಯನ್ನರಿತು ಇಂದಿನ ಸನ್ನಿವೇಶಕ್ಕೆ ಸ್ಪಂದಿಸಿ ಅನ್ಯೋನ್ಯತೆ, ಪರಸ್ಪರ ಸಹಕಾರಗಳಿಂದ ರಾಷ್ಟ್ರಮಟ್ಟದ, ರಾಜ್ಯಮಟ್ಟದ ಸಾಂಸ್ಕೃತಿಕ ಚಳುವಳಿಗಳಿಗೆ ಹೊಸ ರೂಪ ನೀಡಬೇಕಿದೆ, ಹೊಸ ಚೈತನ್ಯ ಮೂಡಿಸಬೇಕಿದೆ. ವಸಾಹತುಶಾಹಿ, ಸಾಮ್ರಾಜ್ಯಶಾಹಿ ಹೋರಾಟದ ಅನುಭವಗಳ ಫಲವಾಗಿ ಆವಿರ್ಭವಿಸಿರುವ ಈ ಸಾಂಸ್ಕೃತಿಕ ಹೋರಾಟ ಪರಂಪರೆ ಇಂದಿನ ನವ ವಸಾಹತುಶಾಹಿ ಸಂದರ್ಭದಲ್ಲಿ ಮತ್ತೆ ಸ್ಫೂರ್ತಿಯ ಸೆಲೆಯಾಗಬೇಕಿದೆ.

ಜನಪರ ಚಿಂತನೆಗಳು ಒಂದೇ ಮೌಲ್ಯದವು; ಆಯಾ ಸಾಮಾಜಿಕ ಸಂಬಂಧಗಳು ಬೇರೆ ಬೇರೆ, ಅಷ್ಟೆ. ನವ ವಸಾಹತುಶಾಹಿ ಮತ್ತು ಕೋಮುವಾದಗಳ ವಿರುದ್ಧದ ಸಂಘರ್ಷಕ್ಕೆ ಪ್ರಗತಿಶೀಲ ಸಾಂಸ್ಕೃತಿಕ ಸಮುದಾಯದ ಒಗ್ಗಟ್ಟು, ಒಮ್ಮನಸ್ಸು ಅತ್ಯಗತ್ಯ. ಈ ನಿಟ್ಟಿನ ಎಲ್ಲ ವಾಹಿನಿಗಳೂ ಸಹಮತ ಸಾಧಿಸಿ, ಅನುಕರಣೀಯ ಒತ್ತಾಸೆಗಳಿಗೆ ಮೊರೆ ಹೋಗದೆ ಶ್ರಮ ಸಂಸ್ಕೃತಿಯ ಪ್ರತಿನಿಧಿಗಳಾಗಿ ತಮ್ಮ ಚಟುವಟಿಕೆಗಳ ಮೂಲಕ ಜನಸಾಮಾನ್ಯರಲ್ಲಿ ಸ್ವಾಭಿಮಾನ ಜಾಗೃತಿಗಳನ್ನು ಮೂಡಿಸಬೇಕಿದೆ; ಬದಲಾವಣೆಯ ಬೀಜಗಳನ್ನು ಬಿತ್ತಬೇಕಿದೆ. ಹಾಗಾದಾಗ ಮಾತ್ರ ಪೆಪ್ಸಿ ಕೋಲಾ ಸಂಸ್ಕೃತಿಯು ಜಾರ್ಜ್

ಬುಷ್‌ನ ಸೀಮೆಯನ್ನು ದಾಟದಂತೆ ತಡೆಯಬಹುದು, ತ್ರಿಶೂಲವು ಭಾರತದ ರಾಷ್ಟ್ರ ಚಿಹ್ನೆಯಾಗದಂತೆ ನೋಡಿಕೊಳ್ಳಬಹುದು ಮತ್ತು ಅಮೆರಿಕೆಯ ಅಧ್ಯಕ್ಷ ಭಾರತದ ಪ್ರಾಕ್ಸಿ ಪ್ರಧಾನಿಯಾಗುವುದನ್ನು ತಪ್ಪಿಸಬಹುದು. ಹೇಗೂ ನಮ್ಮ ಈ ಸಾಂಸ್ಕೃತಿಕ ಪರಂಪರೆಯಲ್ಲಿ ಹುಟ್ಟಿಕೊಂಡ ಎಲ್ಲ ಸಾಮೂಹಿಕ ಸಂಘಟನೆಗಳಿಗೂ ಸೈದ್ಧಾಂತಿಕ ಬದ್ಧತೆ ಇದೆ. ಅದು ಅವಶ್ಯವೂ ಕೂಡ. ಅನುಭವದ ಆಧಾರದ ಮೇಲೆ ಅವು ತಮ್ಮ ಕ್ರಿಯಾಶೀಲತೆ ಸೃಜನಶೀಲತೆಗಳನ್ನು ವಿಸ್ತರಿಸಿಕೊಂಡು ಜನತೆಯ ನಾಡಿಬಡಿತಗಳಿಗೆ ಸ್ಪಂದಿಸುವುದಾದರೆ ಆ ಮಟ್ಟಿನ ಎಲ್ಲ ಐಕ್ಯ ಪ್ರಯತ್ನಗಳಲ್ಲಿ ಮುನ್ನಡೆ ಸಾಧಿಸಬಹುದಾಗಿದೆ.

ಈ ನಿಟ್ಟಿನಲ್ಲಿ ವಿವಿಧ ಸಂಘಟನೆಗಳು, ಕಾರ್ಯಕರ್ತರು ಇಂದಿನ ಐತಿಹಾಸಿಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಒಂದುಗೂಡಿ ಕೈಜೋಡಿಸಿಯಾರೆ ?

## ಕ್ಯಾನ್‌ಕುನ್ ಸಮಾವೇಶ : ಗರಬಡಿದ ಅರ್ಥವ್ಯವಸ್ಥೆಗೊಂದು ವ್ಯಾಖ್ಯಾನ

**ಭಾ**ರತದ ಮಟ್ಟಿಗೆ ಹೇಳುವುದಾದರೆ ಕ್ಯಾನ್‌ಕುನ್ ಸಮಾವೇಶ ಮುರಿದು ಬಿದ್ದದ್ದರಿಂದ ನಿರಾಶೆಯಾಗಿರುವುದು ಮೊದಲಿಗೆ ನಮ್ಮ ಕನ್‌ಫೆಡರೇಶನ್ ಆಫ್ ಇಂಡಿಯನ್ ಇಂಡಸ್ಟ್ರೀಸ್ (ಸಿಐಐ)ನ ನಾಯಕರಿಗೆ. ಅವರಿಗೆ ಪಶ್ಚಿಮದವರ ಬಗ್ಗೆ ಇನ್ನೂ ಭ್ರಮನಿರಸನವಾಗದಿದ್ದರೆ ಆಶ್ಚರ್ಯವೆನಿಸುತ್ತದೆ. ಅವರ ಅರ್ಥತಜ್ಞ, ನಾವು ಕೆಲವು ವಿಷಯಗಳಲ್ಲಿ ರಿಯಾಯಿತಿ ತೋರಿದರೆ ಅವರೂ ಕೆಲವು ರಿಯಾಯಿತಿ ತೋರಿಸಬೇಕಾಗಿತ್ತು, ಆದರೆ ಎಲ್ಲ ಹಿತಾಸಕ್ತಿಯ ತ್ಯಾಗಗಳನ್ನು ನಾವು ಮಾತ್ರ ಮಾಡಬೇಕು, ಅವರು ಏನನ್ನೂ ಬಿಟ್ಟುಕೊಡಲಿಲ್ಲ ಎಂದು ಟಿವಿ ಸಂದರ್ಶನಕಾರನ ಮುಂದೆ ವಿಲಾಪಮಾಡಿದ್ದು ಹಾಸ್ಯಾಸ್ಪದವಾಗಿತ್ತು. ಪಶ್ಚಿಮದ ಬಣದವರು ಹಲವು ಆಸೆ ಆಮಿಷಗಳನ್ನು ಪರದೆಯ ಹಿಂದೆ ಒಡ್ಡಿ ಹಿಂದುಳಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ಒಗ್ಗಟ್ಟನ್ನು ಕೊನೆಯ ಘಳಿಗೆಯಲ್ಲಿ ಭೇದಿಸುವ ಎಣಿಕೆ ಹಾಕಿದ್ದರು. ಕೊನೆಯ ಹಂತದಲ್ಲಿ ಯೂರೋಪಿಯನ್ ಒಕ್ಕೂಟ ಕೃಷಿ ಉತ್ಪಾದನೆಯ ಒಂದೆರಡು ಕ್ಷೇತ್ರದಲ್ಲಿ ಒಂದಿಷ್ಟು ವಿನಾಯ್ತಿ ತೋರುವುದಾಗಿಯೂ, ಆದರೆ ಮೊದಲಿಗೆ ಸಿಂಗಾಪೂರದಲ್ಲಿ ಇಂಗಿತವಾದ ಪೂರ್ಣವಾಗಿ ವಾಣಿಜ್ಯವಲ್ಲದ ನಾಲ್ಕು ವಿಷಯಗಳನ್ನು ಚರ್ಚಿಸಬೇಕೆಂದೂ ಪಟ್ಟು ಹಿಡಿಯಿತು. ಅಮೆರಿಕ ಮಾತ್ರ ಯಾವ ರಿಯಾಯಿತಿಗೂ ಸಿದ್ಧವಿರಲಿಲ್ಲ, ಅರ್ಥಾತ್ ಪಶ್ಚಿಮದವರಿಗೆ ಈ ಸಮಾವೇಶ ಜಯಶಾಲಿಯಾಗದಿದ್ದರೆ ಏನೂ ನಷ್ಟವಿರಲಿಲ್ಲ. ಸಿಂಗಪುರದ ವಿಷಯಗಳನ್ನು ಭಾರತ ಸರ್ಕಾರವೇ ಸಿದ್ಧವಿರದಿದ್ದರೂ, ಚರ್ಚಿಸಬಹುದೆಂದು ನಮ್ಮ ಸಿಐಐ ತನ್ನ ಪರಿಪತ್ರದಲ್ಲಿ ಹೇಳಿಕೊಂಡು, ತಮ್ಮ ಸರ್ಕಾರಕ್ಕೆ ಮೀರಿ, ಪಶ್ಚಿಮ ಬಣದ ಕೃಪೆಗೆ ಪಾತ್ರವಾಗುವ ಪ್ರಯತ್ನ ಮಾಡಿದ್ದು ಅವರು ಪ್ರತಿನಿಧಿಸುವ ವರ್ಗದ ಇಬ್ಬಂದಿತನದ ಸೂಚಕವಾಗಿತ್ತು. ಈ ವರ್ಗದಲ್ಲಿ ಇತ್ತೀಚೆಗೆ ಹಿರಿಯ ಭೂಮಾಲಿಕ ವರ್ಗವೂ ಸೇರಿಕೊಳ್ಳುತ್ತಿರುವ ಸೂಚನೆಗಳು ಕಂಡುಬಂದಿದ್ದರೂ ಕೇವಲ ವಣಿಕ ಮನೋಧರ್ಮದ ಈ ವರ್ಗದಿಂದ ನಾಡಿನ ಆರ್ಥಿಕ ಸ್ವಾಯತ್ತತೆಯ ಬಯಕೆಯನ್ನು ಸ್ವಾತಂತ್ರ್ಯ ಪೂರ್ವದಲ್ಲೂ ಕಾಣಲಿಲ್ಲ. ಈಗಲೂ ಕಾಣುವಂತಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ಭಾರತ ತನ್ನ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯ ವಿದೇಶಾಂಗ ನೀತಿಯನ್ನು ಹಂತಹಂತವಾಗಿ ಕೈಬಿಡುತ್ತಾ, ಕೇವಲ ವ್ಯಾಪಾರ-ಕೈಗಾರಿಕಾ ಹಿತಾಸಕ್ತಿಯನ್ನು ಪ್ರತಿನಿಧಿಸುತ್ತಾ, ಅಲಿಪ್ತ ನೀತಿಯನ್ನು, ಅಲಿಪ್ತ ರಾಷ್ಟ್ರಗಳ ಸ್ನೇಹವನ್ನು ಕಡೆಗಾಣಿಸುತ್ತಾ, ಪಶ್ಚಿಮದ ಬಣಕ್ಕೆ ಸಮೀಪವಾಗುತ್ತಾ ಬರುತ್ತಿರುವುದು ಸುಸ್ಪಷ್ಟ. ಇದರ ಮುಂದುವರಿಕೆಯಾಗಿ ಈಗಷ್ಟೆ ಇಸ್ರೇಲ್ ಜತೆ ಬಾಂಧವ್ಯಕ್ಕೆ ಕೈಚಾಚಿ ಆಯ್ತು. ಪರಿಣಾಮವಾಗಿ ನೆನ್ನೆಯ ನೆಚ್ಚಿನ ಗೆಳೆಯ ರಾಷ್ಟ್ರಗಳ ವಿಶ್ವಾಸ ಕಳೆದುಕೊಂಡು ಅಪಾರ ನೈತಿಕ ನಷ್ಟವನ್ನು ಅನುಭವಿಸಿಯೂ ಪಶ್ಚಿಮ ಬಣದ ಸಂಪೂರ್ಣ ವಿಶ್ವಾಸ ಗಳಿಸಿ ಅವರ ಅಂತರಂಗವಲಯಕ್ಕೆ ಪ್ರವೇಶಿಸಲಾಗಲಿಲ್ಲವೆಂಬ ವಾಸ್ತವ ಕ್ಯಾನ್‌ಕುನ್‌ನಲ್ಲಿ ರಾಚಿ ಬಡಿದಿರಬೇಕು. ಪಾರ್ಲಿಮೆಂಟಿಗೂ ತಿಳಿಸದೆ ರಾತ್ರೋರಾತ್ರಿ ಹೋಗಿ ವಿಶ್ವವಾಣಿಜ್ಯ ಸಂಸ್ಥೆಗೆ ಸೇರ್ಪಡೆಯ ಸಹಿ ಹಾಕಿದ ಪ್ರಣವ ಮುಖರ್ಜಿಯ ಕಾಂಗ್ರೆಸ್ ಪಕ್ಷ, ಸ್ವದೇಶಿ ಸ್ವದೇಶಿ ಎಂದೇ ಜಾಗರಣೆ ಮಾಡುತ್ತಾ, ಆದರೂ ವಿಶ್ವವಾಣಿಜ್ಯ ಪ್ರಕ್ರಿಯೆ ಅನಿವಾರ್ಯವೆಂದು ಆ ಮಂಡಲಿ ಕೇಳುವುದಕ್ಕೆ ಮುಂಚೆಯೇ ಅನೇಕ ರಿಯಾಯಿತಿಗಳನ್ನಿತ್ತು, ಆಮದು ನಿಯಮಗಳನ್ನು ಮುರಿದು ದೇಶವನ್ನು ವಿದೇಶಿ ಸರಕುಗಳ ಆಕ್ರಮಣಕ್ಕೆ ತೆರೆದಿಟ್ಟು, ಕೃಷಿಕರಿಗೆ ನೀಡುವ ಕಿಂಚಿತ್ ನೆರವು ಹಣವನ್ನೂ ಖೋತಾ ಮಾಡುವ ವೇಳಾಪಟ್ಟಿ ಪ್ರಕಟಪಡಿಸಿದ ಭಾಜಪಾ ಕ್ಯಾನ್‌ಕುನ್ ಸಮಾವೇಶ ಭಗ್ನವಾಗಿದ್ದಕ್ಕೆ ತಾವಿತ್ತ ನಾಯಕತ್ವದ ಸಾಧನೆ ಎಂದು ಪೊಳ್ಳು ಬಾಜಾಬಜಂತ್ರಿ ಮಾಡುವುದನ್ನು ಬೇರೆ ನಾವು ಸಹಿಸಬೇಕಾಗುತ್ತದೆ. ಚುನಾವಣೆ ಹತ್ತಿರವಾಗುತ್ತಿರುವಾಗ ಕೃಷಿಕರ ನೆರವಿಗೆ ಕಟಿಬದ್ಧವೆಂಬ ಭಾಜಪದ ರಾಜಕೀಯ ಒತ್ತಟ್ಟಿಗಿರಲಿ.

ಪಶ್ಚಿಮದವರು ತಮ್ಮ ಅಲ್ಪಸಂಖ್ಯಾತ ಕೃಷಿಕರ, ಕೃಷಿ ಎಂಬ ಕೈಗಾರಿಕೆಗೆ ವಾರ್ಷಿಕ ೧೬ ಲಕ್ಷ ಕೋಟಿ ಹಣ ನೆರವು ನೀಡುತ್ತಿರುವುದಾದರೂ ಹೇಗೆ ? ಆ ಸರ್ಕಾರಗಳು, ನಮ್ಮಂತಲ್ಲದೆ ತಮ್ಮ ಉದ್ಯಮಪತಿಗಳಿಂದ ವಸೂಲು ಮಾಡುವ ಕರ ಒಂದಾದರೆ ಅವರು ಮಾರುವ ಶಸ್ತ್ರಾಸ್ತ್ರಗಳಿಂದ ಬರುವ ಅಪಾರ ಹಣ ಮತ್ತೊಂದು. ಹೀಗೆ ಅಭಿವೃದ್ಧಿಶೀಲ ಮತ್ತೆ ಹಿಂದುಳಿದ ರಾಷ್ಟ್ರಗಳ ಶೋಷಣೆಯಿಂದ ತಂದ ಅಪಾರ ಹಣದಿಂದ ನೀಡುವ ಒಂದಿಷ್ಟು ಹಣವಷ್ಟೇ ಈ ಅಪಾರ ಮೊತ್ತ. ವಾಸ್ತವದಲ್ಲಿ ಅವರ ಸಮಸ್ಯೆ ಕೃಷಿಕ್ಷೇತ್ರದ ನೆರವಿನದಲ್ಲವೆನಿಸುತ್ತದೆ. ಈಗಾಗಲೇ ಬಂದಿರುವ ಜೈವಿಕ ಉತ್ಪಾದನಾ ಮಾರ್ಗ ಈ ಕ್ಷೇತ್ರದ ಉತ್ಪಾದಕತೆಯನ್ನು ಹೆಚ್ಚಿಸಿ ನಮ್ಮ ಉತ್ಪಾದನೆ ಬೆಲೆಯೊಡನೆ ಪೈಪೋಟಿ ನಡೆಸಲು ಸಮರ್ಥವಾದೀತು. ಅಥವಾ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳ ಬಗ್ಗೆ ಈಗ ನಂಬಿಕೆ ಹೋಗಿದ್ದು, ಬರುವ ದಿನಗಳಲ್ಲಿ ಸಾವಯವ ಕೃಷಿಗೆ ಜಗತ್ತು ಹಿಂದಿರುಗಿ, ಕೃಷಿಯ ಉತ್ಪಾದನೆ ಸ್ವಾಯತ್ತತೆಗಲ್ಲದೆ, ವ್ಯಾಪಾರದ ಸರಕಾಗುವುದು ತೀರ ಕಡಿಮೆಯಾದೀತು. ಪಶ್ಚಿಮದವರನ್ನು ವಾಸ್ತವದಲ್ಲಿ ಕಾಡುತ್ತಿರುವುದು ಅವರ ಬಂಡವಾಳ ಪದ್ಧತಿಯ ಆರ್ಥಿಕ ಪದ್ಧತಿಗೆ ಬಂದಿರುವ ಕುಸಿಯುತ್ತಿರುವ ಲಾಭದ ರೋಗ ಹಾಗೂ ಆಧುನಿಕ ಮಾಹಿತಿ ತಂತ್ರಜ್ಞಾನವೂ ಸೇರಿದಂತೆ ಉತ್ಪಾದನಾ ಪ್ರಕ್ರಿಯೆಯಿಂದಾಗುತ್ತಿರುವ ನಿರುದ್ಯೋಗ ಸಮಸ್ಯೆ,

೮ನೇ ಪುಟಕ್ಕೆ....

ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ :೨೨೫೧೩೮೨
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ :೨೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ :೨೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೪೨೪೩೦೨

## ಪತ್ರಗಳು

**ಹೊಸತು - ಸೆಪ್ಟೆಂಬರ್**

ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ ಸುದ್ದಿ ಚಿತ್ರ ಆಶ್ಚರ್ಯವನ್ನುಂಟು ಮಾಡಿತು. ದೈಹಿಕ ಆರೋಗ್ಯದ ಜೊತೆ ಮಾನಸಿಕ ಸ್ವಾಸ್ಥ್ಯ ಕಾಪಾಡಲು ವೈದ್ಯಸಾಹಿತ್ಯ ಪ್ರಚಾರ ಆಂದೋಲನ ನಿಜಕ್ಕೂ ಸಂತೋಷ ತರುತ್ತದೆ.

ಆಶ್ಫಾಕ ಪೀರಜಾದೆಯವರ 'ಗುಪ್ತಗಾಮಿನಿ' ಪದ್ಯ ಬೇರಿನಿಂದ ಹುಟ್ಟಿ ಕಾಂಡವಾಗಿ ಬೆಳೆಯುತ್ತಲೇ ಬಿಳಲು ಬಿಟ್ಟಂತೆ ಅನ್ನಿಸುತ್ತಿದೆ. ಈ ಪದ್ಯದ ಕಲ್ಪನೆ ಕಾವ್ಯಾತ್ಮಕವಾಗಿದ್ದು ಉತ್ತಮ ರಚನೆಯಾಗಿ ಓದಿಸಿಕೊಂಡು ಹೋಗುತ್ತದೆ.

*ಕಡೂರು* — **ಜಿ. ಹೆಚ್. ತ್ರಿವೇಣಿ**

ಎಲ್ಲವನ್ನೂ ಅಲ್ಲಗೆಳೆಯುವುದು ಒಂದು ವ್ಯಾಧಿ. 'ಉಪವಾಸವೆಂದರೆ ಉಣ್ಣದಿರುವುದು ಅಷ್ಟೇನಾ' ಎಂಬ ಲೇಖನ ಅಂಥದೊಂದು. ರಂಜಾನಿನಲ್ಲಿ ಮುಸ್ಲಿಮರು ಉಪವಾಸ ಮಾಡುತ್ತಾರೆ. ಉಪವಾಸ ಮಾಡಲು ಆಗದ ಜನ ಹಜರತ್ ಮಹಮದರನ್ನು ಕೇಳಿದರು : ನಮಗೆ ಉಪವಾಸ ಮಾಡಲು ಸಾಧ್ಯವಿಲ್ಲ ಏನು ಮಾಡುವುದು ? ಹಜರತ್ ಮಹಮದ್ ಹೇಳಿದರು: ಉಪವಾಸ ಮಾಡಲು ಹೇಳಿರುವುದರ ಉದ್ದೇಶ ಹಸಿವೆಂದರೇನೆಂದು ನಿಮಗೆ ತಿಳಿಯಲಿ ಎಂದು. ಹೊಟ್ಟೆ ತುಂಬಿದವರು ನೀವು. ನಿತ್ಯ ಉಪವಾಸದಲ್ಲೆ ಬಿದ್ದಿರುವ ಜನ ಅನೇಕರಿದ್ದಾರೆ. ಅವರು ಹೇಗೆ ಇದ್ದಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ನಿಮ್ಮನ್ನು ರಂಜಾನ್ ಕಾಲದಲ್ಲಿ ಉಪವಾಸವಿರಲು ಹೇಳಿದ್ದೇನೆ. ಉಳ್ಳವರು ಬಡವರ ಬಗೆಗೆ, ಹಸಿವಿನ ಬಗ್ಗೆ, ಯೋಚನೆ ಮಾಡಲು ರಂಜಾನ್ ಉತ್ತಮ ಅವಕಾಶ. ಜನರ ಹಸಿವನ್ನು ನೀಗಿಸುವುದು, ಬಡತನ ಕೊನೆಗಾಣಿಸುವುದು, ಉಳ್ಳವರಾದ ನಿಮ್ಮ ಹೊಣೆಗಾರಿಕೆ. ಅವರ ಹಸಿವು ಬಡತನ ನೀಗಲು ಯೋಜನಾಬದ್ಧ ನೀತಿ ರೂಪಿಸುವುದು ಇದರ ಉದ್ದೇಶ.

*ಬೆಂಗಳೂರು* — **ಎಚ್. ಎಸ್. ದೊರೆಸ್ವಾಮಿ**

### ಕುರ್ತಕೋಟಿ

ಕೀರ್ತಿನಾಥ ಕುರ್ತಕೋಟಿಯವರ ಬಗ್ಗೆ ಟಿ. ಜಿ. ರಾಘವ ತುಂಬಾ ಆತ್ಮೀಯವಾಗಿ ನೆನಪಿಸಿಕೊಂಡಿದ್ದಾರೆ. ಕನ್ನಡದ 'ಕೀರ್ತಿ'ಯಾಗಿ 'ಕೋಟಿ' ಸಹೃದಯರನ್ನು ಸೆಳೆದ 'ವಿಮರ್ಶೆಯ ವಿನಯ'ದ ಸಾಹಿತಿ, ಶ್ರೇಷ್ಠ ವಿಮರ್ಶಕರನ್ನು, ಅವರ ಒಡನಾಡಿಯಾಗಿ ಲೇಖಕರು ಹತ್ತಿರದಿಂದ ಕಂಡಿದ್ದಾರೆ.

ಕೀರ್ತಿಯವರ ಅಗಾಧ ಜ್ಞಾಪಕ ಶಕ್ತಿ, ಪ್ರತಿಭೆಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ಕನ್ನಡಿಗರಿಗೆ 'ಯುಗ ಧರ್ಮ ಮತ್ತು ಸಾಹಿತ್ಯ ದರ್ಶನ' ಮಾಡಿಸಿದಂತಹ ಧೀಮಂತ ವಿಮರ್ಶಕರ ನೆನಪೊಂದೇ ಶಾಶ್ವತವಾಗಿದೆ. ಅವರ ಗುರು-ಶಿಷ್ಯರ ಸಂಬಂಧ ಕುರಿತ ಸೂಕ್ಷ್ಮತೆಯನ್ನು ಲೇಖಕರು ವಿಶೇಷವಾಗಿ ಗ್ರಹಿಸಿದ್ದಾರೆ. ಕುರ್ತಕೋಟಿಯವರು ಬೇಂದ್ರೆಯವರ ಸಾಹಿತ್ಯದ ಬಗ್ಗೆ ಹೊಸ ಹೊಳಹುಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಕುರ್ತಕೋಟಿಯವರ ಸಮಗ್ರ ಸಾಹಿತ್ಯದ ಅವಲೋಕನ ಮತ್ತೊಮ್ಮೆ ಆಗಲಿ.

*ಶಂಕರಘಟ್ಟ* — ರಾಜೇಂದ್ರ ತಗಡ್ಲಿ

ಚಿದಾನಂದ ಸಾಲಿಯವರು ಬರೆದ 'ಚಲಂ ಎಂಬ ಅಪರೂಪದ ವ್ಯಕ್ತಿ' ಓದುತ್ತ ಹೋದಂತೆ ಮತ್ತೊಂದು ಪ್ರಪಂಚಕ್ಕೆ ಹೋದಂತಾಯಿತು. ಇದೆಲ್ಲ ಸಾಧ್ಯವೇ ? ಎಂದೂ ಯೋಚಿಸಿದೆ. ಸ್ವತಃ ಶಿಕ್ಷಕನಾಗಿಯೂ ತನ್ನ ಮಕ್ಕಳಿಗೆ ಶಿಕ್ಷಣ ನೀಡದೆ ಅವರಿಗೆ ಮುಕ್ತತೆ ನೀಡಿದರೆ, ಈ ಔಪಚಾರಿಕ ಶಿಕ್ಷಣದ ಬಗ್ಗೆ ಚಲಂರ ಪ್ರತಿಭಟನೆ ನಿಜಕ್ಕೂ ಅರ್ಥಪೂರ್ಣ, ಆದರೆ ಅದಕ್ಕೆ ಪರ್ಯಾಯ ದಾರಿ ಇಲ್ಲವಲ್ಲ. ಚಲಂ ಬಗ್ಗೆ ಅಷ್ಟಿಷ್ಟು ಓದಿದ್ದೆ. ಅವರ ಬಗ್ಗೆ ಇನ್ನಷ್ಟು ತಿಳಿಯುವ ಕುತೂಹಲ ಉಂಟಾಯ್ತು.

ನಾಲತವಾಡ — **ಮಹಾಬಲೇಶ್ವರ. ಗಡೇದ**

ಸೆಪ್ಟೆಂಬರ್, ೨೦೦೩ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಹಲವು ವಿಚಾರ ಪ್ರಚೋದಕ ಲೇಖನ, ಬರಹಗಳು ಬಹಳಷ್ಟು ಹಿಡಿಸಿದವು. ಶ್ರೀಶ ಅಜಕಾರು ಅವರ ''ಪುರಾತನ ಕಾಲದ ಜನಜೀವನದ ಒಂದು ಮುಖ'' ಚರಿತ್ರೆಯ ಪುಟಗಳ ಕಡೆಗೆ ಮತ್ತೊಮ್ಮೆ ದೃಷ್ಟಿಹಾಯಿಸ ಬೇಕೆಂಬ ಮಾತನ್ನು ಸ್ಪಷ್ಟಪಡಿಸುತ್ತದೆ. ನಮ್ಮ ಇತಿಹಾಸ ಹೆಚ್ಚು - ಹೆಚ್ಚು ಪುರಾಣ - ಅಂತೆ - ಕಂತೆಗಳಲ್ಲಿ ಮುಳುಗಿ ಅಲ್ಪರ ಇತಿಹಾಸವಾಗಿದೆಯೇ ಹೊರತು ಅಧಿಕ ಸಂಖ್ಯಾತರನ್ನು ಮರೆತುಹೋಗಿದೆ.




ಚಿದಾನಂದ ಸಾಲಿ ಅವರ 'ಚಲಂ ಎಂಬ ಅಪರೂಪದ ವ್ಯಕ್ತಿ'ಯ ಎಲ್ಲಾ ಮುಖಗಳನ್ನೂ ಸಮರ್ಪಕವಾಗಿ ಪರಿಚಯಿಸಿದೆ. ಸಾಮಾನ್ಯರಂತಿದ್ದು ಅಸಾಮಾನ್ಯ ವಿಚಾರ ಸಂಪತ್ತಿನಿಂದ ಕೂಡಿದ್ದ ಚಲಂನಂತವರು ಮತ್ತೆಲ್ಲೂ ಕಾಣಸಿಗರು.

*ಸೇಡಂ* — **ಅಣ್ಣಾಸಾಗರ್ ಬಿ. ಆರ್.**

ಆಗಸ್ಟ್ ೨೦೦೩ರ ಸಂಚಿಕೆಯನ್ನು ಕುತೂಹಲಕ್ಕಾಗಿ ಕೊಂಡು ತಂದು ಓದಿದೆ. ಅತ್ಯಾಕರ್ಷಕವಾದ ಮುದ್ದಾದ ಮುಖಪುಟ, ಅಚ್ಚುಕಟ್ಟಾದ ವಿನ್ಯಾಸ, ಮುದ್ರಣ, ಮನಸ್ಸಿಗೆ ಮುದ ನೀಡಿತು. ವೈಚಾರಿಕ, ಸಾಹಿತ್ಯಕ ಮತ್ತು ಮೌಲಿಕ ಲೇಖನಗಳನ್ನು ಒಳಗೊಂಡು, ಓದುಗರಿಗೆ ತೃಪ್ತಿ ಕೊಡುತ್ತದೆ. 'ಅಳಿದ ಮೇಲೆ' ಲೇಖನದಲ್ಲಿ 'ಆತ್ಮದ ಅಸ್ತಿತ್ವ'ವನ್ನೇ ಪ್ರಶ್ನಿಸಿರುವ ಲೇಖಕರ ವಾದಸರಣಿ ಹಿಡಿಸಿತು. ಉಳಿದ ಲೇಖನಗಳೂ, ಅಂಕಣಗಳೂ ಆಕರ್ಷಕವಾಗಿ, ವಿಚಾರಪೂರಿತವಾಗಿವೆ.

*ಬೆಂಗಳೂರು* — ಕೆ. ಜಿ. ವಿರೂಪಾಕ್ಷಪ್ಪ

''ವಾಲ್ಮೀಕಿ ಪೂರ್ವ ರಾಮಾಯಣಗಳು'' ಲೇಖನ ಕುರಿತು : ಜೈನ, ಬೌದ್ಧ, ಆಗ್ನೇಯ ಏಶಿಯಾಗಳಲ್ಲಿನ ರಾಮಾಯಣ ವಿಷಯಗಳು ವಾಲ್ಮೀಕಿ ಅನಂತರದವು. ನಾರದರಿಗೆ ಬ್ರಹ್ಮದೇವ ಹೇಳಿದ, ಅವರು ವಾಲ್ಮೀಕಿಗೆ ತಿಳಿಸಿದುದು ''ಮೂಲ ರಾಮಾಯಣ''ವೆಂಬ ಗ್ರಂಥ. ಅದು ಮಾತ್ರ ವಾಲ್ಮೀಕಿ ಪೂರ್ವದ್ದು. ವೇದದಲ್ಲಿ ಬರುವ ''ಸೀತೆ''ಗೂ ರಾಮಾಯಣದ ''ಸೀತೆ''ಗೂ ಸಂಬಂಧವಿಲ್ಲ. ರಾಮಾಯಣದ 'ರಘುರಾಮ'ನಿಗೂ ನನಗೂ ಇರುವಷ್ಟೇ ಸಂಬಂಧ! ಅಲ್ಲಿನ ''ಇಂದ್ರ-ಸೀತಾ'' ಎಂದರೆ ''ಭಗವಂತ-ಭೂಮಿ'' ಎಂದು.

ಸಾಗರ — **ಬ. ನಾ. ರಘುರಾಮ**

ಡಾ॥ ಸಿ. ಆರ್. ಚಂದ್ರಶೇಖರ್ ಅವರ ''ಈಶಾನ್ಯ ರಾಜ್ಯಗಳಿಗೆ ಭೇಟಿ : ಕೆಲವು ಅನುಭವಗಳು'' ಎಂಬ ಲೇಖನ (ಸೆಪ್ಟೆಂಬರ್ ಸಂಚಿಕೆ) ಕುರಿತು : ನನ್ನ ನಿರೀಕ್ಷೆಗೆ ತಕ್ಕಂತೆ ಅದು ನನ್ನ ಕುತೂಹಲವನ್ನು ಕೆರಳಿಸಿತು. ದುರ್ಗಮವಾದ ಆ ಪ್ರದೇಶಗಳ ವೈಶಿಷ್ಟ್ಯಗಳನ್ನು ಗುರುತಿಸಿ ಓದುಗರಿಗೆ ರಸಮಯವಾದ ಒಂದು ನಿಜ ಚಿತ್ರಣವನ್ನು ಲೇಖಕರು ನೀಡಿದ್ದಾರೆ. ಈ ಈಶಾನ್ಯ ರಾಜ್ಯಗಳಲ್ಲಿ ಒಂದಾದ ನಾಗಾಲ್ಯಾಂಡ್‌ನ ಪ್ರವಾಸ ಕಥನ ಹಿಂದೆ ಭೂ ವಿಜ್ಞಾನಿ ವೆಂಕಟಸ್ವಾಮಿಯವರ 'ನಾಗಾ ರಾಜ್ಯದಲ್ಲಿ ಪ್ರವಾಸ' ನಿಮ್ಮ ಮಾರ್ಚ್ ೨೦೦೧ರ ಸಂಚಿಕೆಯಲ್ಲಿ ಮೂಡಿಬಂದಿತ್ತು. ಅದರಲ್ಲಿದ್ದ ರೋಮಾಂಚನ ಘಟನೆಗಳನ್ನು ಸ್ಮರಿಸಿಕೊಂಡೆವು.

ಮಂಗಳೂರು — **ಟಿ. ಸಿ. ಶ್ರೀಯಾನ್**

ಹೊಸತು ಆಗಸ್ಟ್ ಸಂಚಿಕೆಯಲ್ಲಿ ಪ್ರೊ॥ ಎಸ್. ಶ್ರೀನಿವಾಸನ್‌ರವರ 'ಸಂಖ್ಯೆಗಳ ವಿಸ್ಮಯ' ಗಮನಿಸುತ್ತಿದ್ದಾಗ ಇದು ಹೊಳೆಯಿತು.

| | | | |
|---|---|---|---|
| ೧ | ೨ | ೩ | ೪ |
| ೫ | ೬ | ೭ | ೮ |
| ೯ | ೦ | ೧೦ | ೧ |

ಈಗೊಂದು ಚಮತ್ಕಾರ ಮಾಡೋಣ : + ಮತ್ತು – ಸಂಕೇತಗಳನ್ನು ಬಳಸಿ ಸಾಲುಗಳನ್ನು ಹೀಗೆ ಬರೆಯಬಹುದು :

೧ = ೨ + ೩ – ೪
೫ = ೬ + ೭ – ೮
೯ = ೦ + ೧೦ – ೧

ತುಮಕೂರು — **ಯೋಗೀಶ್ ಸೂರಪ್ಪ**

'ಕಾರ್ಟೂನ್ ಕಾಸರಗೋಡು' ಆಶ್ರಯದಲ್ಲಿ ನವೆಂಬರ್ ತಿಂಗಳಲ್ಲಿ ಎರಡು ದಿನಗಳ ವ್ಯಂಗ್ಯ ಚಿತ್ರ ತರಬೇತಿ ಶಿಬಿರ ನಡೆಯಲಿದೆ. ಭಾಗವಹಿಸಲು ಅಪೇಕ್ಷೆ ಉಳ್ಳವರು ೧೦ x ೧೫ ಸೆಂ.ಮೀ. ಅಳತೆಯಲ್ಲಿ ವ್ಯಂಗ್ಯ ಚಿತ್ರವೊಂದನ್ನೂ, ಜೊತೆಗೆ ಸ್ವ ವಿಳಾಸದ ಒಂದು ಕವರನ್ನೂ ಶಿಬಿರ ನಿರ್ದೇಶಕರಿಗೆ ಕಳಿಸಿಕೊಡಬೇಕೆಂದು ಕೋರಲಾಗಿದೆ.

**ವೆಂಕಟ್‌ಭಟ್ ಎಡನೀರು**
ಪೆರಡಾಲ ಮೂಲೆ, ಅಂಚೆ : ಎಡನೀರು
ಕಾಸರಗೋಡು - ೬೭೧ ೫೪೧

ಪತ್ರಗಳು

# ಇಲ್ಲದ ರಾಮಮಂದಿರದ ನಿಲ್ಲದ ಶೋಧನೆ

**ಐ**ದು ತಿಂಗಳು ೧೦ ದಿನಗಳ ನಂತರ ಆಯೋಧ್ಯೆ ಭೂಶೋಧನೆಯ ಪರದೆ ಕೆಳಗಿಳಿದಿದೆ. ಅಲಹಾಬಾದ್ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ ಭಾರತೀಯ ಉತ್ಖನನಕಾರರ ತಂಡ ಒಂದಾನೊಂದು ಕಾಲದಲ್ಲಿ ರಾಮ ಮಂದಿರವಿತ್ತು ಎಂದು ಹೇಳಲಾದ, ೧೯೯೨ರಲ್ಲಿ ನೆಲಸಮವಾದ ಬಾಬರಿ ಮಸೀದಿಯ, ನಿವೇಶನದಲ್ಲಿ ೧೬೦ ದಿನ ಭೂಮಿಯನ್ನು ಅಗೆದು ೧೩೫೦ ಸಣ್ಣ ಮತ್ತು ದೊಡ್ಡ ವಸ್ತುಗಳನ್ನು ಸಂಗ್ರಹಿಸಿದೆ. ಕೊನೆಯ ದಿನವೂ ಮಂದಿರದ ಸುಳಿವನ್ನು ನೀಡುವ ಕುರುಹೂ ಏನೂ ದೊರತಿಲ್ಲ. ಇನ್ನು ಮೇಲೆ ಆ ವಸ್ತುಗಳನ್ನು ಕ್ಷ-ಕಿರಣಗಳಿಗೆ ಒಡ್ಡಿ ಅವುಗಳಲ್ಲಿ ರಾಮನ ಲವಲೇಶವೇನಾದರೂ ಅಡಗಿರಬಹುದೇ ಎಂಬ ಶೋಧನೆಯನ್ನು ಪ್ರಾರಂಭಿಸಬೇಕಾಗಿದೆ !

ಒಂದು ಕಡೆ ಹಿಂದುತ್ವವಾದಿಗಳು ಮಸೀದಿ ತಳಪಾಯದ ಕೆಳಗೆ ಹೂತುಹೋಗಿದೆ ಎಂದು ಭಾವಿಸಲಾದ ರಾಮ ಮಂದಿರವನ್ನು ಎತ್ತಿ ನಿಲ್ಲಿಸುವ ಯತ್ನದಲ್ಲಿದ್ದರೆ ಇನ್ನೊಂದು ಕಡೆ ದೆಹಲಿಯ ದಲಿತ - ಬೌದ್ಧ ಪಂಗಡಕ್ಕೆ ಸೇರಿದ ಲಾರ್ಡ್ ಬುದ್ಧ ಕ್ಲಬ್‌ನ ಉದಿತರಾಜ್ (ಆತನ ಮೊದಲ ಹೆಸರು ರಾಮ್‌ರಾಜ್) ಬಾಬರಿ ಮಸೀದಿ ನೆಲಸಮಗೊಂಡ ೨.೭೭ ಎಕರೆ ನಿವೇಶನವು ಬೌದ್ಧರಿಗೆ ಸೇರಿದ ಆಸ್ತಿ ಎಂದು ವಾದಿಸುತ್ತಿದ್ದಾರೆ. ಬೌದ್ಧರ ಮೂರು ಸಂಸ್ಥೆಗಳು – ಬುದ್ಧ ಶೈಕ್ಷಣಿಕ ಪ್ರತಿಷ್ಠಾನ, ಲಾರ್ಡ್ ಬುದ್ಧ ಕ್ಲಬ್ ಮತ್ತು ಅಖಿಲ ಭಾರತ ಎಸ್‌ಸಿ/ಎಸ್‌ಟಿ ಸಂಘಟನೆಗಳ ಒಕ್ಕೂಟ – ಅಲಹಾಬಾದಿನ ಉಚ್ಚ ನ್ಯಾಯಾಲಯದ ಲಕ್ನೋ ಪೀಠದ ಮುಂದೆ ವಿವಾದಿತ ನಿವೇಶನ ತಮಗೆ ಸೇರಿದ್ದು ಎಂದು ಒಂದು ರಿಟ್ ಅರ್ಜಿ ಸಲ್ಲಿಸಿದ್ದರು. ಪ್ರತಿಷ್ಠಿತ ಉತ್ಖನನಕಾರ ಅಲೆಕ್ಸಾಂಡರ್ ಕನಿಂಗ್‌ಹ್ಯಾಮ್ ಆ ನಿವೇಶನದಲ್ಲಿ ೧೮೬೨-೬೩ರಲ್ಲಿ ಉತ್ಖನನವನ್ನು ನಡೆಸಿ ಆ ಸ್ಥಳ ಯಾವಾಗಲೂ ಬೌದ್ಧರ ಸ್ವಾಧೀನದಲ್ಲಿತ್ತು ಎಂದು ಹೇಳಿರುವುದನ್ನು ಉದಿತ್ ರಾಜ್ ತಮ್ಮ ರಿಟ್ ಅರ್ಜಿಯಲ್ಲಿ ದಾಖಲಿಸಿದ್ದರು. ಆದರೆ ಒಂದು ವಿಶೇಷ ನ್ಯಾಯಪೀಠ ಎಲ್ಲಾ ರಿಟ್ ಅರ್ಜಿಗಳನ್ನು ಕಳೆದ ಏಪ್ರಿಲ್ ೭ರಂದು ತಿರಸ್ಕರಿಸಿತು.

ಭಾರತೀಯ ಬೌದ್ಧ ಮಹಾಸಭಾ ಒಂದು ಪುಸ್ತಿಕೆಯನ್ನು ಕಳೆದ ವರ್ಷ ಬಿಡುಗಡೆ ಮಾಡಿತು. ಅದರಲ್ಲಿ 'ಅದು ಬೌದ್ಧರ ಸ್ಥಳ, ರಾಮ ಕೇವಲ ಒಂದು ಪೌರಾಣಿಕ ಪಾತ್ರ. ಅವನ ಅಸ್ತಿತ್ವಕ್ಕೆ ಪುರಾತತ್ವ ಶಾಸ್ತ್ರದ ಯಾವ ಪುರಾವೆಯೂ ಇಲ್ಲ' ಎಂದು ವಾದಿಸಲಾಗಿದೆ. ಅದರಲ್ಲಿ ಚೈನಾದ ಪ್ರವಾಸಿಗರಾದ ಯಾನ್ ಚ್ವಾಂಗ್ ಮತ್ತು ಫಾಹಿಯಾನ್‌ರ ಬರಹಗಳ ಪ್ರಕಾರ ಅಯೋಧ್ಯೆಯನ್ನು ಸಾಕೇತವೆಂದು ಕರೆಯಲಾಗುತ್ತಿತ್ತು ಮತ್ತು ಅದು ಒಂದು ಬೌದ್ಧ ಧರ್ಮದ ಕಲಿಕಾ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ. ಥಾಮಸ್ ವ್ಯಾಟರ್ಸ್ ರಚಿಸಿದ ''ಯಾನ್ ಚ್ವಾನನ ಇಂಡಿಯಾ ಪ್ರವಾಸ'' ಎಂಬ ಐತಿಹಾಸಿಕ ಕೃತಿಯನ್ನು ಲಂಡನ್ನಿನ ರಾಯಲ್ ಏಶಿಯಾಟಿಕ್ ಸೊಸೈಟಿಯು ೧೯೦೪-೦೫ರಲ್ಲಿ ಪ್ರಕಟಿಸಿದೆ. ಆದರಲ್ಲಿ ''ಅಯುಧ'' (ಅಯೋಧ್ಯೆ) ದೇಶದ ಜನರು ಒಳ್ಳೆಯ ಕೆಲಸ ಮಾಡುವುದರಲ್ಲಿ ಆಸಕ್ತರಾಗಿದ್ದರು, ನೆಮ್ಮದಿಯ ಜೀವನ ನಡೆಸುತ್ತಿದ್ದರು ಮತ್ತು ಪ್ರಾಯೋಗಿಕ ಶಿಕ್ಷಣದಲ್ಲಿ ನಿರತರಾಗಿದ್ದರು. ಅಲ್ಲಿ ಇದ್ದ ೧೦೦ಕ್ಕಿಂತ ಹೆಚ್ಚು ಬೌದ್ಧ ವಿಹಾರಗಳಲ್ಲಿ ಹೀನಯಾನ ಮತ್ತು ಮಹಾಯಾನ, ಎರಡು ಯಾನಗಳಿಗೂ ಸೇರಿದ ೩೦೦೦ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು'' ಎಂಬ ಯಾನ್ ಚ್ವಾಂಗ್‌ರ ಉಕ್ತಿಗಳನ್ನು ಉಲ್ಲೇಖಿಸಲಾಗಿದೆ.

ಆ ಪುಸ್ತಕವು ಅಲ್ಲಿ ಯಾನ್ ಚ್ವಾಂಗನು ಕಂಡದ್ದನ್ನು ಕಂಡಹಾಗೆ ದಾಖಲಿಸಿರುವದನ್ನು ಉದ್ಧರಿಸುತ್ತದೆ: ''ಅಲ್ಲಿ ೧೦ ದೇವಮಂದಿರಗಳಿದ್ದುವು ಮತ್ತು ಅಲ್ಲಿ ಬೌದ್ಧರಲ್ಲದವರ ಸಂಖ್ಯೆ ಅತ್ಯಲ್ಪವಾಗಿತ್ತು.'' ರಾಮನನ್ನು ಜನಪ್ರಿಯಗೊಳಿಸಿದ ಹದಿನಾರನೆಯ ಶತಮಾನದ ತುಳಸಿದಾಸನು ಸಹ ಬುದ್ಧನು ತನ್ನ ೧೬ ವರ್ಷ ಋತುಗಳನ್ನು ಅಯೋಧ್ಯೆಯಲ್ಲಿ ಕಳೆದನೆಂದು ಪ್ರಸ್ತಾಪಿಸಿದ್ದಾನೆ.

೧೯೫೦ರಲ್ಲಿ ವಿವಾದಿತ ಸ್ಥಳದಲ್ಲಿ ಪ್ರಾಚ್ಯವಸ್ತು ಶಾಸ್ತ್ರಜ್ಞ ಬಿ. ಬಿ. ಲಾಲ್ ನಡೆಸಿದ ಉತ್ಖನನಗಳಲ್ಲಿ ಕ್ರಿ. ಪೂ. ೨೦೦೦ದಷ್ಟು ಪ್ರಾಚೀನವಾದ ಬೌದ್ಧರ ಮಣ್ಣಿನ ಮಡಕೆಗಳು ಮತ್ತು ಕಲಾವಸ್ತುಗಳು ದೊರಕಿವೆ. ಅಖಿಲ ಭಾರತ ಬೋಧ ದರ್ಶನ ಸಂಘವು ''ನೆಲಸಮಗೊಂಡ ಬಾಬರಿ ಮಸೀದಿಯ ಕಂಬಗಳಲ್ಲಿ ಪಾಳಿ ಶಾಸನಗಳನ್ನು ಕೆತ್ತಲಾಗಿತ್ತು'' ಎಂದು ವಾದಿಸುತ್ತಿದೆ.

**ಬವಾರಿ ಬಾಬರಿಯಾದ ಬಗೆ:** ಮೂಲದಲ್ಲಿ ಆ ನಿವೇಶನ ಬೋಧ ವಿಹಾರವಾಗಿತ್ತು ಎಂದು ಬೌದ್ಧ ವಿದ್ವಾಂಸರಾದ ಧರ್ಮಕೀರ್ತಿ ಅವರು 'ಅಯೋಧ್ಯಾ ಮೆ ನ ರಾಮಮಂದಿರ್ ನ ಬಾಬರಿ ಮಸ್ಜಿದ್' (ಅಯೋಧ್ಯೆಯಲ್ಲಿ ರಾಮ ಮಂದಿರವೂ ಇರಲಿಲ್ಲ, ಬಾಬರಿ ಮಸೀದಿಯೂ ಇರಲಿಲ್ಲ) ಎಂದು ತಮ್ಮ ಗ್ರಂಥದಲ್ಲಿ ಹೇಳುತ್ತಾರೆ. ಅವರು ಜಾತಕ ಕತೆಗಳನ್ನು ಉಲ್ಲೇಖಿಸಿ ಬಾಬರಿ ಮಸೀದಿ ಇದ್ದ ಸ್ಥಳ ಮೂಲದಲ್ಲಿ ಬವಾರಿ ಮಹಾವಿಹಾರದ ನೆಲೆಯಾಗಿತ್ತು ಎಂದು ವಾದಿಸಿದ್ದಾರೆ. ದಶರಥ ಜಾತಕದ ಪ್ರಕಾರ ಹಿಂದು ಸಂತನಾದ ಬವಾರಿ ಎಂಬುವನು ಬುದ್ಧನಿಂದ ಪ್ರಭಾವಿತನಾಗಿದ್ದ ಮತ್ತು ಬವಾರಿಯ ಒಬ್ಬ ಶಿಷ್ಯ ತನ್ನ ಗುರುವಿನ ಸ್ಮಾರಕವಾಗಿ ಮಹಾವಿಹಾರವನ್ನು ನಿರ್ಮಿಸಿದ ಎಂದು ಆ ಗ್ರಂಥದಲ್ಲಿ ಹೇಳಲಾಗಿದೆ.

ಪುಷ್ಯಮಿತ್ರ (ಕ್ರಿ. ಪೂ. ೧೮೩-೧೪೭)ನ ಕಾಲದಲ್ಲಿ ಬ್ರಾಹ್ಮಣ ರಥಯಾತ್ರೆ ಮಧ್ಯ ಭಾರತದಲ್ಲೆಲ್ಲಾ ಸುತ್ತಿ ಅಲ್ಲಿದ್ದ ಬೌದ್ಧ ವಿಹಾರಗಳನ್ನೆಲ್ಲಾ ನೆಲಸಮ ಮಾಡಿ ಆ ಸ್ಥಳಗಳಲ್ಲಿ ಮಂದಿರಗಳನ್ನು ನಿರ್ಮಾಣ ಮಾಡಲಾಯಿತು ಎಂದು ಧರ್ಮಕೀರ್ತಿ ಹೇಳುತ್ತಾರೆ.

ಬವಾರಿ ಮಹಾವಿಹಾರಕ್ಕೂ ಅದೇ ಗತಿಯಾಯಿತು. ಆದರೆ ಬವಾರಿ ಎಂಬ ಹೆಸರು ಗೌರವಾರ್ಹವಾಗಿತ್ತಾದ್ದರಿಂದ ಆ ಮಂದಿರವನ್ನು 'ಬವಾರಿ ಮಂದಿರ' ಎಂದು ಕರೆಯಲಾಗುತ್ತಿತ್ತು. ಬಾಬರನ ಕಾಲದಲ್ಲಿ ಮಂದಿರವನ್ನು ನೆಲಸಮಗೊಳಿಸಿ ಅಲ್ಲಿ ಮಸೀದಿಯನ್ನು ಕಟ್ಟಿದಾಗ 'ಬವಾರಿ' ಎಂಬುದು 'ಬಾಬರಿ'ಯಾಗಿ ನಾಮಾಂತರಗೊಂಡಿತು ಎಂದು ಧರ್ಮಕೀರ್ತಿ ವಾದಿಸುತ್ತಾರೆ.

ಹಿಂದುತ್ವವಾದಿಗಳು ತಮ್ಮದೆಂದು ವಾದಿಸುವ ಮಥುರಾ ನಿವೇಶನದ ಬಗ್ಗೆಯೂ ಅದನ್ನೇ ಹೇಳಬಹುದು. ಕನಿಷ್ಕನ ಆಳ್ವಿಕೆಯಲ್ಲಿ ಬುದ್ಧನ ಪ್ರಥಮ ಮೂರ್ತಿಯನ್ನು ಮಥುರೆಯಲ್ಲಿ ಸ್ಥಾಪಿಸಲಾಯಿತು. ಆ ಅವಧಿಯಲ್ಲಿ ೨೭ ಬೌದ್ಧ ವಿಹಾರಗಳನ್ನು ನಿರ್ಮಿಸಲಾಯಿತು. ಮಹಾಯಾನ ಬೌದ್ಧ ಧರ್ಮವು ಸ್ಥಾಪಿತವಾದ ಮಥುರೆಯಲ್ಲಿ ಬೌದ್ಧ ಕಲಾವಸ್ತುಗಳನ್ನುಳ್ಳ ಒಂದು ಬೃಹದ್ ಪ್ರಾಚೀನವಸ್ತು ಸಂಗ್ರಹಾಲಯವಿದೆ.

ಬೌದ್ಧರ ಪ್ರಾಚೀನತೆಯನ್ನು ತಿಳಿಯಬೇಕಾದುದು ಒಳ್ಳೆಯದೇ, ಆದರೆ ಭೂ ಅಗೆತವನ್ನು ಎಲ್ಲಿಯವರೆಗೆ ಮಾಡಬಹುದು ? ಹಿಂದುತ್ವವಾದಿಗಳ ಜೊತೆ ಬೌದ್ಧರು ಸ್ಪರ್ಧಿಸುವುದು ಸರಿಯೆ ? ಬೌದ್ಧರೂ ಸಹ ವಿವಾದಿತ ಸ್ಥಳ ತಮಗೆ ಸೇರಬೇಕು ಎಂದು ವಾದಿಸಿದರೆ ಹಿಂದುತ್ವವಾದಿಗಳಿಗೂ ಬೌದ್ಧರಿಗೂ ವ್ಯತ್ಯಾಸವೇ ಇಲ್ಲವಾಗುತ್ತದೆ. ಆಗ ಹಿಂದು ಮತೀಯವಾದಿಗಳು ಬುದ್ಧನನ್ನು ದಶಾವತಾರಗಳಲ್ಲಿ ಒಂದು ಅವತಾರ ಎಂದು ಹೇಳುವುದು ಸರಿಯೇನೋ ಎನಿಸುತ್ತದೆ !

ಬೌದ್ಧ ಶೈಕ್ಷಣಿಕ ಪ್ರತಿಷ್ಠಾನ ಮತ್ತು ದಲಿತ - ಬೌದ್ಧ ಸಂಘಟನೆಗಳು ಈ ವಿವಾದದಿಂದ ಹಿಂದೆ ಸರಿದು ನೆಮ್ಮದಿಯ ಮಾನವ ಸಂಬಂಧಗಳನ್ನು ಸ್ಥಾಪಿಸುವತ್ತ ತಮ್ಮ ಗಮನವನ್ನು ಹರಿಸಬೇಕಾಗಿದೆ. ಈಗ ತಾನೆ ಮುಗಿದಿರುವ ಭೂ ಅಗೆತಗಳು ೧೮೬೨-೬೩ ಮತ್ತು ೧೯೫೦ರ ಉತ್ಖನನಗಳಿಗಿಂತ ಯಾವುದೇ ರೀತಿಯ ಭಿನ್ನ ಫಲಿತಾಂಶಗಳನ್ನು ನೀಡಿಲ್ಲ ಎಂಬುದನ್ನು ಹಿಂದುತ್ವವಾದಿಗಳು ಮನಗಂಡು ಕೋಮುಸೌಹಾರ್ದತೆಯತ್ತ ತಮ್ಮ ಗಮನವನ್ನು ಹರಿಸಬೇಕಾಗಿದೆ. ಅಯೋಧ್ಯೆಯ ಬೌದ್ಧ ವಿಹಾರ, ರಾಮ ಮಂದಿರ ಹಾಗೂ ಬಾಬರಿ ಮಸೀದಿಗಳೆಂಬ ಭೂತಕಾಲದ ಭೂತ ಪ್ರೇತಗಳ ಬಂಧನದಿಂದ ಬಿಡುಗಡೆ ಪಡೆದು ಆ ವಿವಾದಿತ ನಿವೇಶನದಲ್ಲಿ ಎಲ್ಲ ಮಾನವರ ನೆಮ್ಮದಿಯ ನಾಳೆಗೆ ಪೀಠಿಕೆಯಾಗಬಹುದಾದ ಒಂದು ಸುಂದರ ಉದ್ಯಾನವನ, ಮತ್ತು ಒಂದು ಸುಸಜ್ಜಿತ ಕ್ರೀಡಾ ಮೈದಾನ ಇತ್ಯಾದಿಗಳನ್ನು ನಿರ್ಮಿಸಿದರೆ ಹೇಗೆ ? ವಿವಿಧ ಮತ, ಧರ್ಮ, ಪಂಥಗಳಿಗೆ ಸೆರಿದ ಎಲ್ಲ ಮಾನವರೂ ಈ ದಿಸೆಯಲ್ಲಿ ಏಕೆ ಚಿಂತಿಸಬಾರದು ?

ಬಿ. ವಿ. ವೀರಭದ್ರಪ್ಪ
ಬಿ - ೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಉದ್ಯೋಗವನ್ನು ನಿರ್ಮಿಸದೆಯೇ ಕಡಿತಗೊಳಿಸುತ್ತಲೇ ಉತ್ಪನ್ನವನ್ನು ಹಲವುಪಟ್ಟು ವರ್ಧಿಸಲು ಸಾಧ್ಯವಾಗುತ್ತಿರುವ, ಕಾರ್ಮಿಕ ನಿರುಪಯೋಗಿಯಾಗಿ ಕಾಣುವ ಅರ್ಥವ್ಯವಸ್ಥೆ. ಯುದ್ಧಕ್ಕೆ ಅವಕಾಶ ಕಡಿಮೆಯಾದಂತೆಲ್ಲಾ ಅವರ ಶಸ್ತ್ರಾಸ್ತ್ರ ಕೈಗಾರಿಕೆ ಬಾಗಿಲು ಮುಚ್ಚುವುದೆಂಬ ಭೀತಿ; ಪಶ್ಚಿಮದ ಕೃಷಿ ಉತ್ಪನ್ನಗಳ ಮೇಲೆ ಹಾಗೂ ಅವರ ಕೈಗಾರಿಕಾ ಉತ್ಪನ್ನದ ಮೇಲೆ ಅವಲಂಬನೆಯನ್ನು ಹೆಚ್ಚು ಹೆಚ್ಚು ನೀಗಿಕೊಳ್ಳುತ್ತ, ಮುಂದುವರಿಯುತ್ತಿರುವ ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕತೆಯಿಂದಾಗಿ ಕ್ಷೀಣಿಸುತ್ತಿರುವ ಮಾರುಕಟ್ಟೆಗಳ ಅವಕಾಶದ ಭೀತಿ; ಹಣಕಾಸು ಬಂಡವಾಳದ ಶೇಖರಣೆ ವಾಸ್ತವ ಸಂಪತ್ತುಗಳ ಪ್ರಮಾಣಕ್ಕಿಂತ ಹಲವಾರು ಪಟ್ಟು ಹೆಚ್ಚಾಗಿದ್ದು, ಅವುಗಳನ್ನು ಹೂಡಲು, ಲಾಭ ಗಳಿಸಲು ನಷ್ಟವಾಗುತ್ತಿರುವ ಅವಕಾಶದ ಪರಿಸ್ಥಿತಿಯ ಭೀತಿ. ಬಂಡವಾಳದ ರಾಜಕೀಯ ಅರ್ಥಶಾಸ್ತ್ರದ ಮಾತಿನಲ್ಲಿ ಹೇಳುವುದಾದರೆ ವಿಶ್ವದ ಆರ್ಥಿಕ ವ್ಯವಸ್ಥೆಯನ್ನು ಒಟ್ಟಾರೆ ಪರೀಕ್ಷಿಸಿದಾಗ ಕಂಡುಬರುವ ಅತೀವ ಪ್ರಾದೇಶಿಕ ಅಸಮಾನ ಬೆಳವಣಿಗೆ ಇಂದಿನ ಸಮಸ್ಯೆಯ ಮೂಲ. ಆರ್ಥಿಕತೆಯ ಶರೀರದ ಮೇಲೆ ಕ್ಯಾನ್ಸರ್ ಗೆಡ್ಡೆಯಂತೆ ಬೆಳೆದಿರುವ ಕೇಂದ್ರೀಕೃತ ಬಂಡವಾಳದ ಬೃಹತ್ ಬಹುರಾಷ್ಟ್ರೀಯಗಳು ಈ ಬೆಳವಣಿಗೆಯ ಬಹುಮುಖ್ಯ ಲಕ್ಷಣ. ಪೈಪೋಟಿಯಲ್ಲೇ ಬೆಳೆದ ಏಕಸ್ವಾಮ್ಯ ಪೈಪೋಟಿಯನ್ನು ಸಹಿಸುವುದಿಲ್ಲ! ಅಮೆರಿಕದ ಸೆನೆಟರ್ ಕ್ಯಾನ್‌ಕುನ್ ವೈಫಲ್ಯಕ್ಕೆ ಕಾರಣರಾದವರನ್ನು ಹುಡುಕಿ ಶಿಕ್ಷಿಸುತ್ತೇನೆ ಎಂದಿದ್ದಾನೆ! ಆಂತರಿಕವಾಗಿಯೇ ಆಗಲಿ ಅಂತರರಾಷ್ಟ್ರೀಯ ವಾಗಿಯೇ ಆಗಲಿ ಇಂಥ ಪರಿಸ್ಥಿತಿ ಸಾಮಾಜಿಕ ಮತ್ತು ಆರ್ಥಿಕ ಕ್ಷೋಭೆಗೆ ದಾರಿ ಮಾಡಿಕೊಟ್ಟಿರುವುದು ಈಗಂತೂ ಸ್ಪಷ್ಟ. ಇದಕ್ಕೆ ಪರಿಹಾರವನ್ನು ಈ ಹಿಂದೆ ಈ ವ್ಯವಸ್ಥೆ ಫ್ಯಾಸಿಸಂ ಮೂಲಕ, ಯುದ್ಧಗಳ ಮೂಲಕ, ದಬ್ಬಾಳಿಕೆಯಿಂದ, ಆಕ್ರಮಣದಿಂದ ಕಂಡುಕೊಳ್ಳಲು ಪ್ರಯತ್ನಿಸಿದೆ. ಈಗ ಈ ಮಾರ್ಗವೂ ಸವಕಲಾಗಿದೆ. ಪ್ರಜಾಪ್ರಭುತ್ವಾತ್ಮಕ ಪರಿಹಾರದ ಮತ್ತೊಂದು ಮಾರ್ಗವೂ ಸಾಧ್ಯವಿದೆ. ಅದು ಲಾಭೈಕ ದೃಷ್ಟಿರಹಿತ, ಎಲ್ಲರೂ ಬದುಕುವ ನ್ಯಾಯಯುತ ಹಂಚಿಕೆಯ ಮಾರ್ಗ, ಸರ್ವಾಧಿಕಾರೀ ಏಕಸ್ವಾಮ್ಯ ವಿರುದ್ಧದ ಮಾರ್ಗ, ಮನುಷ್ಯನನ್ನು ಕೇಂದ್ರ ಮಾಡಿಕೊಳ್ಳುವ ಮಾರ್ಗ. ಇಂದು ವೈಜ್ಞಾನಿಕ ತಾಂತ್ರಿಕತೆಯ ಹಲವು ಮುಖ ಅಭಿವೃದ್ಧಿಯಿಂದಾಗಿ, ಜಗತ್ತಿನ ಜನತೆಗೆ ಬೇಕಾದ ಎಲ್ಲ ಅಗತ್ಯಗಳನ್ನು ಪೂರೈಸುವಷ್ಟು ಉತ್ಪಾದನೆ ಸುಲಭ ವೆಚ್ಚದಲ್ಲಿ ಸಾಧ್ಯವಾಗಿರುವಾಗ ವಾಣಿಜ್ಯ-ಲಾಭಗಳ ಹೆಸರಿನಲ್ಲಿ ಕ್ಷೋಭೆಯನ್ನು ಸೃಷ್ಟಿಸುವುದು ಅಮಾನವೀಯವೂ ಅನೈತಿಕವೂ ಆಗುತ್ತದೆ. ವಿಶ್ವಸಂಸ್ಥೆ ಈ ಜನಪರ ಮಾರ್ಗವನ್ನು ಬೆಸೆಯುವ ಒಂದು ಕೃಶವಾದ ಪ್ರಯತ್ನವಾಗಿತ್ತು. ಅಲ್ಲಿಂದ ವಾಣಿಜ್ಯ ವಿಷಯವನ್ನು ಹೊರ ತೆಗೆದು ನಿರಂಕುಶವೆನಿಸುವ, ಕೆಲವೊಮ್ಮೆ ಅರಾಜಕವೆನಿಸುವ ವಿಶ್ವವಾಣಿಜ್ಯ ಸಂಸ್ಥೆಯನ್ನು ಸೃಷ್ಟಿಸಿದವರು ಈಗ ಆದ ಪ್ರಮಾದವನ್ನು ಮನಗಂಡಿದ್ದರು. ಭಾರತದ ಆಂತರಿಕ ಸಂದರ್ಭದಲ್ಲಿ ಹೇಳುವುದಾದರೆ ಇಲ್ಲೂ ಲಾಭೈಕ ದೃಷ್ಟಿಯ ವಣಿಕ ನೀತಿಯನ್ನು ಅನುಸರಿಸಿ, ಹಲವು ರೂಪದ ಆರ್ಥಿಕ ಅಸಮಾನತೆಯನ್ನು ವಿಷಮಗೊಳಿಸುತ್ತಿರುವ ಆಳುವ ವರ್ಗ – ಅದು ಬಿಜೆಪಿಯೋ ಕಾಂಗ್ರೆಸ್ಸೋ ಯಾವುದಾದರೇನು – ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ಸಮಾನತೆಗಾಗಿ ದನಿ ಎತ್ತಲು ಹೇಗೆ ಸಾಧ್ಯ ?

ವಿಶ್ವಸಂಸ್ಥೆ ಪ್ರಾರಂಭವಾದ ಮೊದಲ ದಿನ ಒಂದು ಸುಳ್ಳು ಹೇಳಿತು: ಯುದ್ಧ ಮಾನವನ ಮನಸ್ಸಿನಲ್ಲಿ ಹುಟ್ಟುತ್ತದೆ ಎಂದು. ಅದನ್ನು ಮುಚ್ಚಲೆಂದು, ಅರೆಮನಸ್ಸಿನಿಂದ ಹಿಂದುಳಿದ ರಾಷ್ಟ್ರಗಳಿಗೆ ಆರ್ಥಿಕ ಪ್ರಗತಿ ದಕ್ಕಿದರೆ ಯುದ್ಧ ಭೀತಿ ಕಡಿಮೆಯಾಗುತ್ತದೆ ಎಂದಿತು. ಮುಂದುವರಿದ ರಾಷ್ಟ್ರಗಳು ತಮ್ಮ ರಾಷ್ಟ್ರಾದಾಯದ ಶೇಕಡ ಒಂದರಷ್ಟು ಹಣವನ್ನಾದರೂ ನೆರವು ನೀಡಿದರೆ ಸಾಕು ಹಿಂದುಳಿದ ರಾಷ್ಟ್ರಗಳು ಸಾಧಾರಣವಾದರೂ ತೃಪ್ತ ಜೀವನಮಟ್ಟ ಸಾಧಿಸಿಕೊಳ್ಳಬಲ್ಲುವು ಎನ್ನಲಾಯಿತು. ನಾಲ್ಕು ದಶಕಗಳ ನಿರರ್ಥಕ ಚರ್ಚೆ ಇದರ ಮೇಲೇ ಆಯಿತು. ಏತನ್ಮಧ್ಯೆ ಯುದ್ಧಾನಂತರ ಪಶ್ಚಿಮ ಬಣದವರು, ಪರಸ್ಪರ ನೆರವಿತ್ತುಕೊಂಡು ಆರ್ಥಿಕವಾಗಿ ಮೊದಲಿಗಿಂತಲೂ ಬಲಿಷ್ಠರಾದರು. ಹಿಂದಿನ ಎರಡು ಮಹಾಯುದ್ಧಗಳಲ್ಲಿ ಶತ್ರುಗಳಾಗಿದ್ದವರು ಈಗ ಒಂದಾದರು! ಈ ಸಾಧನೆ ಮುಗಿಯುತ್ತಿದ್ದಂತೆಯೇ. ನೆರವಿನ ಮಾತು ಬಿಡಿ, ಅದು ಬೆಳೆಯುವ ಮಾರ್ಗವಲ್ಲ, ವ್ಯಾಪಾರವೇ ಸರಿಯಾದ ಮಾರ್ಗ ಎಂದು ಸಾರಿದರು. ಈಗ ಬಡರಾಷ್ಟ್ರಗಳು ಕೇಳಿದ್ದೂ ಅಲ್ಲವೇ. ನೀವು ನಡೆಸುವ ವ್ಯಾಪಾರ ವಹಿವಾಟಿನಲ್ಲಿ ಶೇಕಡ ಒಂದರಷ್ಟಾದರೂ ಪಾಲುನೀಡಿ, ಭಾಗವಹಿಸಲು ನಮಗೆ ಮುಕ್ತ ಅವಕಾಶಕೊಡಿ, ನಾವು ಚೇತರಿಸಿ ಕೊಳ್ಳುತ್ತೇವೆ, ಎಂದು. ಇದನ್ನು ಇನ್ನು ಹತ್ತು ವರ್ಷ ನಿರರ್ಥಕ ಚರ್ಚೆಗೆ ಒಳಪಡಿಸಿದರು. ಈಗ ನೀವು ಕೇಳುವುದು ನಾವು ಕೊಡುವುದು ಹೀಗೆಲ್ಲಾ ವ್ಯಾಪಾರದಲ್ಲಿ ಪರಿಭಾಷೆಯೇ ಇಲ್ಲ, ಮುಕ್ತವಾದ ಮಾರುಕಟ್ಟೆಯಲ್ಲಿ ಮುಕ್ತವಾಗಿ ಪೈಪೋಟಿಯಲ್ಲಿ ಭಾಗವಹಿಸಿ, ಅದೇ ಬೆಳವಣಿಗೆಯ ಮಾರ್ಗ ಎನ್ನಲಾಯಿತು. ಹಾಗಾದರೆ ಮೊದಲಿಗೆ ಒಂದು ಸಣ್ಣ ಹೆಜ್ಜೆ, ಕೃಷಿವಲಯದಲ್ಲಾದರೂ ನೀವು ನಿಮ್ಮ ಕೃಷಿಗೆ ನೀಡುವ ನೆರವುಗಳನ್ನೂ ಅಡೆತಡೆಗಳನ್ನೂ ತೆಗೆದು, ನಮ್ಮ ಕೃಷಿ ಸರಕುಗಳಿಗೆ ಮುಕ್ತ ವ್ಯಾಪಾರಕ್ಕೆ ದಾರಿ ಮಾಡಿಕೊಡಿ ಎಂದಾಗ ಕ್ಯಾನ್‌ಕುನ್ ಪರಿಸ್ಥಿತಿ ಉಂಟಾಗಿದೆ. ಐದು ಗ್ರಾಮಗಳೇನು, ಐದು ಸೂಜಿಮೊನೆಯ ಭಾಗ ವನ್ನು ಕೊಡೆನೆಂದಾಗ ವಿಶ್ವ ಎರಡು ಬಣವಾಗಿ ಇಬ್ಭಾಗವಾದುದರಲ್ಲಿ ಆಶ್ಚರ್ಯವೇನು ? ದಂಡಿನಲ್ಲಿ ಸೋದರ ಮಾವನೇ ? ಅಮೆರಿಕದೊಡನೆ, ಅಸಮಾನರ ನಡುವೆ ಸಖ್ಯ ಸಾಧ್ಯವೇ ? ಬಡರಾಷ್ಟ್ರಗಳು ಮೊದಲಿಗೆ ತಮ್ಮ ತಮ್ಮ ನಡುವೆ ಸಹಕಾರ ಕಲಿಯಬೇಕು. ಶ್ರೀಮಂತರು ಈಗಾಗಲೇ ತಮ್ಮದೇ ಸಖ್ಯದ ವ್ಯಾಪಾರ ಕೂಟಗಳನ್ನು ಮಾಡಿಕೊಂಡಿದ್ದಾರೆ. ಅವರಿಗೆ ವಿಶ್ವಕ್ಕೆಲ್ಲಾ ಒಂದೇ ಕೂಟ ರಚಿಸುವುದರಲ್ಲಿ ಪ್ರಾಮಾಣಿಕ ಒಲವಿಲ್ಲ. ಅವರು ಪರರಿಗೆ ಒಡ್ಡುವ ನಿಯಮಗಳನ್ನು ತಾವೇ ಅನುಸರಿಸುವುದಿಲ್ಲ.

## ಮಂತ್ರಿಯ ಕನಸು

ಅಕ್ಟೋಬರ್ ಎರಡರ ರಾತ್ರಿ
ಮಂತ್ರಿಗೊಂದು ಕನಸು ಬಿತ್ತು
ಗಾಂಧಿ ಬಂದು ಕೇಳಿದರು
ನಾನು ಜನರ ಮಧ್ಯೆಯೇ
ಹುಟ್ಟಿ ಬೆಳೆದವನು
(ಜನರ ನಡುವೆಯೇ ಸತ್ತು ಬಿದ್ದವನು)
ಎಲ್ಲರೊಳಗೊಂದಾಗಿ ಬದುಕುತಿದ್ದೆ
ಎಲ್ಲರೊಳಗಿದ್ದೇ ಎಲ್ಲವನು ಮಾಡುತಿದ್ದೆ
ಎಲ್ಲರಿಗೂ ಸಿಗುತ್ತಿದ್ದೆ ಎಲ್ಲೆಂದರಲ್ಲಿ
ಹೀಗೇಕೆ ನೀವು
ನನ್ನ ಮೂರ್ತಿಯನ್ನು ಯಾರಿಗೂ ಸಿಗದ ಹಾಗೆ
ಆಕಾಶಕ್ಕೆ ಏರಿಸಿದ್ದು ?
ನನ್ನ ಹುಟ್ಟು ಸಾವಿನ ದಿನಗಳಂದು
ಕಣ್ಣ ಬಿಟ್ಟುಕೊಂಡು, ತುಟಿ ಕಚ್ಚಿಕೊಂಡು



ಉದ್ದ ಕೋಲೊಂದಕ್ಕೆ ಬಿಳಿಹೂವ ಮಾಲೆ ಸಿಕ್ಕಿಸಿಕೊಂಡು
ಏನಾದರೂ ಮಾಡಿ ನನ್ನ ಕೊರಳಿಗೆ ಹಾಕಲೇಬೇಕೆಂದು
ಸರ್ಕಸ್ಸು ಮಾಡುವುದು ?
ಮಂತ್ರಿ ಹೇಳಿದ
ಕ್ಷಮಿಸಿ ಬಾಪು

ನೀವೀಗ ಎಲ್ಲೆಂದರಲ್ಲಿ ಇರಲಾರಿರಿ
ಎಲ್ಲರೊಂದಾಗಿ ತುಳಿವವರೆ ನಮ್ಮ
ಅದಕ್ಕಾಗಿಯೇ ನಾವು
ಕಲ್ಲು ಸಿಮೆಂಟಿನ ದೊಡ್ಡ ಕಟ್ಟೆ ಕಟ್ಟಿಸಿದ್ದು
ಅದರ ಮೇಲ್ಗಡೆ ನಿನಗಿಂತಲೂ ದೊಡ್ಡದಾದ
ನಿನ್ನ ಮೂರ್ತಿಯನು ಕೆತ್ತಿ ನಿಲ್ಲಿಸಿದ್ದು
ಹತ್ತಿರವೇ ಇದ್ದ ನಿಮ್ಮನ್ನು ಎತ್ತರಕ್ಕೆ ತಳ್ಳಿದ್ದು
ಕತ್ತೆತ್ತಿ ನೋಡುವಂತೆ ಮಾಡಿಕೊಂಡದ್ದು
ಎಲ್ಲಕ್ಕೂ ಮಿಗಿಲಾಗಿ
ನಮಗೆ ಹಿಡಿಸುವುದಿಲ್ಲ
ನೀವು ಎಲ್ಲರೊಳಗೊಂದಾಗಿ ಇರುತಿದ್ದುದು
ಸತ್ತಮೇಲೂ ನಿತ್ಯ ಬದುಕುತ್ತಿರುವುದು

ರಾಜೇಂದ್ರ ಬುರಡಿಕಟ್ಟಿ
ಪರ್ಣಕುಟಿ - ಸಾಲೇಕೊಪ್ಪ, ಸರು ಅಂಚೆ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ - ೫೭೭ ೪೨೨

# ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರಭು

ಆರ್. ವಿ. ಭಂಡಾರಿ

'ಪ್ರಜಾಪ್ರಭುತ್ವ' ಎಂದರೇನು ಎಂಬುದಕ್ಕೆ ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳ ಪ್ರಭುತ್ವ ಎಂಬ ಒಂದು ವ್ಯಾಖ್ಯಾನ ಪ್ರಚಲಿತವಿದೆ. ಅಂದರೆ ಈ ಪ್ರಭುತ್ವ ರಚನೆ ಜನರಿಂದ ಆಗುತ್ತದೆ. ಅದು ಜನಗಳದ್ದೇ ಪ್ರಭುತ್ವವಾಗಿದೆ. ಆದ್ದರಿಂದ ಅದರ ಸಂಘಟನೆಯನ್ನು ಆಗಾಗ ಪ್ರಜೆಗಳ ಒತ್ತಡದಿಂದ ಮಾಡಿಕೊಳ್ಳುತ್ತಾರೆ ಎಂದು. ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ. ಸ್ವತಃ ಪ್ರಜೆ ಇದನ್ನು ಬಲ್ಲ. ನಾವೆಲ್ಲ ಅದರಲ್ಲಿ ಭಾಗವಹಿಸುತ್ತ ಅನುಭೋಗಿಸುತ್ತ ಇದ್ದೇವೆ. ಆದರೆ ಯಾತಕ್ಕಾಗಿ ರಾಜಪ್ರಭುತ್ವ ಹೋಗಿ ಪ್ರಜಾಪ್ರಭುತ್ವ ಬರಬೇಕು – ಎಂಬ ಆಲೋಚನೆ ಇದ್ದುದು, ಇರಬೇಕಾದುದು ತಪ್ಪಲ್ಲ.

### ಗಾಂಧೀಜಿ ದೃಷ್ಟಿಯಲ್ಲಿ

ಮಹಾತ್ಮಾ ಗಾಂಧೀಜಿ ನಮ್ಮ ಸ್ವಾತಂತ್ರ್ಯ ಹೋರಾಟದ ದೊಡ್ಡ ನೇತಾರರು. ನಮ್ಮ ಸ್ವಾತಂತ್ರ್ಯ ಹೋರಾಟದ ಆಶಯ ಮತ್ತು ಆಯಾಮ ಬಹು ವಿಸ್ತಾರವಾದುದು. ನಮ್ಮ ಸ್ವಾತಂತ್ರ್ಯ ಹೋರಾಟವು ಗಾಂಧೀಜಿ ನಡೆಸಿದ ಪ್ರಜಾಪ್ರಭುತ್ವದ ಶಿಕ್ಷಣವೇ ಆಗಿತ್ತು. ಆ ಹೋರಾಟದಲ್ಲಿ ಅಂದಿನ ಪ್ರಜೆ ಸಹಿತ ಭಾಗವಹಿಸಿದರು ಎಂಬುದು ಪ್ರಜಾಪ್ರಭುತ್ವದ ಶಕ್ತಿ ಕೂಡ ಆಗಿದೆ. ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದ ಮೇಲೆ ಭಾರತ ಶಾಂತಿ ಸೌಹಾರ್ದತೆಯ ತಳಹದಿಯ ಮೇಲೆ ಮತಧರ್ಮಗಳ ಸಂಕುಚಿತತೆಯನ್ನು ಮೀರಿದ ಮಾನವತೆ ಮುಖ್ಯವಾಗಿ ಅಂಚಿನಲ್ಲಿರುವ ಮನುಷ್ಯರ ಸರ್ವಾಂಗೀಣ ಉನ್ನತಿಯೇ ಅದರ ಗುರಿಯಾಗಿತ್ತು. ಬಡತನ, ಹಸಿವೆಯ ದುಃಖಾಶ್ರುವನ್ನು ತೊಡೆಯುವುದು ಮುಖ್ಯ ಗುರಿಯಾಗಿತ್ತು. ಅವೆಲ್ಲ ಸತ್ಯ-ಅಹಿಂಸೆ, ಸತ್ಯಾಗ್ರಹಗಳ ಮುಖಾಂತರ ನಡೆಯುವಂತಹದು. ಇದು ಸ್ವಾತಂತ್ರ್ಯ ಹೋರಾಟದ ನೀತಿಯ ಅಂಶಗಳೇ ಆಗಿವೆ.

### ಅಂಬೇಡ್ಕರರ ದೃಷ್ಟಿಯಲ್ಲಿ

''ಜನರ ಬದುಕಿನಲ್ಲಿ ಆರ್ಥಿಕ ಮತ್ತು ಸಾಮಾಜಿಕವಾದ ಬದಲಾವಣೆಯನ್ನು ಜನಕ್ಕೆ ಒಪ್ಪಿತವಾಗಿ ರಕ್ತರಹಿತ ಕ್ರಾಂತಿಯ ಮೂಲಕ ಜಾರಿಗೆ ತರುವುದೇ ಪ್ರಜಾಪ್ರಭುತ್ವವಾಗಿದೆ'' ಎನ್ನುತ್ತಾರೆ ಅಂಬೇಡ್ಕರ್. 'ರಕ್ತರಹಿತ' : ಎನ್ನುವುದು ಅದರ ವಿಧಾನ. ಸಾಮಾಜಿಕ ಬದಲಾವಣೆ ಎಂಬುದು ಈಗ ಇದ್ದಲ್ಲಿಂದ ಅಂದರೆ ಅಸ್ಪೃಶ್ಯತೆ, ಜಾತೀಯತೆ, ಬಡತನ ನಿವಾರಣೆ, ಊಳಿಗಮಾನ್ಯ ಪದ್ಧತಿಯನ್ನು ·ನಾಶ ಮಾಡುವುದು, ಅಲ್ಪಸಂಖ್ಯಾತರ ಮೇಲೂ, ಮಹಿಳೆಯರ ಮೇಲೂ ದಮನ ಇಲ್ಲದಿರುವುದು – ಇವೇ ಮೊದಲಾದವುಗಳಿಂದ ಸಮಾಜವಾದಿ ಸಮಾಜ ರಚನೆಗೆ ಕೊಂಡೊಯ್ಯುವುದು. ಸಮಾನತೆ, ಸೋದರತೆ, ಸ್ವಾತಂತ್ರ್ಯ ಎಂಬುದು ಪ್ರಜಾಪ್ರಭುತ್ವದ ಅವಿಭಾಜ್ಯ ಅಂಗವಾಗಿದೆ.

### ಸ್ವಾತಂತ್ರ್ಯಾನಂತರದ ಐವತ್ತು ವರ್ಷ

ಈ ಮೇಲಿನ ಆಶಯಗಳಲ್ಲಿ ಬಹುಪಾಲು ನೆರವೇರಲಿಲ್ಲ ಎಂಬುದು ನಮಗೆ ಗೊತ್ತಿದೆ. ಬಡತನದ ರೇಖೆಯ ಕೆಳಗೆ ಇರುವವರ ಪ್ರಮಾಣ ಹೆಚ್ಚಾಗುತ್ತಲೇ ಇದೆ. ಎಲ್ಲರಿಗೆ ಉದ್ಯೋಗ ನಿರ್ಮಾಣ ಕೇವಲ ವೇದಿಕೆಯ ಮೇಲಿನ ಭಾಷಣವಾಗಿದೆ. ಸರ್ವರಿಗೆ ಶಿಕ್ಷಣ ಎಂಬುದು ಈಗ ಹಣ ಇದ್ದವರಿಗಷ್ಟೇ ಶಿಕ್ಷಣ ಆಗುವ ದಾರಿಯಲ್ಲಿದೆ. ಶ್ರೀಮಂತಿಕೆ ಹೆಚ್ಚಾಗಿದೆ. ಆದರೆ ಹಂಚಿಕೆ ಆಗಲಿಲ್ಲ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹುಮುಖ್ಯ ಪಾತ್ರ ವಹಿಸಿದ ಅಖಿಲ ಭಾರತೀಯ ಕಾಂಗ್ರೆಸ್ಸೇ ಸ್ವಾತಂತ್ರ್ಯಾನಂತರ ಅಧಿಕಾರದಲ್ಲಿದ್ದರೂ ರಾಷ್ಟ್ರೀಯ ಹಿತಾಸಕ್ತಿ ಎಂಬುದು ಕಡಿಮೆಯಾಗಿ ವರ್ಗದ ಹಿತಾಸಕ್ತಿ ಮೇಲ್ಗೈ ಪಡೆದಿದೆ. ಆದ್ದರಿಂದ ಭೂಸುಧಾರಣೆ ಜಾರಿಗೆ ಬರಲೇ ಇಲ್ಲ. ಕೇರಳ, ಬಂಗಾಳದಲ್ಲಿ ಅದು ಪೂರ್ಣ ಪ್ರಮಾಣದಲ್ಲಿ ನಡೆದಿದ್ದರೆ ಅದು ಅಲ್ಲಿ ಆಡಳಿತ ನಡೆಸಿದ ಕಮ್ಯುನಿಸ್ಟ್ ಸರಕಾರಗಳಿಂದ. ನೆಹರೂ ನಂತರ ಒಂದೇ ಸಮನೆ ಭ್ರಷ್ಟಾಚಾರ ಬೆಳೆಯುತ್ತ ನಡೆದಿದೆ.

ಈ ಅವಧಿಯ ಬಗ್ಗೆ ಖ್ಯಾತ ಇತಿಹಾಸಕಾರ ಕೆ. ಎನ್. ಪಣಿಕ್ಕರ್ ಹೀಗೆ ಹೇಳುತ್ತಾರೆ : ''ಮೊಗಲ ದೊರೆ ಶಹಜಾನ್ ಕಟ್ಟಿಸಿದ ಕೆಂಪುಕೋಟೆಯ ಎತ್ತರದ ವೇದಿಕೆಯಿಂದ ೧೫ ಆಗಸ್ಟ್ ೧೯೪೭ರಂದು ಒಬ್ಬ ಪ್ರಜಾಪ್ರಭುತ್ವವಾದಿ, ಸಮಾಜವಾದಿ ಮತ್ತು ಕೋಮುವಾದದ ವಿರುದ್ಧ ತಾತ್ವಿಕತೆಯನ್ನು ಹೊಂದಿದ ನೇತಾರ ರಾಷ್ಟ್ರವನ್ನುದ್ದೇಶಿಸಿ ಮಾತನಾಡಿದರು. ಈ ಐವತ್ತು ವರ್ಷಗಳ ನಂತರ ಅಂಥದೇ ಚಾರಿತ್ರಿಕವಾದ ಸಂದರ್ಭದಲ್ಲಿ ಅದೇ ಕೆಂಪು ಕೋಟೆಯ ವೇದಿಕೆಯಿಂದ ಮೊದಲಿನದಕ್ಕೆ ತೀರ ವಿರುದ್ಧವಾದ ರಾಜಕೀಯ ನಂಬಿಕೆಗಳನ್ನು ಹೊಂದಿದ ಭಾಷಣವನ್ನು ರಾಷ್ಟ್ರ ಕೇಳಿತು.'' ಇಲ್ಲಿ ಮೊದಲಿನವರು ಜವಾಹರಲಾಲ ನೆಹರು ಮತ್ತು ಎರಡನೆಯವರು ಅಟಲ್ ಬಿಹಾರಿ ವಾಜಪೇಯಿ ಎಂದು ಬಿಡಿಸಿ ಹೇಳಬೇಕಾಗಿಲ್ಲ.

### ಕೋಮುವಾದ ಮತ್ತು ಜಾಗತೀಕರಣ

ಭಾರತದ ಪ್ರಜಾಪ್ರಭುತ್ವಕ್ಕೆ ಹತ್ತಿಕೊಂಡ ಹೊಸ ಅನಿಷ್ಟಗಳೆಂದರೆ ಕೋಮುವಾದ ಮತ್ತು ಜಾಗತೀಕರಣ. ಮೊದಲನೆಯದರ ಹುಟ್ಟು ಹಿಂದೂಮಹಾಸಭೆ ಮತ್ತು ಆರ್.ಎಸ್.ಎಸ್.ಗಳಿಂದಾದರೆ ಎರಡನೆಯದು ಅಮೆರಿಕದ ಸಾಮ್ರಾಜ್ಯಶಾಹಿಯಿಂದಾಗಿದೆ. ಹಾಗೆಯೇ ಕೋಮುವಾದವನ್ನು ಹುಟ್ಟುಹಾಕಿದ್ದರಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಮುಸ್ಲಿಂಲೀಗ್ ಕೂಡ ಸೇರಿದೆ. ಅದು ದೇಶವನ್ನೇ ಒಡೆಯುವುದರಲ್ಲಿ ಪರ್ಯವಸಾನಗೊಂಡದ್ದು ಇತಿಹಾಸವಾಗಿದೆ. ಈಗ ಅದು 'ಹಿಂದೂ' ಕೋಮುವಾದದಿಂದ ಪ್ರಚೋದಿತವಾಗುತ್ತಿದೆ. ಅಸಹಾಯಕ ಹೋರಾಟವೂ ಆಗುತ್ತದೆ. ಅದೇನೇ ಇದ್ದರೂ ಯಾವುದೇ ಕೋಮುವಾದ ಪ್ರಜಾಪ್ರಭುತ್ವಕ್ಕೆ ವಿರೋಧವಾದುದಾಗಿದೆ.

### 'ಹಿಂದುತ್ವ' ಎಂದರೆ ಯಾರದು ?

ನಾವೆಲ್ಲ ಹಿಂದೂ, 'ಹಿಂದುತ್ವ' ನಮ್ಮದು ಎಂದು ಹೇಳಿ ಇದಕ್ಕೆ ವಿರೋಧವಾಗಿದ್ದವರು ಮುಸ್ಲಿಮರು, ಕ್ರಿಶ್ಚಿಯನರು ಎಂದಾಗ, ಹಿಂದುಗಳಿಗೆ ವಿಚಿತ್ರವಾದ ಉನ್ಮಾದ ಉಂಟಾಗುತ್ತದೆ. ಅದರಂತೆ 'ಓಂ' ಧ್ವಜ, ಹಿಂದೂಗಳ ವ್ರತಾದಿಗಳಲ್ಲಿ ಬಳಸುವ ಚಿಹ್ನೆ, ಕೇಸರಿ ಶಾಲು, ಲುಂಗಿ ಇವು ನಮ್ಮ ಸಾಧು-ಸಂತರು ಬಳಸುವ ಬಟ್ಟೆ. ಹಣೆಗೆ ಕುಂಕುಮವೂ ಸಹ ಹಿಂದುಗಳಲ್ಲಿ – ಎಲ್ಲ ಜಾತಿಗಳಿಗೆ ಪವಿತ್ರ. ಅಂದರೆ ಇವು ಹಿಂದೂಗಳ ಸಾಂಸ್ಕೃತಿಕ ಜೀವನದ ಒಳಸಂಬಂಧ ಹೊಂದಿವೆ. ಆದ್ದರಿಂದ ಇವುಗಳನ್ನೇ 'ಹಿಂದುತ್ವ'ವಾದಿಗಳಾದ ಆರ್.ಎಸ್.ಎಸ್., ವಿಶ್ವ ಹಿಂದೂ ಪರಿಷತ್ ಇತ್ಯಾದಿಗಳು ತಮ್ಮದಾಗಿ ಮಾಡಿಕೊಂಡಿದ್ದಾರೆ. ಇದರಿಂದ ಜನಸಾಮಾನ್ಯರಲ್ಲಿ ಧರ್ಮದ ಹೆಸರಿನಿಂದ ಉನ್ಮಾದ ತುಂಬಲು ಆವಾಗ ಸುಲಭ ಸಾಧ್ಯವಾಗಿದೆ. ಮುಸ್ಲಿಂ, ಕ್ರಿಶ್ಚಿಯನ್ನರು ಹಿಂದುಗಳಿಗೆ ಅಡಿಯಾಳುಗಳಾಗಿ ಬಾಳಬೇಕು. ಅವರು ಈ ನೆಲದವರಲ್ಲ. ಅವರು ಎರಡನೆಯ ದರ್ಜೆಯ ಪ್ರಜೆಯಾಗಿ ಬದುಕಲು ಇಚ್ಛಿಸದಿದ್ದರೆ ಮತ್ತು ಸಂವಿಧಾನದತ್ತವಾದ ವಿಶೇಷ ಸೌಲಭ್ಯವನ್ನು ಬಿಟ್ಟುಕೊಡ•ದಿದ್ದರೆ ಅವರು ದೇಶದ್ರೋಹ ಮಾಡಿದಂತೆ. ಅವರನ್ನು ಕೊಲ್ಲುವುದು ಅಧರ್ಮ ಆಗುವುದಿಲ್ಲ. ಹಾಗೆಯೇ ಈ ತತ್ವವನ್ನು ವಿರೋಧಿಸುವವರು ಖೋಟಾ ಸೆಕ್ಯುಲರ್‌ವಾದಿಗಳು. ಇದು 'ಹಿಂದುತ್ವ' ಎಂಬ ಹೆಸರಿನಲ್ಲಿ ಸದ್ಯ ನಡೆಯುತ್ತಿರುವ ಹಿಂದೂ ಕೋಮುವಾದ.

### ಸೆಕ್ಯುಲರ್‌ವಾದಿಗಳು ಹಿಂದು ಧರ್ಮವಿರೋಧಿಗಳೇ ?

ಯಾವುದಕ್ಕೆ ಸೆಕ್ಯುಲರ್ ಎನ್ನುತ್ತಾರೋ ಅದಕ್ಕೆ ಕನ್ನಡದಲ್ಲಿ 'ಧರ್ಮನಿರಪೇಕ್ಷತೆ' ಎನ್ನುತ್ತಾರೆ. ಇಲ್ಲಿ 'ನಿರಪೇಕ್ಷೆ' ಎಂಬ ಪದ ಬಂದಿದೆ. ಆದರೆ ಇದು ಧರ್ಮದ ಕುರಿತ ನಿರಪೇಕ್ಷೆ ಅಲ್ಲ. ಬದಲಾಗಿ ಸರಕಾರ ಎಲ್ಲಾ ಧರ್ಮವನ್ನು ಸಮದೂರ ಇಡುತ್ತದೆ. ಇದು ಸರಕಾರ ಯಾವುದೇ ಮತಧರ್ಮದ ಸರಕಾರ ಅಲ್ಲ ಎಂದು ಮಾತ್ರ ಅರ್ಥ. ಸೆಕ್ಯುಲರ್‌ವಾದಿಗಳು ಹೇಳುವುದೇನೆಂದರೆ ಸಂವಿಧಾನದತ್ತವಾದ ಅವರವರ ಮತಧರ್ಮದ ಆಚರಣೆಗೆ ಸಮಾನ ಅವಕಾಶವಿರಲಿ. ಮಸೀದಿ-ಮಂದಿರಗಳ ವಿಷಯದಲ್ಲಿ ನಮ್ಮ ಸಂವಿಧಾನ ಸ್ವೀಕಾರದ (೧೯೫೦ ಜನವರಿ ೨೬) ದಿನದಿಂದ ಹೇಗೆ ಇದೆಯೋ ಹಾಗೆ ಮುಂದುವರಿಯಲಿ. ವಿವಾದ ಉಂಟಾದರೆ ನ್ಯಾಯಾಲಯದಿಂದ ಬಗೆಹರಿಸಿಕೊಳ್ಳುವ ಧರ್ಮ ಚುನಾವಣೆಯ-ಸರಕಾರದ ವಿಷಯ ಆಗುವುದು ಬೇಡ. ಸೆಕ್ಯುಲರ್‌ವಾದ ಎಂದರೆ ನಾಸ್ತಿಕವಾದ ಎಂದಾಗಲಿ, ಧರ್ಮದಲ್ಲಿ ನಂಬಿಕೆ ಇಲ್ಲದ್ದೆಂದಾಗಲಿ ಅಲ್ಲ. ಎಲ್ಲ ಧರ್ಮಗಳಲ್ಲೂ ಸೆಕ್ಯುಲರ್‌ವಾದಿಗಳಿದ್ದಾರೆ. ಅವರೆಲ್ಲ ಮುಖ್ಯವಾಗಿ ನಾಸ್ತಿಕರಾಗಬೇಕಾದುದಾಗಲಿ, ಹಿಂದೂ ಧರ್ಮ ವಿರೋಧಿಗಳೆಂದಾಗಲಿ ಅಲ್ಲ.

### ಮುಸ್ಲಿಮರು ಹೊರಗಿನವರೇ ?

ಮುಸ್ಲಿಮರು ಹೊರಗಿನಿಂದ ಬಂದವರು ಎಂಬುದು ಹಿಂದುತ್ವವಾದಿಗಳ ಮೊದಲ ವಾದ. ಇದು ಹಟಮಾರಿ ವಾದ. ಜಗತ್ತಿನಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆ ವಲಸೆ ಹೋಗುವುದು, ರಾಜ್ಯ ಕಟ್ಟುವುದು ನಡೆದೇ ಇತ್ತು. ಇದು ಜಾಗತಿಕ ಲಕ್ಷಣ. ಹಾಗಾದರೆ ಆರ್ಯರು ಹೊರಗಿನಿಂದ ಬಂದವರಲ್ಲವೇ? ಅವರಿಗಿಂತ ಹಿಂದೆ ಇಲ್ಲಿ ದ್ರಾವಿಡ ಜನಾಂಗವಿತ್ತು. ಅವರೂ ಸಹ ವಲಸೆ ಬಂದವರೇ ಎಂದೂ ಹೇಳುತ್ತಾರೆ. ಅಂದರೆ ಈ ವಲಸೆ

ಬರುವ ಪ್ರಶ್ನೆ ಕಾಲಗಳ ಅಂತರದಿಂದ ಆಗಿದೆ. ಮುಸ್ಲಿಮರು ತಡವಾಗಿ ಬಂದರು. ಆರ್ಯರು ಮೊದಲೇ ಬಂದರು. ಅಷ್ಟೇ.

ಎರಡನೆಯದೆಂದರೆ ಅವರು ಹಿಂದುಗಳನ್ನು ಮತಾಂತರಿಸಿದರೆಂಬುದು. ಮುಸ್ಲಿಮರು ಒಂದು ರಾಜ್ಯ ಕಟ್ಟುವಾಗ ಹಿಂದುಗಳನ್ನು ಕೊಂದದ್ದನ್ನು ಹಾಗೆ ಹಿಂದೂ ದೇವಾಲಯವನ್ನು ನಾಶ ಮಾಡಿದ್ದು, ಹಾಗೂ ಮತಾಂತರ ಮಾಡಿದ್ದು ಇಲ್ಲವೇ ಎಲ್ಲ ಎಂದು ಯಾವ ಸೆಕ್ಯುಲರ್ ವಾದಿಯೂ ಹೇಳುವುದಿಲ್ಲ. ಆದರೆ ಇದು ರಾಜಕೀಯ ವಾಗಿ ನಡೆದ ಸಂಗತಿ. ಶಿವಾಜಿ ಶೃಂಗೇರಿ ಮಠದ ಮೇಲೆ ನಡೆಸಿದ ದಾಳಿ ಇದೇ ಪ್ರಕಾರದ್ದು. ಆದರೆ ಅಂಥ ಇತಿಹಾಸವನ್ನು ತಿದ್ದುವುದೆಂದರೆ ಹಿಂದೆ ಮುಸ್ಲಿಮರಿಂದ ನಡೆದ ತಪ್ಪಿಗಾಗಿ ಇಂದಿನ ಮುಸ್ಲಿಮರನ್ನು ಕೊಲ್ಲುವುದು ಇತಿಹಾಸದ ತಪ್ಪನ್ನು ಕೈಬದಲಿಸಿ ನಾವು ಮಾಡಿದಂತೆ ಆಗುತ್ತದೆಯೇ ಹೊರತು ನ್ಯಾಯಶೀಲತೆ ಆಗುವುದಿಲ್ಲ. ಹಿಂದೆ ಆರ್ಯ-ದ್ರಾವಿಡರ ಮಧ್ಯೆಯೂ, ಹಿಂದು ಮತ್ತು ಬೌದ್ಧರ ಮಧ್ಯೆಯೂ ಇಂಥ ಕಾಳಗ ನಡೆದಿದೆ. ಬ್ರಾಹ್ಮಣ ಪುಷ್ಯಮಿತ್ರ ಬೌದ್ಧರ ಹತ್ಯಾಕಾಂಡ ವನ್ನು ನಡೆಸಿದ್ದನ್ನು ಇತಿಹಾಸದ ಹೇಳುತ್ತದೆ. ಆದರೆ ನಮ್ಮ ಇತಿಹಾಸನ ಜೀವಶಕ್ತಿಯೆಂದರೆ ಸಂಗ್ರಾಮದಿಂದ ಸೌಹಾರ್ದತೆಯ ವಿಕಾಸವಾದುದಾಗಿದೆ.

ಹಾಗೆಯೇ ಬಲತ್ಕಾರದ ಮತಾಂತರವೂ ಆಗಿದೆ. ಆದರೆ ಅದಕ್ಕಿಂತ ಹೆಚ್ಚಾಗಿ ಹಿಂದೂ ಧರ್ಮದಲ್ಲಿ ಕೆಳಜಾತಿಗಳು ಮತ್ತು ಅಸ್ಪೃಶ್ಯರು ಮೇಲ್ಜಾತಿಗಳ ಶೋಷಣೆಯನ್ನು ತಾಳಲಾರದೆ ಎಲ್ಲರನ್ನು ಸಮಭಾವದಿಂದ ನೋಡುವ ಮುಸ್ಲಿಂ ಧರ್ಮಕ್ಕೆ ಸೇರಿದವರೇ ಆಗಿದ್ದಾರೆ. ಈಗ ಈ 'ಹಿಂದುತ್ವ'ವಾದದ ನೇತೃತ್ವ ವಹಿಸಿದವರು ಆಗಿನ ಶೂದ್ರರನ್ನು ಈಗಿನ ಶೂದ್ರರಿಂದ ಕೊಲ್ಲಿಸುತ್ತಾರೆ, ಗುಜರಾತಿನಲ್ಲಿ ಮಾಡಿದಂತೆ.

ಜಾಗತೀಕರಣ ಅಮೆರಿಕದ ಸಾಮ್ರಾಜ್ಯಶಾಹಿಯನ್ನು ಇಂಗ್ಲಿಷರಿಂದ ಸ್ವತಂತ್ರಗೊಂಡ ರಾಷ್ಟ್ರಗಳ ಮೇಲೆ ಹೇರುವ ಹೊಸ ವಸಾಹತುಶಾಹಿಯಾಗಿದೆ. ನಮ್ಮಲ್ಲಿಯ ರೈತರಿಗೆ ಸಬ್‌ಸಿಡಿಯನ್ನು ಕೊಡುವುದರಿಂದ ಹಿಡಿದು ನಾವು ಯಾವ ಬೆಳೆ ಬೆಳೆಯಬೇಕು ಎನ್ನುವುದನ್ನು ಅಮೆರಿಕ ಹೇಳುತ್ತದೆ. ಜಾಗತೀಕರಣ, ಮುಕ್ತ ಆರ್ಥಿಕ ನೀತಿ ಮತ್ತು ಖಾಸಗೀಕರಣ ಎಂಬುದು ವಾಮನನ ಮೂರು ಹೆಜ್ಜೆ ಯಿದ್ದಂತೆ. ಅದಕ್ಕೆ ತಲೆಕೊಟ್ಟ ಬಲಿ ನಿಜವಾಗಿಯೂ ಬಲಿ.

**ನಾವೇನು ಮಾಡಬೇಕು ?**

ಜಗತ್ತು ಎಂದಿಗೂ ಬಂಜೆಯಾಗುವುದಿಲ್ಲ. ಈಗಲೇ ಜಾಗತೀಕರಣದ ವಿರುದ್ಧ ಜಗತ್ತಿನೆಲ್ಲೆಡೆಯಲ್ಲಿ ಪ್ರತಿರೋಧ ಎದ್ದಿದೆ. ಅಮೆರಿಕಾದಲ್ಲೇ ಇಂಗ್ಲೆಂಡನಲ್ಲೇ ಇದಕ್ಕೆ ಪ್ರತಿರೋಧ ಕಾಣಿಸಿಕೊಂಡಿದೆ. ೨೦೦೦ನೆಯ ವರ್ಷದಲ್ಲಿ ಕಾರ್ಟನಿಗೋದಲ್ಲಿ ನಡೆದ ತಾಟಸ್ಥ್ಯ ರಾಷ್ಟ್ರಗಳ ಸಭೆಯಲ್ಲಿ ಜಾಗತೀಕರಣ - ಅಮೆರಿಕದ ವಸಾಹತೀ ಕರಣದ ವಿರುದ್ಧ ಪ್ರತಿರೋಧ ಮೊಳಗಿತು. ಕ್ಯೂಬಾದಲ್ಲಿ ಇದು ಮುಂದುವರಿದಿದೆ.

ಗ್ರಾಹಕರ ಆಂದೋಲನ, ಪರಿಸರ ಆಂದೋಲನ, ರೈತ ಆಂದೋಲನ, ಸಮಾಜವಾದಿ ಹೋರಾಟ, ದಲಿತ ಹೋರಾಟ ಮುಂತಾದವುಗಳಂತೆ ಕೋಮುವಾದಿ ವಿರುದ್ಧ ಆಂದೋಲನವೂ ಜನತೆಯ ಆಂದೋಲನ ಆಗಬೇಕು. ಜಾಗತೀಕರಣದ ವಿರೋಧದಲ್ಲಿ ಕೇರಳದಲ್ಲಿಯ 'ಪಟ್ಟುವಂ' ಎಂಬ ಪಂಚಾಯತವೊಂದು ಕೈಗೊಂಡ ಒಂದು ಠರಾವಿನ ಮಾದರಿಯನ್ನು ಮ. ಮಹೇಶನ್ ತಮ್ಮ 'ಜಾಗತೀಕರಣ' ಎಂಬ ಪುಸ್ತಕದಲ್ಲಿ ಕೊಟ್ಟಿದ್ದಾರೆ.

''ಈ ಪಂಚಾಯತಿಯ ನಿವಾಸಿಗಳಾದ ನಾವು ಈ ಘೋಷಣೆಯ ಮೂಲಕ ತಿಳಿಸುವುದೇನೆಂದರೆ, ನಮ್ಮ ಪಂಚಾಯತಿಯ ಭೌಗೋಳಿಕ ವ್ಯಾಪ್ತಿಯಲ್ಲಿ ಅರ್ಥಾತ್ ಜನತೆಯ ಜೈವಿಕ ವೈವಿಧ್ಯತೆಯ ರಿಜಿಸ್ಟಿ ವ್ಯಾಪ್ತಿಯಲ್ಲಿ ಪಂಚಾಯತಿಯ ಜನತೆಗೆ ತಿಳಿದಿರುವ ಯಾ ತಿಳಿಯದಿರುವ, ಹೆಸರಿಸುವ ಯಾ ಹೆಸರಿಸದಿರುವ, ಪ್ರಸ್ತುತ ಉಪಯೋಗದಲ್ಲಿರುವ ಯಾ ಉಪಯೋಗ ದಲ್ಲಿಲ್ಲದಿರುವ ಎಲ್ಲಾ ರೀತಿಯ ಜೀವ ಪ್ರಭೇದಗಳ ಮೇಲಾಗಲಿ ಅಥವಾ ವಿಶಿಷ್ಟ ಜೈವಿಕ ಗುಣಗಳನ್ನು ಹೊಂದಿರುವ ವಸ್ತುಗಳ ಮೇಲಾಗಲಿ ಪಂಚಾಯತಿಯ ಪೂರ್ವ ಜ್ಞಾನ ಮತ್ತು ಪೂರ್ವಾನುಮತಿ ಇಲ್ಲದೆ, ಸದ್ಯದಲ್ಲಿ ಯಾರೇ ಆಗಲಿ ಸ್ಥಾಪಿಸಿರುವ ಮತ್ತು ಮುಂದೆ ಸ್ಥಾಪಿಸಲಿರುವ ಸ್ವಾಮ್ಯದ ಹಕ್ಕುಗಳನ್ನು ನಾವು ಸರ್ವಥಾ ಅಂಗೀಕರಿಸುವುದಿಲ್ಲ.''

ಇದು ಜನ ಆಂದೋಲನ ಆಗಬೇಕು. ಆಗ ಪ್ರಜೆ ಸರಕಾರವನ್ನು ಮಣಿಸಬಲ್ಲವರಾಗುತ್ತಾರೆ ಮತ್ತು ಪ್ರಜೆ ಪ್ರಭುವಾಗುವ ಪ್ರಜಾಪ್ರಭುತ್ವ ಫಲಿಸುತ್ತದೆ.

**ಆರ್. ವಿ. ಭಂಡಾರಿ**
ಕೆರೆಕೋಣ, ಅರೆಅಂಗಡಿ - ೫೮೧ ೪೩೦
ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ

# ಭೀಮ ಪ್ರಭೆ

ಅದೆ ತಾನೆ ಅರಳಿ ನಿಂತ
ನಮ್ಮ ಹಟ್ಟಿಯ ಕುಸುಮವೊಂದು
ಬಾಡಿ, ಬತ್ತಿ ಹೋಯಿತು ತನ್ನಷ್ಟಕೆ.

ಸಾಕಿ ಸಲುಹಿದವರ
ಮನ ಮುಟ್ಟಿ ಬೆಳಸಿದವರ
ಮುಗಿಲ ಮುಟ್ಟಿದೆ ದುಃಖ
ಪಾಪ, ಏನು ಏನಾಗಿತ್ತೋ ಅದಕೆ !?

ಅದಿನ್ನೂ ಮೊಗ್ಗಾಗಿರುವಾಗ
ನನಗೆ ಎಂಥದೋ ಹಿಗ್ಗು
ಸ್ವತಃ ನಾನೇ ಎತ್ತಿ ಮುದ್ದಾಡಿದ್ದೆ
ಮನದುಂಬಿ ಹರಸಿ ಹರ್ಷಿಸಿದ್ದೆ.

ಆದರೆ ನನ್ನ ಕಣ್ಣ ಮುಂದೆನೆ
ಕಿತ್ತಿ ಕಳಿಸಿದರದನು ಕೆಂಪು ದೀಪದ ಕೆಳಗೆ



ಬಾಡಿ, ಬತ್ತಿ, ಸತ್ತೇ ಹೋಯಿತು
ಬರಿ ಎರಡೇ ವರ್ಷದ ಒಳಗೆ

ಯಾಕೆ ಹೀಗೆ ???
ಮುದುಕನೊಬ್ಬನ ಕೇಳಿದೆ.

ಶತಮಾನಗಳು ಕಳೆದವು ಹೀಗೆ
ಉತ್ತರ ಸಿಗಲಿಲ್ಲ ಕೊನೆಗೆ
ನಿನ್ನಂತೆಯೇ ಪ್ರಶ್ನೆ ಕೇಳಿ ಕೇಳಿ
ಕುಳಿತಿದ್ದೇನೆ ಈ ಮರದ ಕೆಳಗೆ...

ಉತ್ತರ ಗಟ್ಟಿಗೊಳ್ಳುತ್ತಿತ್ತು ನನ್ನೊಳಗೆ
ಮೂಢ ನಂಬಿಕೆಗೆ ಮೊಳೆ ಹೊಡೆದು
ಕಿತ್ತಿ ಎಸೆಯಬೇಕು, ನೂರು ದೇವರನ್ನೆಲ್ಲ ಹೊಳೆಗೆ
ಅರಿವು ಹೊತ್ತಿ ಉರಿಯಬೇಕು ನಮ್ಮೊಳಗೆ.
ಬೆಳಗಬೇಕು ಭೀಮ ಪ್ರಭೆ

**ವೈ ಪಿ. ಹೊನವಾಡ**
ಸಹಾಯಕರು, ಅಂಚೆ ವಿಂಗಡಣಾ ಕಛೇರಿ, ಬೆಳಗಾವಿ - ೫೯೦ ೦೦೧

# ಕರಗಿದ ಅರಣ್ಯ – ನಶಿಸುತ್ತಿರುವ ವನ್ಯಜೀವ

## ವನ್ಯಜೀವಿ ಸಪ್ತಾಹ ಅ ೧-೭

**ಅ**ಕ್ಟೋಬರ್ ತಿಂಗಳು ಪರಿಸರ-ವನ್ಯಜೀವಿಗಳ ಬಗ್ಗೆ ಆಸಕ್ತಿ ಇರುವವರಿಗೆ ಒಂದು ಮುಖ್ಯವಾದ ಮಾಸ. ಮೊದಲ ವಾರವನ್ನು ವನ್ಯಜೀವಿ ಸಪ್ತಾಹವೆಂದೂ, ಅಕ್ಟೋಬರ್ ೩ ಅನ್ನು ವಿಶ್ವ ಜೀವಾವಾಸ ದಿನವೆಂದೂ, ಅಕ್ಟೋಬರ್ ನಾಲ್ಕನ್ನು ವಿಶ್ವ ಪ್ರಾಣಿ ಕಲ್ಯಾಣ ದಿನವನ್ನಾಗಿಯೂ ಹಾಗೂ ಅಕ್ಟೋಬರ್ ಹದಿಮೂರನ್ನು ನೈಸರ್ಗಿಕ ವಿಪತ್ತುಗಳನ್ನು ಕಡಿಮೆ ಮಾಡಲು ಅಂತರ ರಾಷ್ಟ್ರೀಯ ದಿನ ಎಂದು ದಶಕಗಳ ಕಾಲದಿಂದಲೂ ಆಚರಿಸಿಕೊಂಡು ಬರಲಾಗುತ್ತಿದೆ. ಆದರೆ, ಪರಿಸರ ಸಂರಕ್ಷಣೆಯಲ್ಲಿ ನೈಜ ಆಸಕ್ತಿ ಇರುವವರಿಗೆ ಇವೆಲ್ಲವೂ ಬೂಟಾಟಿಕೆಯಾಗಿಯೇ ಕಾಣುತ್ತವೆ. ಇಷ್ಟೆಲ್ಲಾ ಆಚರಣೆಗಳಿದ್ದೂ, ಸಂರಕ್ಷಣೆಗಾಗಿ ಭಯ ಹುಟ್ಟಿಸುವ ಮಟ್ಟದಲ್ಲಿ ಹಣ ವ್ಯಯವಾಗುತ್ತಿದ್ದರೂ ನಮ್ಮ ಪರಿಸರದ ಸ್ಥಿತಿ ದಿನೆ ದಿನೇ ಅಧೋಗತಿಗಿಳಿಯುತ್ತಿದೆ. ಒತ್ತುವರಿಯಾದ ಅರಣ್ಯವನ್ನು ಸಕ್ರಮಗೊಳಿಸುವುದಿಲ್ಲ ಎಂದ ಸರ್ಕಾರ, ೧೯೫೦ರಿಂದ ಈಚೆಗೆ ಮೂರು ಬಾರಿ ಅಂತಹ ಅಕ್ರಮ ಒತ್ತುವರಿಯನ್ನು ಸಕ್ರಮಗೊಳಿಸಿದೆ! ಈಗ ಇನ್ನೊಂದಕ್ಕೆ ಸಜ್ಜಾಗುತ್ತಿದೆ! ಇಂತಹ ಅವಾಸಸ್ಥಾನ ನಾಶದಿಂದ ವನ್ಯಜೀವಿಗಳಿಗೆ ಮತ್ತೆ ಚೇತರಿಸಿಕೊಳ್ಳಲಾಗದಂತಹ ಹೊಡೆತ ಬೀಳುತ್ತದೆ. ನೇರವಾಗಿ ಪ್ರಾಣಿಗಳನ್ನು ಕೊಲ್ಲುವುದಕ್ಕಿಂತ ಇಂತಹ ಅವಾಸಸ್ಥಾನ ನಿರ್ಮೂಲನವೇ ಹೆಚ್ಚಿನ ಹಾನಿ ಮಾಡುತ್ತದೆ ಎಂಬುದನ್ನು ಡಾ॥ ಉಲ್ಲಾಸ ಕಾರಂತರ ಸಂಶೋಧನೆ ತೋರಿಸಿದೆ.

ಇದರ ಜೊತೆಗೆ ಕಳ್ಳಬೇಟೆ, ಮರಗಳ್ಳತನ, ಮಾನವನಿಂದಾಗುವ ಕಾಡ್ಗಿಚ್ಚು, ದೊಡ್ಡ ಯೋಜನೆ ಹಾಗೂ ವ್ಯವಸಾಯಕ್ಕೆಂದು ತೆರವುಗೊಳಿಸುತ್ತಿರುವ ಅರಣ್ಯ ಇವುಗಳ ಒಟ್ಟಾರೆ ಪರಿಣಾಮವೇ ನಮ್ಮ ಇಂದಿನ ಬರ! ಮಳೆಗಾಗಿ ಹಾಹಾಕಾರ! ಮಳೆಗಾಗಿ ಕಾಡುಗಳ ಸಂರಕ್ಷಣೆಗಾಗಿ ಯಾವುದೇ ದೂರದೃಷ್ಟಿಯ ಯೋಜನೆಗಳನ್ನು ಮಾಡದ ಕೋಡಂಗಿ ಸರ್ಕಾರ ತಾತ್ಕಾಲಿಕ ಹಾಗೂ ಮೋಡ ಇರುವಲ್ಲಿ ಮಾತ್ರ ಫಲಪ್ರದವಾಗುವ ಮೋಡ ಬಿತ್ತನೆಯಂತಹ ಯೋಜನೆಯನ್ನು ಕೈಗೆತ್ತಿಕೊಂಡಿದೆ.

ಅರಣ್ಯ-ವನ್ಯಜೀವಿ-ಮಳೆ-ಸಮೃದ್ಧಿ ಒಂದು ಸರಪಳಿ. ಇದು ಶಿಥಿಲವಾಗುತ್ತಿರುವಾಗ ಬರಕ್ಕಿಂತ ಹೆಚ್ಚಿನದೇನನ್ನೂ ನಿರೀಕ್ಷಿಸಲಾಗದು! ಇಲ್ಲಿ ಮುಖ್ಯವಾದ ಸಮಸ್ಯೆ ರಾಜಕೀಯ ಇಚ್ಛಾಶಕ್ತಿಯ ಕೊರತೆ. ದೂರದೃಷ್ಟಿಯ ಕೊರತೆ. ಇದಕ್ಕೆ ಜ್ವಲಂತ ಉದಾಹರಣೆ ಕಬಿನಿ ಯೋಜನೆ! ಮೊದಲು ಇದಕ್ಕೆ ಆಯ್ಕೆಯಾಗಿದ್ದ ಗುಡ್ಡಗಳ ನಡುವಿನ ಸೂಕ್ತ ಸ್ಥಳವನ್ನು ನಮ್ಮ ರಾಜಕೀಯ ಶಕ್ತಿಗಳು ಹೆಚ್ಚು ಕಾಡು ನಾಶವಾಗುವಂತಹ (ಹನ್ನೆರಡು ಸಾವಿರ ಹೆಕ್ಟೇರ್ ಕಾಡು ನಾಶ!) ಕಾಕನಕೋಟೆ ಬೇಗೂರು ವಲಯಕ್ಕೆ ಸ್ಥಳಾಂತರಿಸಿತು! ಈಗ ಇದರಲ್ಲಿ ಹೂಳುತುಂಬಿ ರೋಗಗಳ ತವರಾಗಿರುವುದು ಎಲ್ಲರಿಗೂ ತಿಳಿದ ವಿಷಯ.

ಇದು ಸಮಸ್ಯೆಯ ಒಂದು ಮಗ್ಗುಲಾದರೆ ಜನಸಾಮಾನ್ಯರಲ್ಲಿನ ಅಜ್ಞಾನ ಇನ್ನೊಂದು ತೊಡಕು. ಎಲ್ಲರಿಗೂ ತೇಗವೇ ಬೇಕು! ಇಂದು ಇತರ ಮರಗಳನ್ನೂ ವೈಜ್ಞಾನಿಕ ರೀತಿಗಳಿಂದ ತೇಗದ ಅಂತಸ್ತಿಗೆ ಏರಿಸಬಹುದಾದರೂ ಅವನ್ನು ನಮ್ಮ ಜನ ಕೊಳ್ಳರು! ಹೀಗಾಗಿ ಅನಾವಶ್ಯಕವಾಗಿ ಕಾಡು ಕಡಿದು ಪ್ಲಾಂಟೇಶನ್ ಮಾಡುವ ಪರಿಸ್ಥಿತಿ ಉಂಟಾಗಿದೆ.

ಯಾವುದೇ ದೂರದೃಷ್ಟಿಯ ಯೋಜನೆಯಲ್ಲಿ ಪರಿಸರದ ವಿಷಯ ಪ್ರಸ್ತಾಪವಾಗುವುದೇ ಇಲ್ಲ! ಕಾಡುಗಳು ನಮ್ಮ ಜೀವದುಸಿರು ಎಂಬುದನ್ನು ಮರೆತೇ ಯೋಜನೆಗಳನ್ನು ಹಾಕಲಾಗುತ್ತದೆ! ನಮ್ಮ 'ನ ಭೂತೋ ನ ಭವಿಷ್ಯತಿ'

**ಕೆ. ಎಸ್. ನವೀನ್**

ವಿಜ್ಞಾನಿ – ಸಮರ್ಥ ಆಯೋಜಕ ಇತ್ಯಾದಿ ಬಿರುದಾಂಕಿತ ರಾಷ್ಟ್ರಪತಿ ಮಾನ್ಯ ಡಾ॥ ಅಬ್ದುಲ್ ಕಲಾಂ ಅವರ ಕೃತಿ 'ಇಂಡಿಯಾ : ೨೦೨೦'ರಲ್ಲಿ ಪರಿಸರ ಸಂರಕ್ಷಣೆಯ ಸೊಲ್ಲೇ ಇಲ್ಲ ಎಂದರೆ ನಮ್ಮ ವಿದ್ಯಾವಂತರಲ್ಲೂ ಈ ಬಗ್ಗೆ ಇರುವ ಅಜ್ಞಾನದ ಪ್ರಮಾಣವನ್ನು ಊಹಿಸಬಹುದು!

ಅತ್ಯಂತ ದಕ್ಷ ಆಡಳಿತ ಹಾಗೂ ವೈಜ್ಞಾನಿಕ ಪದ್ಧತಿಗಳಿಂದ ಅರಣ್ಯ ಸಂರಕ್ಷಣೆ ಇಂದಿನ ಅಗತ್ಯ. ಈ ಹಿನ್ನಲೆಯಲ್ಲಿ ''ಹೊಸತು'' ಅರಣ್ಯ ಸಂರಕ್ಷಕರ ಪರಂಪರೆಯಲ್ಲೇ ಬೆಳೆದುಬಂದ ಹಿರಿಯ ಅರಣ್ಯ ಮುಖ್ಯ ಸಂರಕ್ಷರಾಗಿ ನಿವೃತ್ತರಾಗಿರುವ ಹಾಗೂ ಕನ್ನಡಕ್ಕೆ ''ಅರಣ್ಯ ಶಾಸ್ತ್ರ'', ''ವನಸಿರಿ'', ''ಖಗಸಿರಿ''ಗಳಂತಹ ಪುಸ್ತಕಗಳನ್ನು ನೀಡಿದ ಶ್ರೀ ಅಜ್ಜಂಪುರ ಕೃಷ್ಣಸ್ವಾಮಿಯವರನ್ನು ಸಂದರ್ಶಿಸಿತು. ಅವರೊಂದಿಗಿನ ಮಾತುಕತೆ ಒಂದು ರಸಾನುಭವ. ವಿಷಯದ ಒಳ-ಹೊರಗನ್ನು ಚೆನ್ನಾಗಿ ಬಲ್ಲ ಇವರು ಇಂದಿನ ಅರಣ್ಯ-ವನ್ಯಜೀವಿ ಸಮಸ್ಯೆಗಳು ಅಪರಿಹಾರ್ಯ ಅಲ್ಲ. ನಿಷ್ಠ ಅಧಿಕಾರಿಗಳಿಗೆ ರಕ್ಷಣೆ ಕೊಟ್ಟು, ಒತ್ತುವರಿ ಸಕ್ರಮವನ್ನು ನಿಲ್ಲಿಸಿದಲ್ಲಿ ನಮ್ಮ ಭವಿಷ್ಯ ಸುಂದರವಾಗುವಲ್ಲಿ ಸಂದೇಹವಿಲ್ಲ ಎನ್ನುತ್ತಾರೆ. ಎಂಬತ್ತರ ಹರೆಯದ ಇವರು ತಮ್ಮ ಮನೆಯ ಮುಂದೆ ''ಕಿರುವನ''ವನ್ನು ಅಭಿವೃದ್ಧಿಪಡಿಸಿ ಕಣ್ಣೆವೆಯಲ್ಲಿಟ್ಟುಕೊಂಡು ಕಾಪಾಡುತ್ತಿದ್ದಾರೆ. ನಗರದಲ್ಲಿ ಇಂತಹ ೧೫೦೦ ಮಿನಿ ಅರಣ್ಯಗಳು ಬಂದಲ್ಲಿ ನಗರದ ವಾಯುಮಾಲಿನ್ಯ ಹಿಡಿತದಲ್ಲಿ ಬರುತ್ತದೆಂದು ಹೇಳುತ್ತಾರೆ. ''ನನ್ನಲ್ಲಿ ಗಿಡ ಕೇಳಿಕೊಂಡು ಬರುವವರನ್ನು ನಾನು ದೇವರೆಂದುಕೊಂಡಿದ್ದೇನೆ'' ಎನ್ನುವ ಅವರ ಮಾತಿನಲ್ಲಿ ಅವರ ನಿಷ್ಠೆ, ಆಸಕ್ತಿ ಮಡುಗಟ್ಟಿವೆ. ಅವರ ಮಿನಿ ಅರಣ್ಯದಲ್ಲಿನ ಒಂದು ತ್ರಿಪದಿ :


ಅಜ್ಜಂಪುರ ಕೃಷ್ಣಸ್ವಾಮಿ

ಒಂದು ಮರ ಬಿದ್ದಲ್ಲಿ
ಹತ್ತು ಸಸಿಗಳು ಎದ್ದಲ್ಲಿ
ನಮ್ಮ ಭವಿಷ್ಯ ಅದರಲ್ಲಿ....

### ಸಂದರ್ಶನದ ಭಾಗ

**ಹೊ :** ಸರ್, ತಾವು ಅರಣ್ಯ ಸಂರಕ್ಷಕರ ಪರಂಪರೆಯಲ್ಲೇ ಬಂದವರು. ಅಂದಿನ ಪರಿಸರ ಹಾಗೂ ವನ್ಯಜೀವಿಗಳ ಬಗ್ಗೆ ಸ್ವಲ್ಪ ಹೇಳುತ್ತೀರಾ ?

**ಕೃ:** ನಮ್ಮ ತಾತ ಅರಣ್ಯ ಪಾಲಕರಾಗಿದ್ದರು: ೧೮೬೦-೭೦ರಲ್ಲಿ ಅಸ್ಸಾಂ ಮತ್ತಿತರ ರಾಜ್ಯಗಳಲ್ಲಿ. ನಂತರ ನಮ್ಮ ತಂದೆಯವರೂ ಅರಣ್ಯ ಸೇವೆಗೆ ಸೇರಿದರು. ನಾನು ಅವರೊಂದಿಗೆ ಕಾಡು ತಿರುಗುತ್ತಿದ್ದೆ. ಆಗ ನನಗೆ ಏಳೆಂಟು ವರ್ಷ ವಯಸ್ಸು. ಶಿವಮೊಗ್ಗ ಕಡೆಯ ಕಾಡುಗಳೆಲ್ಲ ನಮ್ಮ ತಂದೆಯೊಂದಿಗೆ ಸಂಚರಿಸುತ್ತಿದ್ದೆ. ಅತ್ಯಂತ ಸಮೃದ್ಧವಾದ ಕಾಡುಗಳು; ಅವನ್ನು ವರ್ಣಿಸುವುದು ಹೇಗೆ ?! ರಾತ್ರಿ ಗಸ್ತು ತಿರುಗುವಾಗ ಹುಲಿ ಚಿರತೆಗಳು ನಿರ್ಭೀತವಾಗಿ ಓಡಾಡುತ್ತಿರುವುದು ಸಾಮಾನ್ಯ ದೃಶ್ಯವಾಗಿರುತ್ತಿತ್ತು. ಜನರಲ್ಲೂ ಕಾಡಿನ ಬಗ್ಗೆ ಪ್ರೀತಿ-ಭಕ್ತಿ ಇತ್ತು. ಕಾನೂನಿನ ಅಂಜಿಕೆ ಇತ್ತು. ಅರಣ್ಯವನ್ನು ಬಳಸುವುದು ಇತ್ತಾದರೂ ಕಾಡಿನ ಸಮೃದ್ಧಿಗೆ ಹೋಲಿಸಿದಾಗ ಅದು ನಗಣ್ಯವಾಗಿತ್ತು.

**ಹೊ :** ಇಂದು, ಪರಿಸರ ಅನೇಕ ಒತ್ತಡಗಳಿಂದ ನರಳುತ್ತಿರುವಾಗ ಅರಣ್ಯ ಹಾಗೂ ವನ್ಯಜೀವಿಗಳ ಸ್ಥಿತಿ ಹೇಗಿದೆ ?

**ಕೃ:** ಅರಣ್ಯನಾಶ ಪರಿಗಣಿಸುವ ಮಟ್ಟಕ್ಕೆ ಬೆಳೆದಿದ್ದು ೧೯೧೪ ಹಾಗೂ ೧೯೩೯ರ ಪ್ರಪಂಚ ಯುದ್ಧಗಳಿಂದ ಮರಮಟ್ಟುಗಳಿಗೆ ಬೇಡಿಕೆ ಏಕಾಏಕಿ ಏರಿದಾಗ ಮಿತಿಮೀರಿ ಅರಣ್ಯನಾಶ ಮೊದಲಾಯಿತು. ಸ್ವಾತಂತ್ರ್ಯಾನಂತರ ದೊಡ್ಡ ಯೋಜನೆಗಳು, ಕೃಷಿ ಇತ್ಯಾದಿಗಳಿಂದ ಅತಿಯಾದ ಹಾನಿಯಾಯಿತು. ಇಲ್ಲಿ ನಾನು ಅಭಿವೃದ್ಧಿ ಬೇಡ ಎನ್ನುವವನಲ್ಲ, ಆದರೆ, ವಿವೇಚನೆಯುಕ್ತ ಅಭಿವೃದ್ಧಿ ಕಾಡನ್ನು ಉಳಿಸುತ್ತಿತ್ತು. ಹಾಗಾಗದಿದ್ದದ್ದು ದುರಂತ! ಹಾಗಾಗಿ ಇಂದಿನ ಸ್ಥಿತಿ. ಆದರೆ, ಇದನ್ನು ಖಂಡಿತವಾಗಿ ಹಿಮ್ಮೊಗವಾಗಿಸಬಹುದು. ರಾಜಕೀಯ ಇಚ್ಛಾಶಕ್ತಿ ಬೇಕು ಅಷ್ಟೆ.

**ಹೊ :** ಸಾಕಷ್ಟು ನಿರೀಕ್ಷೆ ಹಾಗೂ ಉತ್ಸಾಹ ತಂದ ಯೋಜನೆ ''ಪ್ರಾಜೆಕ್ಟ್ ಟೈಗರ್'' – ಇದರ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿ.

**ಕೃ:** ಇದೊಂದು ಉತ್ತಮ ಯೋಜನೆ. ಶೋಚನೀಯ ಮಟ್ಟದಲ್ಲಿದ್ದ ಹುಲಿಗಳ ಸಂಖ್ಯೆ ಏರಿದ್ದು ನಿಜ. ಇದರಲ್ಲಿ ಸಾಧಿಸಬೇಕಾಗಿರುವುದು ಬೇಕಾದಷ್ಟಿದೆ.

**ಹೊ :** ಅರಣ್ಯ ರಕ್ಷಣೆ ನಿಟ್ಟಿನಲ್ಲಿ ಇಲಾಖೆಗೆ ಇರುವ ನೈಜ ಸಮಸ್ಯೆಗಳೇನು ?

**ಕೃ:** ನಮ್ಮಲ್ಲಿ ತರಬೇತಿ ಹೊಂದಿದ, ನಿಷ್ಠಾವಂತ ಅಧಿಕಾರಿಗಳೂ, ನೌಕರರೂ ಇದ್ದಾರೆ. ಅವರಿಗೆ ಅಗತ್ಯ

ಜೊತೆಗೆ, ಪ್ರೋತ್ಸಾಹ ಹಾಗೂ ಅವಕಾಶಗಳನ್ನು ಕಲ್ಪಿಸಿದರೆ ಬೇಕಾದಷ್ಟು ಸಾಧನೆ ಆಗುತ್ತದೆ. ಸಿಬ್ಬಂದಿ ಹಾಗೂ ಸೌಲಭ್ಯಗಳ ಕೊರತೆಯೂ ಇದೆ.

**ಹೊ :** ನಮ್ಮಲ್ಲಿ ರಕ್ಷಣಾ ಕಾರ್ಯಕ್ರಮಗಳು ಹುಲಿಯಂತಹ ದೊಡ್ಡ ಪ್ರಾಣಿಗಳಿಗೇ ಸೀಮಿತವಾಗಿದೆ. ಈಗ Great Indian bustard ಗಂಡಾಂತರದ ಅಂಚಿನಲ್ಲಿದೆ. ಕೆಲವೇ ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಕಾಣಿಸುತ್ತಿದ್ದ Lasser florican ಇಂದು ಕರ್ನಾಟಕದಲ್ಲೇ ಕಾಣುತ್ತಿಲ್ಲ. ಇವುಗಳ ರಕ್ಷಣೆ ಹೇಗೆ ?

**ಕೃ:** ಇದಕ್ಕೆ ಅತ್ಯಂತ ಬಿಗಿಯಾಗಿರುವ ಅರಣ್ಯ ನೀತಿಯನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವುದೊಂದೆ ಮಾರ್ಗ! ಈ ಪಕ್ಷಿಗಳ ಆವಾಸಸ್ಥಾನ ರಕ್ಷಣೆಯಾದಲ್ಲಿ ಅವು ಮೊದಲಿನ ಸ್ಥಿತಿಗೆ ಬರುತ್ತವೆ. ನಮ್ಮ ಕೆರೆಗಳ ದುಸ್ಥಿತಿಯೇ ಈ ಅವಸ್ಥೆಗೆ ಕಾರಣ.

**ಹೊ :** ನಮ್ಮ ರಕ್ಷಿತ ಅರಣ್ಯಗಳಲ್ಲಿರುವ ಬುಡಕಟ್ಟು ಜನಾಂಗದ ಭವಿಷ್ಯವೇನು ? ಕೆಲವು ಸರ್ಕಾರೇತರ ಸಂಸ್ಥೆಗಳೂ ಇವನ್ನು ಅರಣ್ಯದಿಂದ ಹೊರಗಿಡಬೇಕೆಂದು ವಾದಿಸುತ್ತವೆ ?

**ಕೃ:** ಇಲ್ಲ, ಇವರನ್ನು ಅರಣ್ಯದೊಳಗೆ ಇರಲು ಬಿಡಬೇಕು. ಇವರಿಗೆ ಕಳ್ಳತನ ಕಲಿಸಿದವರು ಹೊರಗಿನ ''ನಾಗರಿಕರು'' ! ಈ ಬುಡಕಟ್ಟು ಜನಾಂಗ, ಅವರ ಆಚಾರ ಎಲ್ಲವೂ ನಮ್ಮ ಸಂಸ್ಕೃತಿಯ ಭಾಗ. ಅದನ್ನು ರಕ್ಷಿಸಲೇಬೇಕು. ಯಾರೋ ಒಬ್ಬಿಬ್ಬರು ಕಳ್ಳರಿದ್ದರೆ ಅವರನ್ನು ಶಿಕ್ಷಿಸೋಣ. ಆದರೆ, ಆ ಜನಾಂಗವನ್ನೇ ಕಾಡಿನಿಂದ ಹೊರಹಾಕುವುದು ಅಕ್ರಮ. ಅವರ ಪ್ರತಿಭೆಯನ್ನು ಬಳಸಿಕೊಳ್ಳಬೇಕು. ಅವರು ಆನೆ ಬರುವ ಸೂಚನೆಯನ್ನು ನೀಡುವಂತೆ ಬೇರೆ ಯಾವುದೇ ಸುಶಿಕ್ಷಿತ ವಿಜ್ಞಾನಿ ನೀಡಲಾರ ! ಇರುಳರ ಹಾವಿನ ಜ್ಞಾನ ನಮಗಿನ್ನೂ ಹರಿಯಬೇಕಾಗಿದೆ...



ಕಿರುವನದಲ್ಲಿ ಲೇಖಕರೊಂದಿಗೆ

**ಹೊ :** ನದಿಜೋಡಣೆಯ ಬಗ್ಗೆ.....

**ಕೃ:** ಇದರ ಬಗ್ಗೆ ಅತ್ಯಂತ ನಿಖರವಾದ ವರದಿ ತಯಾರಿಸದೆ ಏನನ್ನಾದರೂ ಮಾಡುವುದು ಮೂರ್ಖತನವಾಗುತ್ತದೆ. ಇದು ಸಾಧ್ಯ. ಹಿಂದೆ ವಿಶ್ವೇಶ್ವರಯ್ಯನವರೂ ಹೇಳಿದ್ದರು ನಿಜ. ಆದರೆ, ಇದರ ಸಾಧಕ-ಬಾಧಕಗಳನ್ನು ನೋಡಿ ಮಾಡಬೇಕಾಗುತ್ತದೆ.

**ಹೊ :** ಅರಣ್ಯ-ವನ್ಯಜೀವಿ-ಮಳೆ ಚಕ್ರವನ್ನು ಪೋಷಿಸದೆ, ಸರ್ಕಾರ ಕೈಗೊಂಡಿರುವ ಮೋಡ ಬಿತ್ತನೆಯಿಂದ ನೈಸರ್ಗಿಕ ಸಮತೋಲನದ ಮೇಲೆ ಯಾವ ಪರಿಣಾಮ ಬೀರುತ್ತದೆ ?

**ಕೃ:** ಇದು ಮೋಡ ಇದ್ದಲ್ಲಿ ಮಾತ್ರ ಆಗುವಂತಹದ್ದು. ಅಂತಹ ತಪ್ಪೇನು ನನಗೆ ಕಾಣಿಸುತ್ತಿಲ್ಲ. ಆದರೆ, ಮೋಡಕ್ಕೆ ಮೂಲವಾದ ಅರಣ್ಯವನ್ನು ಸಂರಕ್ಷಿಸುವುದು ಇಂದಿನ ಅಗತ್ಯ.

**ಹೊ :** ಕೊನೆಯದಾಗಿ, ಇಂದಿನ ನಗರ ಪ್ರದೇಶದಲ್ಲಿನ ಅರಣ್ಯ...

**ಕೃ:** ಇದೇ ಈಗ ನನ್ನ ಮುಖ್ಯ ಯೋಜನೆ. ಬೆಂಗಳೂರಿನಂತಹ ನಗರಕ್ಕೆ ಒಂದು ಲಾಲ್‌ಬಾಗ್, ಒಂದು ಕಬ್ಬನ್ ಪಾರ್ಕ್ ಏನೂ ಅಲ್ಲ. ಒಂದು ಅರ್ಧ, ಮುಕ್ಕಾಲು ಎಕರೆ ಅರಣ್ಯಗಳು – ಖಂಡಿತವಾಗಿ ಈಗ ನಗರಸಭೆ ಮಾಡುತ್ತಿರುವ ಒಂದು ದಿಬ್ಬ ಮಾಡಿ ವಿದೇಶಿ ಹುಲ್ಲು, ಅಲಂಕಾರಿಕ ಸಸ್ಯಗಳ ಉದ್ಯಾನ ಅಲ್ಲ – ಇಂದಿನ ತುರ್ತು ಅಗತ್ಯಗಳು. ಇಂತಹ ಮಿನಿ ಅರಣ್ಯಗಳಲ್ಲಿ ಹೊಂಗೆ, ಬೇವು, ಬಿದಿರು ಇರತಕ್ಕದ್ದು. ಇಂತಹ ಸುಮಾರು ೧೫೦೦ ಅರಣ್ಯಗಳು ಬೇಕು.

**ಹೊ :** ಇದುವರೆಗೂ ಅರಣ್ಯ-ವನ್ಯಜೀವಿಗಳ ಸ್ಥಿತಿಗತಿಗಳ ಬಗ್ಗೆ ಮಾಹಿತಿ ನೀಡಿ ನಮ್ಮ ಪ್ರಶ್ನೆಗಳಿಗೆ ಉತ್ತರಿಸಿದ್ದಕ್ಕಾಗಿ ಧನ್ಯವಾದಗಳು.

**ಕೃ:** ನಮಸ್ಕಾರ. ಲೇಖನಿಯ ಶಕ್ತಿಯ ಇರುವ ನೀವುಗಳು ಅದನ್ನು ಇಂದಿನ ಅರಣ್ಯಗಳನ್ನು ಸಮರ್ಥವಾಗಿ ಉತ್ತಮಪಡಿಸಿಕೊಳ್ಳಲು ಬಳಸಿ.

*ಕೆ. ಎಸ್. ನವೀನ್*
೨/೩, ಒಬಳಪ್ಪ ಕ್ರಾಸ್, ಚಿಕ್ಕಮಾವಳ್ಳಿ, ಬೆಂಗಳೂರು - ೫೬೦ ೦೦೪

## ಸಾದರ ಸ್ವೀಕಾರ

**ಆನೆ ಬಂತೊಂದಾನೆ** (ಮಕ್ಕಳ ಕಥೆ)
*ಕಂನಾಡಿಗಾ ನಾರಾಯಣ*
*ಪುಟ : ೪೦* *ಬೆಲೆ ರೂ : ೧೫*

**ಬೆಳ್ಳಕ್ಕಿ ಮತ್ತು ಬುಲ್‌ಬುಲ್** (ಮಕ್ಕಳ ಕಥೆಗಳು)
*ಗಣೇಶ ಪಿ. ನಾಡೋರ*
*ಪುಟ : ೮೦* *ಬೆಲೆ ರೂ : ೩೦*

**ಕಥೆ ಹೇಳುವ ಸಮಯ** (ಮಕ್ಕಳ ಜನಪದ ಕಥೆಗಳು)
*ಬೇದ್ರೆ ಎನ್. ಮಂಜುನಾಥ*
*ಪುಟ : ೧೦೪* *ಬೆಲೆ ರೂ : ೩೫*

**ಸಿವಿಲ್ ಇಂಜಿನಿಯರಿಂಗ್ ಒಂದು ಪರಿಚಯ**
*ಎಂ. ಜಿ. ಶ್ರೀನಿವಾಸನ್*
*ಪುಟ : ೧೭೮* *ಬೆಲೆ ರೂ : ೧೬೦*

Applied English Course (ಕೈಪಿಡಿ)
*ಬೇದ್ರೆ ಎನ್. ಮಂಜುನಾಥ*
*ಪುಟ : ೩೭೬* *ಬೆಲೆ ರೂ : ೧೫೦*
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

**ಭಾವ ದೀಪಿಕಾ** (ಭಾವ ಗೀತೆಗಳು)
*ಮಾನಸ*
*ಪು : ೬೪* *ಬೆಲೆ ರೂ : ೩೦*

**ಇತಿಹಾಸದ ಪಿಸುಮಾತು** (ಕವನ ಸಂಕಲನ)
*ಮಂಜುಳಾ ಮಾನಸ*
*ಪುಟ : ೪೮* *ಬೆಲೆ ರೂ : ೩೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ತನು ಮನು ಪ್ರಕಾಶನ, ತೃಪ್ತಿ, ೪೨, ಜಿ ಬ್ಲಾಕ್**
೩ನೇ ತಿರುವು, ರಾಮಕೃಷ್ಣ ನಗರ,
ಮೈಸೂರು - ೨೨

**ಒಬ್ಬ ಕರಿಯನ ಕಥೆ** (ಕಿರು ಕಾದಂಬರಿ)
*ಕಂನಾಡಿಗಾ ನಾರಾಯಣ*
*ಪುಟ : ೫೦* *ಬೆಲೆ ರೂ : ೩೦*
**ಸೂರ್ಯ ಪ್ರಕಾಶನ**, ಮಲ್ಲಾಡಿ ಹಳ್ಳಿ
ಹೊಳಲ್ಕೆರೆ ತಾ. ಚಿತ್ರದುರ್ಗ ಜಿಲ್ಲೆ - ೫೭೭೫೩೧

**ಆಧುನಿಕ ಜೀವನದಲ್ಲಿ ಆರೋಗ್ಯ ಸಂರಕ್ಷಣೆ ಹೇಗೆ?**
(ಲೇಖನಗಳು) *ಎನ್. ಗೋಪಾಲಕೃಷ್ಣ*
*ಪುಟ : ೭೦* *ಬೆಲೆ ರೂ : ೨೦*
**ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು**
ಬೆಂಗಳೂರು.

**ನೋ ಚೇಂಜ್ ಕಥೆಗಳು** (ಅಂಕಣ ಬರಹಗಳು)
*ಪ. ಗೋಪಾಲಕೃಷ್ಣ*
*ಪುಟ : ೮೮* *ಬೆಲೆ ರೂ : ೩೫*
**ಪ. ಗೋಪಾಲಕೃಷ್ಣ ಸ್ಮಾರಕ ಟ್ರಸ್ಟ್**, ದಿ ಕಾಟೇಜ್
ಲೋವರ್ ಮರೋಳಿ, ಮಂಗಳೂರು - ೫೭೫ ೦೦೮

**ಕವಲೇದುರ್ಗ ಸಂಸ್ಥಾನ್ಮಠ ಮತ್ತು ಕೆಳದಿ ರಾಜಗುರು ಪರಂಪರೆ** ಮ. ನಾ. ಯೋಗೇಂದ್ರಪ್ಪಗೌಡ
*ಪುಟ : ೮೦* *ಬೆಲೆ ರೂ : ೨೦*
**ಮರುಳಸಿದ್ದೇಶ್ವರ ವೀರಶೈವ ಅಧ್ಯಯನ ಕೇಂದ್ರ**,
ಕವಲೇದುರ್ಗ - ೫೭೭೪೧೪

**ದೇವರು ಆಲುತಾನ !** (ಕಥಾ ಸಂಕಲನ)
*ಕಪ್ಪಿ ಸಣ್ಣ ಹನುಮಂತ*
*ಪುಟ : ೫೪* *ಬೆಲೆ ರೂ : ೨೫*
**ಯುವಕರ ಸಂಘ** (ರಿ), ರಾಮನಗರ
ಹಗರಿಬೊಮ್ಮನಹಳ್ಳಿ, ೫೮೩೨೧೨ (ಬಳ್ಳಾರಿ)

**ಮದಪ್ಪಂದಿ ನೆಂಪು** (ಆತ್ಮಕಥೆ - ತುಳು)
*ಬಿ. ಎ. ಪ್ರಭಾಕರ ರೈ*
*ಪುಟ : ೨೯೯* *ಬೆಲೆ ರೂ : ೧೫೦*
**ಸಾತ್ವಿಕ ಪ್ರಕಾಶನ**, ೩೪೫, ಸಮೃದ್ಧ, ಲಕ್ಷ್ಮೀ ರಸ್ತೆ
೭ನೇ ಅಡ್ಡರಸ್ತೆ, ಶಾಂತಿನಗರ, ಬೆಂಗಳೂರು - ೨೭

# ಏಕರೂಪ ನಾಗರಿಕ ಸಂಹಿತೆ ಈಗ ಪ್ರಸ್ತುತವೇ ?

[illegible]

ಸ್ವಾತಂತ್ರ್ಯದ ಐದು ದಶಕಗಳ ಕಾಲಾವಧಿಯಲ್ಲಿ ಜಾತ್ಯತೀತ ಪಕ್ಷಗಳು ಅಲ್ಪಸಂಖ್ಯಾತರನ್ನು ಓಲೈಸುತ್ತಾ ಬಂದಿವೆ; ಓಟಿಗಾಗಿ ಮುಸಲ್ಮಾನರನ್ನು, ಕ್ರೈಸ್ತರನ್ನು ತುಷ್ಟೀಕರಿಸಲಾಗುತ್ತಿದೆ ಎಂದು ಸಂಘಪರಿವಾರ ಹೇಳುತ್ತಾ ಬಂದಿದೆ. ಕೆಲ ಧಾರ್ಮಿಕ ಸಮುದಾಯಗಳಿಗೆ ತಮ್ಮದೇ ಆದ ವೈಯಕ್ತಿಕ ಕಾನೂನು ಅನುಸರಿಸಲು ಅವಕಾಶ ಮಾಡಿಕೊಟ್ಟಿರುವುದು ಎಂಥ ಜಾತ್ಯತೀತತೆ? ಎಂದು ಹಿಂದೂ ಕೋಮುವಾದಿ ಶಕ್ತಿಗಳು ಪದೇ ಪದೇ ಪ್ರಶ್ನಿಸುತ್ತಿವೆ. ಮುಸಲ್ಮಾನರು ನಾಲ್ವರು ಹೆಂಡಂದಿರನ್ನು ಮದುವೆಯಾಗಲು, ಬೇಕಾದಷ್ಟು ಮಕ್ಕಳನ್ನು ಹಡೆಯಲು ಅಭ್ಯಂತರವಿಲ್ಲದಿರುವುದು ಎಂಥ ನ್ಯಾಯ? ಪ್ರಜೆಗಳಲ್ಲಿ ಈ ತಾರತಮ್ಯವೇಕೆ, ಎಂದು ಕೇಳಲಾಗುತ್ತಿದೆ. ಇಂಥ ಪಕ್ಷಪಾತ ನಿವಾರಣೆಗಾಗಿ ಇಡೀ ದೇಶಕ್ಕೆ ಅನ್ವಯಿಸುವಂಥ ಏಕರೂಪದ ನಾಗರಿಕ ಸಂಹಿತೆ ಇರಬೇಕೆಂದು ಒತ್ತಾಯಿಸಲಾಗುತ್ತಿದೆ.

ಕಳೆದ ತಿಂಗಳು ಸರ್ವೋಚ್ಚ ನ್ಯಾಯಾಲಯ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಕ್ರೈಸ್ತ ಧರ್ಮ ಗುರು ಜಾನ್ ವಲ್ಲ ಮುತ್ತಂ ಮತ್ತು ಇನ್ನೊಬ್ಬರು ಧಾರ್ಮಿಕ ಅಥವಾ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಆಸ್ತಿಪಾಸ್ತಿ ನೀಡದಂತೆ ಕ್ರೈಸ್ತರನ್ನು ಮಾತ್ರ ನಿರ್ಬಂಧಿಸುವ ಭಾರತೀಯ ಉತ್ತರಾಧಿಕಾರತ್ವ ಕಾಯ್ದೆಯ ೧೧೮ನೇ ವಿಧಿಯ ಸಂವಿಧಾನಿಕ ಕ್ರಮಬದ್ಧತೆಯನ್ನು ಪ್ರಶ್ನಿಸಿ ಸಲ್ಲಿಸಿದ್ದ ತಕರಾರು ಅರ್ಜಿಯನ್ನು ವಿಚಾರಣೆಗೆ ಕೈಗೆತ್ತಿಕೊಂಡ ಸುಪ್ರೀಂ ಕೋರ್ಟ್ ಏಕರೂಪ ನಾಗರಿಕ ಸಂಹಿತೆಯ ಅಗತ್ಯದ ಬಗ್ಗೆ ಪ್ರಸ್ತಾಪಿಸಿದೆ. ಸ್ವಾತಂತ್ರ್ಯ ಬಂದು ಅರ್ಧ ಶತಮಾನವೇ ಗತಿಸಿದರೂ ಸಂವಿಧಾನದ ೪೪ನೇ ವಿಧಿ ಜಾರಿಗೆ ತರದಿರುವ ಬಗ್ಗೆ ವಿಷಾದ ವ್ಯಕ್ತಪಡಿಸಿದೆ.

ಮದುವೆ, ವಿವಾಹ ವಿಚ್ಛೇದನ, ಆಸ್ತಿಯ ಹಂಚಿಕೆ ಇಂಥ ಲೌಕಿಕ ವಿಚಾರಗಳಲ್ಲಿ ಎಲ್ಲ ಭಾರತೀಯರಿಗೂ ಒಂದೇ ರೀತಿಯ ಕಾನೂನು ಇರಬೇಕೆಂಬುದು ಸುಪ್ರೀಂ ಕೋರ್ಟ್ ಅನಿಸಿಕೆಯ ಸಾರಾಂಶವಾಗಿದೆ. ದೇಶದ ಉಚ್ಚ ನ್ಯಾಯಾಲಯ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿರುವುದು ಇದೇ ಮೊದಲ ಬಾರಿಯೇನೂ ಅಲ್ಲ. ೧೯೮೫ರಲ್ಲಿ ಶಾ ಬಾನು ಪ್ರಕರಣದಲ್ಲಿ ಹಾಗೂ ೧೯೯೫ರಲ್ಲಿ ಸರಳಾ ಮುದಗಲ್ ಪ್ರಕರಣದಲ್ಲಿ ಇಂಥದೇ ಒಲವನ್ನು ಅಂದಿನ ನ್ಯಾಯಾಧೀಶರಾಗಿದ್ದ ವೈ. ವಿ. ಚಂದ್ರಚೂಡ ಹಾಗೂ ಕುಲದೀಪ ಸಿಂಗ್ ತೋರಿಸಿದ್ದರು. ಈಗಿನ ಮುಖ್ಯ ನ್ಯಾಯಮೂರ್ತಿ ವಿ. ಎನ್. ಖರೆ ಅವರು ಅದನ್ನೇ ಪುನರುಚ್ಚರಿಸಿದ್ದಾರೆ. ಇದನ್ನು ಸಂಘಪರಿವಾರದ ಸಂಘಟನೆಗಳು ಸ್ವಾಗತಿಸಿವೆ. ಜಾತ್ಯತೀತ ಪಕ್ಷಗಳು ಸದ್ಯಕ್ಕೆ ಇದು ಅಪ್ರಸ್ತುತ ಎಂದು ಹೇಳಿವೆ.

ಒಂದು ಜಾತ್ಯತೀತ ಜನತಾಂತ್ರಿಕ ವ್ಯವಸ್ಥೆಯಲ್ಲಿ ಎಲ್ಲ ಪ್ರಜೆಗಳಿಗೂ ಅನ್ವಯವಾಗುವಂಥ ಒಂದು ಸಮಾನ ನಾಗರಿಕ ಸಂಹಿತೆ ಇರಬೇಕೆಂಬ ವಾದ ಸರಿ. ಭಾರತೀಯ ಪ್ರಜೆಗಳು ಯಾವುದೇ ಮತ, ಧರ್ಮಕ್ಕೆ ಸೇರಿರಲಿ ಕಾನೂನಿನ ಕಣ್ಣಲ್ಲಿ ಅವರು ಸಮಾನರಾಗಿರಬೇಕೆಂಬುದನ್ನು ಯಾವ ಪ್ರಗತಿಶೀಲರೂ ವಿರೋಧಿಸುವುದಿಲ್ಲ. ಈ ದೇಶದಲ್ಲಿ ಮುಸಲ್ಮಾನರಿಗೆ ಮಾತ್ರ ಪ್ರತ್ಯೇಕ ಕಾನೂನಿಲ್ಲ. ಹಿಂದೂ ವಿವಾಹ ಕಾಯ್ದೆ, ಹಿಂದು ಅವಿಭಕ್ತ ಕುಟುಂಬ ಕಾಯ್ದೆ, ಹಿಂದೂ ವಾರಸಾ ಕಾಯ್ದೆ, ಕ್ರಿಶ್ಚಿಯನ್ ವಿವಾಹ ಕಾಯ್ದೆಗಳು ಇವೆಲ್ಲ ಪ್ರತಿಯೊಂದು ಧಾರ್ಮಿಕ ಸಮುದಾಯಕ್ಕೂ ತನ್ನದೇ ಆದ ಕಟ್ಟುಪಾಡುಗಳನ್ನು ಮಾನ್ಯ ಮಾಡಿವೆ. ಅವಿಭಕ್ತ ಕುಟುಂಬ ಕಾಯ್ದೆಯನ್ವಯ ಆಸ್ತಿವಂತ ಹಿಂದು ಕುಟುಂಬಗಳು ಪ್ರತಿವರ್ಷ ಕೋಟ್ಯಂತರ ರೂಪಾಯಿ ತೆರಿಗೆ ವಿನಾಯಿತಿಯನ್ನು ಪಡೆಯುತ್ತ ಬಂದಿವೆ.

ಏಕರೂಪ ನಾಗರಿಕ ಕಾನೂನು ಜಾರಿಗೆ ತರುವುದಾದರೆ ಅಲ್ಪಸಂಖ್ಯಾತರಿಗಾಗಿರುವ ವಿಶೇಷ ಕಾಯ್ದೆಯನ್ನು ರದ್ದು ಮಾಡಿದರೆ ಮಾತ್ರ ಸಾಲದು. ಸರ್ಕಾರಕ್ಕೆ ಕೋಟಿಗಟ್ಟಲೆ ತೆರಿಗೆ ವಂಚನೆ ಮಾಡುವ ಹಿಂದು ಅವಿಭಜಿತ ಕುಟುಂಬ ಕಾಯ್ದೆಯನ್ನು ಕೂಡ ರದ್ದು ಮಾಡಬೇಕು. ಆಸ್ತಿ ವಾರಸುದಾರಿಕೆಯಲ್ಲಿ ಮಹಿಳೆಯರಿಗೆ ಸಮಾನ ಹಕ್ಕು ನೀಡಬೇಕು. ಈ ಅಂಶಗಳಿಗಾಗಿ ಎಂದೂ ಒತ್ತಾಯಿಸದ ಸಂಘ ಪರಿವಾರದ ಮತಾಂಧರು ಬರೀ ಅಲ್ಪಸಂಖ್ಯಾತರಿಗೆ ಮಾತ್ರ ವಿಶೇಷ ಸವಲತ್ತನ್ನು ನೀಡಲಾಗುತ್ತದೆ ಎಂದು ಆಪಾದಿಸುತ್ತಾರೆ. ಅಲ್ಪಸಂಖ್ಯಾತರಿಗೆ ಈಗಿರುವ ಹಕ್ಕುಗಳನ್ನು ಕಿತ್ತುಕೊಳ್ಳಲು ಈ ಶಕ್ತಿಗಳು ಇಂಥ ವಾದವನ್ನು ಪ್ರತಿಪಾದಿಸುತ್ತಿವೆ.

ಭಾರತದಲ್ಲಿರುವ ಮುಸ್ಲಿಂ ವೈಯಕ್ತಿಕ ಕಾನೂನಿನಲ್ಲಿ ಇರುವುದೆಲ್ಲ ಸರಿಯೆಂದು ಯಾವ ಪ್ರಗತಿಪರನೂ ಸಮರ್ಥಿಸುವುದಿಲ್ಲ. ಮೂರು ಬಾರಿ ತಲಾಖ್ ಹೇಳಿ ಮಹಿಳೆಯರನ್ನು ಕಣ್ಣೀರಿನ ಕಡಲಿಗೆ ನೂಕುವ ಸುನ್ನಿ ಹನಾಫಿ ಕಾನೂನನ್ನು ಬೆಂಬಲಿಸುವ ಪ್ರಶ್ನೆಯೂ ಇಲ್ಲ. ಬಹುಪತ್ನಿತ್ವಕ್ಕೆ ಅವಕಾಶವಿರಬೇಕೆಂದು ಯಾರೂ ವಾದಿಸುವುದಿಲ್ಲ. ಶಾ ಬಾನು ಪ್ರಕರಣದಲ್ಲಿ ಪುರೋಗಾಮಿ ತೀರ್ಪು ಜಾರಿಗೆ ಬರದಂತೆ ತಡೆಯಲು ಅಂದಿನ ಪ್ರಧಾನಿ ರಾಜೀವ್ ಗಾಂಧಿ ಮುಂದಾಗಿದ್ದನ್ನು ಯಾವ ಜಾತ್ಯತೀತನೂ ಸೂಕ್ತ ಎಂದು ಹೇಳುವುದಿಲ್ಲ.

ಆದರೆ ಸಂಘಪರಿವಾರದ ಏಕರೂಪ ನಾಗರಿಕ ಸಂಹಿತೆ ಜಾರಿಯಿಂದ ಮಾತ್ರ ಈ ಲೋಪಗಳನ್ನು ಸರಿಪಡಿಸಲು ಸಾಧ್ಯವಿಲ್ಲ. ಒಂದು ಧಾರ್ಮಿಕ ಸಮುದಾಯದ ಸುಧಾರಣೆ ಆಂತರಿಕವಾಗಿ ನಡೆಯಬೇಕೇ ಹೊರತು ಹೊರಗಿನಿಂದ ಹೇರಲ್ಪಡಬಾರದು. ಎಲ್ಲ ಧರ್ಮಗಳಲ್ಲೂ ಮಹಿಳೆಯನ್ನು ತಾರತಮ್ಯದಿಂದಲೇ ಕಾಣುತ್ತ ಬಂದಿರುವುದರಿಂದ ಮಹಿಳಾ ಸಮಾನತೆಗಾಗಿ ನಡೆಯುವ ಪ್ರಗತಿಪರರ ಹೋರಾಟ ಬಲವಾಗಬೇಕು. ಸಂಘಪರಿವಾರದ ಕೆಲವರಲ್ಲಾದರೂ ಒಟ್ಟು ಸಮುದಾಯದ ಏಳಿಗೆಯ ಬಗ್ಗೆ ಕಾಳಜಿ ಇದ್ದರೆ ತಮ್ಮ ಜನಾಂಗ ದ್ವೇಷಿ ಸಿದ್ಧಾಂತವನ್ನು ಗಂಟುಕಟ್ಟಿ ಬಿಸಾಡಿ ಸಂಪೂರ್ಣ ಸಮಾನತೆಗಾಗಿ ಹೋರಾಡುವ ಪುರೋಗಾಮಿಗಳ ಜೊತೆಗೆ ಕೈಗೂಡಿಸಬೇಕು.

ಆದರೆ ಸಂಘಪರಿವಾರದಲ್ಲಿರುವುದು ಇಂಥ ಪ್ರಾಮಾಣಿಕತೆಯಲ್ಲ. ಇಂಥ ಪ್ರಾಮಾಣಿಕತೆ ಇದ್ದರೆ ಹಿಂದೂ ಸಮಾಜದಲ್ಲಿ ಕೊಳೆತು ನಾರುತ್ತಿರುವ ಅಸ್ಪೃಶ್ಯತೆ, ಜಾತಿ ಪದ್ಧತಿ, ವರದಕ್ಷಿಣೆ ವಿರುದ್ಧ ಅವರು ಮೊದಲು ಹೋರಾಡಲಿ. ಎಲ್ಲ ನಾಗರಿಕರಿಗೂ ಅನ್ವಯವಾಗುವಂಥ ಹಾಗೂ ಕಂದಾಚಾರ ಹಾಗೂ ಶೋಷಕ ಮೌಲ್ಯಗಳಿಗೆ ಅವಕಾಶವಿಲ್ಲದಂಥ ಪ್ರಗತಿಪರ ಸಮಾನ ನಾಗರಿಕ ಸಂಹಿತೆಯ ಜಾರಿಗೆ ಸಿದ್ಧವಿಲ್ಲದವರು ಅಲ್ಪಸಂಖ್ಯಾತರ ಹಕ್ಕುಗಳನ್ನು ದಮನ ಮಾಡುವ ಒಂದೇ ದುರುದ್ದೇಶದಿಂದ ಪ್ರತಿಪಾದಿಸುತ್ತಿರುವ ಏಕರೂಪ ನಾಗರಿಕ ಸಂಹಿತೆ ವಾದದಲ್ಲಿ ಹುರುಳಿಲ್ಲ.

'ಒಂದೇ ದೇಶ, ಒಂದೇ ಕಾನೂನು' ಎಂದು ಸುಪ್ರೀಂ ಕೋರ್ಟ್ ಹೇಳಿದ್ದರೂ ಕೂಡ ಈ ದೇಶದಲ್ಲಿರುವುದು ಒಂದೇ ಸಂಸ್ಕೃತಿ ಅಲ್ಲ. ದೇಶ ಒಂದೇ ಆಗಿದ್ದರೂ ಹಲವಾರು ಭಾಷೆಗಳು, ಜೀವನ ವಿಧಾನಗಳು, ಜನಾಂಗಗಳು ಇಲ್ಲಿ ನೆಲೆಯೂರಿವೆ. ಹಿಮಾಲಯದ ತಪ್ಪಲಿನ ಬುಡಕಟ್ಟು ಜನರಲ್ಲಿ ಒಬ್ಬ ಹುಡುಗಿ ಐದಾರು ಜನರಿರುವ ಸೋದರರ ಗುಂಪನ್ನು ಮದುವೆಯಾಗುವ ಪದ್ಧತಿ ಇದೆ. ಕೆಲ ಹಿಂದುಳಿದ ಜಾತಿಗಳಲ್ಲಿ ಅಣ್ಣ ಸತ್ತರೆ ಅವನ ಹೆಂಡತಿಯನ್ನು ತಮ್ಮನೇ ಮದುವೆಯಾಗುವ ಪದ್ಧತಿಯೂ ಇಲ್ಲಿದೆ. ಉಪಪತ್ನಿಯರ ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲಿರಬೇಕೆಂಬ ನ್ಯಾಯಾಲಯಗಳ ಆದೇಶಗಳು ಬಂದಿವೆ.

ಈಗಿರುವ ಹಿಂದೂ ನಾಗರಿಕ ಸಂಹಿತೆ ಕೂಡ ಸುಲಭವಾಗಿ ಜಾರಿಗೆ ಬರಲಿಲ್ಲ. ಸತಿಸಹಗಮನ ಪದ್ಧತಿ ನಿಷೇಧ, ಬಾಲ್ಯವಿವಾಹ ನಿರ್ಬಂಧದಂಥ ಪ್ರಶ್ನೆಯಲ್ಲಿ ಕಂದಾಚಾರಿಗಳು ಸುಧಾರಣೆಗಳನ್ನು ವಿರೋಧಿಸುತ್ತಲೇ ಬಂದರು. ಈ ಎಲ್ಲ ಅಡ್ಡಿ-ಆತಂಕಗಳನ್ನು ಎದುರಿಸಿ ರೂಪುಗೊಂಡ ಈ ಸಂಹಿತೆ ಕೂಡ ಎಲ್ಲ ಹಿಂದೂಗಳಿಗೆ ಅನ್ವಯವಾಗುವುದಿಲ್ಲ.

ಒಂದು ಜಾತ್ಯತೀತ ಜನತಾಂತ್ರಿಕ ವ್ಯವಸ್ಥೆಯಲ್ಲಿ ಎಲ್ಲ ಪ್ರಜೆಗಳಿಗೂ ಅನ್ವಯವಾಗುವಂಥ ಒಂದು ಸಮಾನ ನಾಗರಿಕ ಸಂಹಿತೆ ಇರಬೇಕೆಂಬ ವಾದ ಸರಿ. ಭಾರತೀಯ ಪ್ರಜೆಗಳು ಯಾವುದೇ ಮತ, ಧರ್ಮಕ್ಕೆ ಸೇರಿರಲಿ ಕಾನೂನಿನ ಕಣ್ಣಲ್ಲಿ ಅವರು ಸಮಾನರಾಗಿರಬೇಕೆಂಬುದನ್ನು ಯಾವ ಪ್ರಗತಿಶೀಲರೂ ವಿರೋಧಿಸುವುದಿಲ್ಲ. ಈ ದೇಶದಲ್ಲಿ ಮುಸಲ್ಮಾನರಿಗೆ ಮಾತ್ರ ಪ್ರತ್ಯೇಕ ಕಾನೂನಿಲ್ಲ. ಹಿಂದೂ ವಿವಾಹ ಕಾಯ್ದೆ, ಹಿಂದು ಅವಿಭಕ್ತ ಕುಟುಂಬ ಕಾಯ್ದೆ, ಹಿಂದೂ ವಾರಸಾ ಕಾಯ್ದೆ, ಕ್ರಿಶ್ಚಿಯನ್ ವಿವಾಹ ಕಾಯ್ದೆಗಳು ಇವೆಲ್ಲ ಪ್ರತಿಯೊಂದು ಧಾರ್ಮಿಕ ಸಮುದಾಯಕ್ಕೂ ತನ್ನದೇ ಆದ ಕಟ್ಟುಪಾಡುಗಳನ್ನು ಮಾನ್ಯ ಮಾಡಿವೆ.

ಹಿಂದೂ ಎಂದು ಅಧಿಕೃತವಾಗಿ ಕರೆಯಿಸಿಕೊಳ್ಳಲು ಒಪ್ಪದ ಜನಸಮುದಾಯಗಳೂ ನಮ್ಮ ನಡುವೆ ಇವೆ. ಆದಿವಾಸಿ ಬುಡಕಟ್ಟುಗಳು ಮಾತ್ರವಲ್ಲ, ಜೈನರು, ಬೌದ್ಧರು, ಲಿಂಗಾಯತರು ತಮ್ಮನ್ನು ಹಿಂದೂ ಎಂದು ಕರೆದುಕೊಳ್ಳಲು ಇಂದಿಗೂ ತಯಾರಿಲ್ಲ. ಬ್ರಾಹ್ಮಣರು ಹೆಣವನ್ನು ಸುಡುತ್ತಾರೆ. ಲಿಂಗಾಯತರು ಹೂಳುತ್ತಾರೆ. ಇವೆರಡರಲ್ಲಿ ಯಾವುದನ್ನು ಸಮಾನ ನಾಗರಿಕ ಸಂಹಿತೆಯಲ್ಲಿ ಅಳವಡಿಸಬೇಕು ?

ಸುಪ್ರೀಂ ಕೋರ್ಟ್ ಹೇಳಿದಂತೆ ಏಕರೂಪ ನಾಗರಿಕ ಸಂಹಿತೆಯೊಂದು ರೂಪುಗೊಳ್ಳಬೇಕೆಂದು ಸಂವಿಧಾನ ಆಶಿಸಿದ್ದು ನಿಜ. ಸಂವಿಧಾನದ ಈ ಆಶಯ ಜಾರಿಗೆ ಬಂದರೆ ತಪ್ಪೇನು ಎಂದು ಸಂಘಪರಿವಾರದವರು ಪ್ರಶ್ನಿಸುತ್ತಾರೆ. ಇದೇ ಜನ ದಲಿತರಿಗೆ ಮೀಸಲಾತಿ ಇನ್ನೆಷ್ಟು ವರ್ಷ ? ಎಂದೂ ಪ್ರಶ್ನಿಸುತ್ತಾರೆ. ಈ ಪ್ರಶ್ನೆಗೆ ಉತ್ತರಿಸಬೇಕಾದವರು ಪ್ರಗತಿಪರರಾಗಲಿ, ಜಾತ್ಯತೀತ ವಾದಿಗಳಾಗಲಿ ಅಲ್ಲ, ಸ್ವಾತಂತ್ರ್ಯದ ಐವತ್ತು ವರ್ಷಗಳ ನಂತರವೂ ಅಲ್ಪ ಸಂಖ್ಯಾತರನ್ನು ಮುಖ್ಯ ಪ್ರವಾಹಕ್ಕೆ ಬರದಂತೆ ಯಾರು ತಡೆದರೋ, ಯಾರು ಇಂದಿಗೂ ದಲಿತರ ಗುಡಿಸಲಿಗೆ ಮಾತ್ರವಲ್ಲ ಬದುಕಿಗೆ ಕೊಳ್ಳಿ ಇಡುತ್ತಾರೋ ಆ ಪ್ರಗತಿ ಶತ್ರುಗಳು ಇದಕ್ಕೆ ಉತ್ತರ ನೀಡಬೇಕಾಗಿದೆ.

ಸಾಮಾನ್ಯ ನಾಗರಿಕ ಸಂಹಿತೆ ಜಾರಿಯಾಗುವ ಮುನ್ನ ಅದಕ್ಕೆ ಪೂರಕವಾಗುವ ಸನ್ನಿವೇಶ ಸಮಾಜದಲ್ಲಿ ನಿರ್ಮಾಣವಾಗಬೇಕು. ಜಾತ್ಯತೀತತೆಯ ಅಡಿಪಾಯ ಭದ್ರವಾಗಿ ಬೇರೂರಬೇಕು. ಕೋಮುವಾದಿ ಶಕ್ತಿಗಳು ಮೂಲೆಗುಂಪಾಗಿ ಪ್ರಗತಿಪರ ಶಕ್ತಿಗಳು ಪ್ರಭಾವಶಾಲಿಯಾಗಬೇಕು, ಅಂಥ ಸನ್ನಿವೇಶದಲ್ಲಿ ಅಲ್ಪಸಂಖ್ಯಾತರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ತಮಗೆ ಅಪಾಯವಿಲ್ಲ ಎಂದು ಅವರಿಗೆ ಖಾತರಿಯಾದಾಗ ಮಾತ್ರ ಇಂಥ ಸಂಹಿತೆ ತರಲು ಸಾಧ್ಯ. ಏಕರೂಪ ನಾಗರಿಕ ಸಂಹಿತೆ ಅಂದರೆ ಯಾವುದು ? ಅದು ಹೇಗಿರಬೇಕು ? ಎಲ್ಲ ಧರ್ಮ, ಸಂಸ್ಕೃತಿಗಳ ಜನರಿಗೆ ಹೊಂದಿಕೆಯಾಗುವಂತೆ ಅದನ್ನು ಹೇಗೆ ರೂಪಿಸಬೇಕು ಎಂಬ ಬಗ್ಗೆ ಮೊದಲು ಒಮ್ಮತ ಮೂಡಬೇಕಾಗಿದೆ. ಒಂದೆಡೆ ಅಯೋಧ್ಯೆಯ ಬಾಬರಿ ಮಸೀದಿಯನ್ನು ನೆಲಸಮಗೊಳಿಸಿ, ಇನ್ನೊಂದೆಡೆ ಗುಜರಾತ್‌ನಲ್ಲಿ ಸಾವಿರಾರು ಮಂದಿ ಅಲ್ಪಸಂಖ್ಯಾತರನ್ನು ಕೊಚ್ಚಿ ಹಾಕಿ, ದೇಶದ ತುಂಬ ಕೋಮು ಉನ್ಮಾದ ಕೆರಳಿಸುತ್ತಿರುವ ಮತಾಂಧರು ಏಕರೂಪ ನಾಗರಿಕ ಸಂಹಿತೆ ಬಗ್ಗೆ ಒತ್ತಾಯಿಸತೊಡಗಿದರೆ ಮುಸಲ್ಮಾನ, ಕ್ರೈಸ್ತರಲ್ಲಿ ಭೀತಿ ಉಂಟಾಗುವುದು ಸಹಜ. ಹಿಂದೂರಾಷ್ಟ್ರ ಸಿದ್ಧಾಂತವನ್ನು ಪ್ರತಿಪಾದಿಸುತ್ತ ಮತ್ತೊಂದೆಡೆ ಸಮಾನ ನಾಗರಿಕ ಸಂಹಿತೆ ಬಗ್ಗೆ ಆಗ್ರಹಿಸುವವರನ್ನು ಅಲ್ಪ ಸಂಖ್ಯಾತರಾಗಲಿ, ದಲಿತರಾಗಲಿ, ಹೇಗೆ ನಂಬಲು ಸಾಧ್ಯ ?

ಸಂಘಪರಿವಾರ ಪ್ರತಿಪಾದಿಸುತ್ತಿರುವ ಏಕರೂಪ ನಾಗರಿಕ ಸಂಹಿತೆ ಸಮಾನತೆಯ ಆಶಯದಿಂದ ಕೂಡಿದುದಲ್ಲ, ವಿವಿಧ ಪದ್ಧತಿ ಹಾಗೂ ಜೀವನ ವಿಧಾನಗಳನ್ನು ಅನುಸರಿಸುತ್ತಿರುವ ಆದಿವಾಸಿಗಳು, ಜೈನರು, ವೀರ ಶೈವರು ಮುಂತಾದವರನ್ನು ಹಿಂದೂ ಕುಟುಂಬ ವ್ಯವಸ್ಥೆಯಡಿಯಲ್ಲಿ ಸೂತ್ರಬದ್ಧಗೊಳಿಸಿ ಒಂದೇ ಛತ್ರಿಯ ಅಡಿಗೆ ತಂದು ಗಟ್ಟಿಮುಟ್ಟಾದ ಹಿಂದೂ ಏಕತೆ ಸಾಧಿಸುವುದು ಅವರ ಗುರಿಯಾಗಿದೆ. ಮೇಲ್ಜಾತಿ ಜನರ ಕಟ್ಟುಪಾಡುಗಳನ್ನು ಕೆಳಜಾತಿಗಳ ಜನ ಹಾಗೂ ಹಿಂದುಳಿದವರು ಗುಲಾಮರಂತೆ ಒಪ್ಪಿಕೊಂಡು ಹಿಂದುತ್ವದ ಹೆಸರಿನಲ್ಲಿ ಒಂದುಗೂಡಿದರೆ ಈ ಸಮಾಜ ಹಿಂದು ಮತ್ತು ಹಿಂದುಯೇತರ ಎಂಬ ಧ್ರುವೀಕರಣ ಹೊಂದುತ್ತದೆ. ಆಗ ಸಾವರ್ಕರ, ಗೋಳ್ವಲಕರ ಇಂಥವರ ಕಲ್ಪನೆಯ ಹಿಂದು ರಾಷ್ಟ್ರ ನಿರ್ಮಾಣಕ್ಕೆ ಸೊಪ್ಪು ಹಾಕಿದಂತಾಗುತ್ತದೆ.

ಪ್ರಗತಿಪರರು ಪ್ರತಿಪಾದಿಸುವ ಸಮಾನ ನಾಗರಿಕ ಸಂಹಿತೆಗೂ, ಸಂಘಪರಿವಾರ ಒತ್ತಾಯಿಸುವ ಏಕರೂಪ ನಾಗರಿಕ ಸಂಹಿತೆಗೂ ವ್ಯತ್ಯಾಸವಿದೆ. ಒಂದು ಎಲ್ಲವನ್ನೂ ಮುಖ್ಯ ಪ್ರವಾಹದಲ್ಲಿ ಕೊಂಡೊಯ್ಯುವ ವಿಶಾಲ ದೃಷ್ಟಿಕೋನ ಹೊಂದಿದ್ದರೆ, ಇನ್ನೊಂದು ಅಲ್ಪಸಂಖ್ಯಾತರ ಧಾರ್ಮಿಕ ಅನನ್ಯತೆಯನ್ನು ಧ್ವಂಸ ಮಾಡುವ ವಿಚ್ಛಿದ್ರಕಾರಿ ಷಡ್ಯಂತ್ರವನ್ನು ಹೊಂದಿದೆ. ಏಕರೂಪ ನಾಗರಿಕ ಸಂಹಿತೆಯ ಹೆಸರಿನಲ್ಲಿ ಹಿಂದೂ ನಾಗರಿಕ ಸಂಹಿತೆಯನ್ನು ಎಲ್ಲರ ಮೇಲೆ ಹೇರುವ ಹುನ್ನಾರ ಈ ವಾದದಲ್ಲಿದೆ. ಆದ್ದರಿಂದ ಈಗ ದೇಶಕ್ಕೆ ಬೇಕಾಗಿರುವುದೇನು ? ಸಮಾನ ನಾಗರಿಕ ಕಾಯ್ದೆಗೆ ಕಾಲವೀಗ ಪಕ್ವವಾಗಿಲ್ಲ. ಸಿಂಘಾಲ, ತೊಗಾಡಿಯಾಗಳ ಹಾವಳಿ ನಿಲ್ಲುವವರೆಗೆ ಅದಕ್ಕೆ ಪರಿಸ್ಥಿತಿ ಪೂರಕವಾಗಲು ಸಾಧ್ಯವೂ ಇಲ್ಲ.

ಒಂದು ಸಮಾನ ನಾಗರಿಕ ಸಂಹಿತೆ ಹಾಗೂ ಪ್ರಗತಿಪರ ಕಾನೂನಿನ ಜಾರಿಗೆ ಮೊದಲ ಹೆಜ್ಜೆಯಾಗಿ ಜನತಾಂತ್ರಿಕ ಸಮಾಜವೊಂದು ಇಲ್ಲಿ ನೆಲೆಯೂರಬೇಕು, ಅದಕ್ಕಾಗಿ ಎಲ್ಲಾ ಜಾತಿ, ಮತಗಳನ್ನು ಮೀರಿ ರೈತ ಕಾರ್ಮಿಕರು, ಪುರೋಗಾಮಿ ಜನವಿಭಾಗಗಳ ವಿಶಾಲ ತಳಹದಿಯ ಹೋರಾಟ ರೂಪುಗೊಳ್ಳಬೇಕು. ಮಹಿಳೆಯರು, ಯುವಕರು, ವಿದ್ಯಾರ್ಥಿಗಳು ಇಂಥ ಹೋರಾಟದ ಮುಂಚೂಣಿಯಲ್ಲಿರಬೇಕು.

ಈ ದೇಶಕ್ಕೆ ಕೂಡಲೆ ಬೇಕಾಗಿರುವುದು ಬರೀ ಏಕರೂಪ ನಾಗರಿಕ ಸಂಹಿತೆಯಲ್ಲ; ಆರ್ಥಿಕ, ಸಾಮಾಜಿಕ, ಅಸಮಾನತೆಗೆ ಅವಕಾಶವಿಲ್ಲದಂಥ ಸರ್ವರಿಗೂ ಸಮಾನಾವಕಾಶವಿರುವ ಸಮಾನತೆಯ ಸಮಾಜ ನಿರ್ಮಾಣವಾಗಬೇಕು. ಅಂಥ ಸಮಾಜದಲ್ಲಿ ತರುವ ಸಮಾನ ನಾಗರಿಕ ಶಾಸನವನ್ನು ಎಲ್ಲ ಜನ, ಸಮುದಾಯಗಳು ನಿರ್ಭೀತಿಯಿಂದ ಒಪ್ಪಿಕೊಳ್ಳುತ್ತವೆ.

**ಸನತ್‌ಕುಮಾರ್ ಬೆಳಗಲಿ**
ಎಲ್.ಎಫ್. ೧೭/೬, ಬಿ.ಡಿ.ಎ. ಫ್ಲಾಟ್ಸ್, ಮೈಕೊ ಲೇಔಟ್
ಪೋಲಿಸ್ ಠಾಣೆಯ ಎದುರು, ಬಿಟಿಎಂ ಲೇಔಟ್
ಬೆಂಗಳೂರು - ೫೬೦ ೦೭೬

**ಅನಂತ**

ನಿಲ್ಲುವುದಿಲ್ಲ
ಯುದ್ಧಗಳು;
ಇಷ್ಟೆ :
ಬದಲಾಗುತ್ತವೆ
ಆಯುಧಗಳು !

■ ಪಿ. ಪಿ. ಕೆ.

■ ನಾ. ಡಿಸೋಜ

# ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ

ವಿಚಿತ್ರ ಅಂದರೆ ಮನೆಗೆಲಸದ ಕತ್ರೀನ ಬಾಯಿಯ ಗಂಡ ಗುಂಡಿಗೆ ರೋಗಕ್ಕೆ ಬಲಿಯಾದ ಎರಡು ಮೂರು ತಿಂಗಳ ನಂತರ ಊರಿನ ಇಗರ್ಜಿಯ ಪಾದರಿಗಳೂ ಇದೇ ರೋಗಕ್ಕೆ ಗುರಿಯಾಗಿದ್ದು.

ಕತ್ರೀನ ಬಾಯಿಗೆ ಸುಮಾರು ಇಪ್ಪತ್ತೈದು ವರ್ಷ ಅನ್ನುವುದಾದರೆ ಇವಳ ಗಂಡನಿಗೆ ಮತ್ತು ಹತ್ತು ಹೆಚ್ಚು. ಇವರು ಮದುವೆಯಾಗಿ ಐದು ವರ್ಷಗಳಾಗಿವೆ. ಈಗ ಭದ್ರಾವತಿಯಲ್ಲಿ ಇರುವ ಪಾದರಿ ರಾಡ್ರಿಗಸ ಇವರ ಧಾರೆ ಕೆಲಸ ನಿರ್ವಹಿಸಿದ್ದು. ಕತ್ರೀನ ತಂದೆಯ ಮನೆಯಲ್ಲಿ ಕೂಡ ಬಡತನವನ್ನೇ ಹಾಸಿ ಹೊದ್ದುಕೊಂಡು ಮಲಗಿದ್ದವಳು. ಅವಳ ತಂದೆ ತಾಮ್ರ ಹಿತ್ತಾಳೆಯ ಕೆಲಸದವ. ಪಾತ್ರೆಗೆ ಕಲಾಯಿ ತೆಗೆಯುವುದು, ಹಂಡೆ, ಕೊಡಪಾನ ರಿಪೇರಿ ಇವನ ಕೆಲಸ. ಸ್ಟೀಲ್ ಪಾತ್ರೆ ಪ್ಲಾಸ್ಟಿಕ್ ಕೊಡಪಾನ ಬಂದ ನಂತರ ಇವನಿಗೆ ಕೆಲಸವೇ ಇರಲಿಲ್ಲ, ತುಂಬ ತಾಪತ್ರಯಗಳ ನಡುವೆಯೇ ಇವನು ಹೆಂಡತಿ ಮಕ್ಕಳ ಜೊತೆ ಬದುಕಿದ್ದ. ಅದು ಯಾರೋ ಇವನ ಹಿರಿಯ ಮಗಳು ಕತ್ರೀನಾಗೆ ಒಂದು ನೆಂಟಸ್ತಿಕೆ ತಂದರು.

ಗಂಡು ಓದಿದವನೂ ಅಲ್ಲ. ಸರಕಾರಿ ಕೆಲಸದಲ್ಲಿ ಇರುವವನೂ ಅಲ್ಲ, ಕಲ್ಲು ಕಟ್ಟುವ ಲಾದ್ರು ಮೇಸ್ತ್ರಿಯ ಮಗ ಸಿಂಜಾಂವ. ಒಂದು ಕಾಲದಲ್ಲಿ ಲಾದ್ರು ಮೇಸ್ತ್ರಿ ಊರಿಗೆಲ್ಲ ಶ್ರೀಮಂತ. ಅವನಿಗೆ ಕೈ ತುಂಬ ಕೆಲಸ. ಕೈಕೆಳಗೆ ಹತ್ತು ಹದಿನೈದು ಆಳುಗಳು. ಹೆಗಡೆಯವರ ಬಿಲ್ಡಿಂಗು, ಸಾಹೇಬರ ಬಿಲ್ಡಿಂಗು ಎಂದು ಓಡಿಯಾಡುತ್ತಿದ್ದವ. ಆದರೆ ಈ ಓಡಾಟ ಬಹಳ ದಿನ ಉಳಿಯಲಿಲ್ಲ, ಕ್ರಮೇಣ ಅವನ ಮೇಸ್ತ್ರಿ ಪಟ್ಟ ಕಳಚಿಬಿದ್ದಿತು. ಈ ಮಲಯಾಳಿ ಜನ ಕೇರಳದಿಂದ ಬಂದು ತಮ್ಮ ಕೆಲಸವನ್ನು ಹಾಳು ಮಾಡಿದರು ಎಂದು ಎಲ್ಲರೂ ಹೇಳುವಂತೆ ಇವನೂ ಹೇಳತೊಡಗಿದ. ಅಂತು ಲಾದ್ರು ಮೇಸ್ತ್ರಿಯ ಮನೆಯಲ್ಲಿ ಒಂದು ಹೊತ್ತಿನ ಗಂಜಿಗೆ ತುಂಡು ಬಂಗಡೆ ಮೀನಿಗೆ ಪರದಾಡುವ ಪರಿಸ್ಥಿತಿ ಬಂದಿತು. ಈ ಪರದಾಟದಲ್ಲಿಯೇ ಬೆಳೆದು ದೊಡ್ಡವನಾದವ ಸಿಂಜಾಂವ.

ಕಷ್ಟವೋ ಸುಖವೋ ಮಕ್ಕಳಿಗೆ ಮದುವೆ ಮಾಡಬೇಕಲ್ಲ, ಕತ್ರೀನಳ ತಂದೆ ಸಿಂಜಾಂವನ ತಂದೆ ಮುಂದೆ ನಿಂತು ಈ ಇಬ್ಬರ ಮದುವೆ ಮಾಡಿದರು. ಪಾದರಿ ರಾಡ್ರಿಗಸ್ಸರೇ ದೇವರ ಕೃಪೆ ಆಶೀರ್ವಾದಗಳು ನವ ದಂಪತಿಗಳ ಮೇಲೆ ಹರಿದು ಬರಲಿ ಎಂದು ಹಾರೈಸಿದರು. ಊರ ಕ್ರೀಸ್ತುವರು ಕೂಡ ಲೋಟ, ತಟ್ಟೆ, ಪೌಡರ್ ಡಬ್ಬ, ಹೂವಿನ ಹಾರ, ಇತ್ಯಾದಿ ಇತ್ಯಾದಿಗಳನ್ನು ಉಡುಗೊರೆ ಎಂದು ನೀಡಿ ವಧುವರರನ್ನು ಆಶೀರ್ವದಿಸಿದರು.

ಸಿಂಜಾಂವ ಹೊಸ ಮನೆ ಮಾಡಿದ. ಪಾದರಿಗಳನ್ನು ಕರೆದೊಯ್ದು ಮನೆಯನ್ನು ಮಂತ್ರಿಸಿದ. ಹಾಲು ಉಕ್ಕಿಸಿದ. ದೇವರ ಪೀಠದ ಮೇಲೆ ಮೇಣದ ಬತ್ತಿ ಹಚ್ಚಿ ಪ್ರಾರ್ಥನೆ ಸಲ್ಲಿಸಿದ. ಮದುವೆಯಾದ ಒಂದು ವರ್ಷಕ್ಕೆ ಕತ್ರೀನ ತಾಯಿಯಾದಳು. ಎರಡನೇ ವರ್ಷಕ್ಕೆ ಮತ್ತೆ ತಾಯಿಯಾದಳು. ಸಿಂಜಾಂವ ಎರಡು ದಿನ ಕೆಲಸ ಐದು ದಿನ ಮನೆಯೆಂದು ವಾರವನ್ನು ಕಳೆಯತೊಡಗಿದ. ಕತ್ರೀನ ಅನಿವಾರ್ಯವಾಗಿ ಡಾಕ್ಟರ ವೆಂಕಟರಾವ್ ಮನೆ, ಜಡಜ ಶಿವಲಿಂಗಪ್ಪನವರ ಮನೆ ಎಂದು ಮೂರು ನಾಲ್ಕು ಮನೆಗಳನ್ನು ಪಾತ್ರೆ ತೊಳೆಯಲು, ಬಟ್ಟೆ ಒಗೆಯಲು, ಮನೆ ಒರೆಸಲು ಗೊತ್ತು ಮಾಡಿಕೊಂಡಳು. ಎರಡು ಮೂರು ವರ್ಷದ ಮಕ್ಕಳನ್ನು ನೋಡಿಕೊಂಡು ಈ ಮನೆಗೆಲಸ ತೂಗಿಸಿಕೊಂಡು ಹೋಗತೊಡಗಿದಳು.

ಕ್ರಮೇಣ ಸಿಂಜಾಂವ ಕೆಲಸಕ್ಕೆ ಹೋಗುವುದನ್ನು ಕಡಿಮೆ ಮಾಡಿದ. ಆಯಾಸ, ಸುಸ್ತು ಎಂದು ಕೆಲಸಕ್ಕೆ ಹೋದಲ್ಲಿ ತಲೆಯ ಮೇಲೆ ಕೈ ಹೊತ್ತು ಕುಳಿತು ಬಿಡತೊಡಗಿದ. ಕತ್ರೀನ ''ನಾಲ್ಕು ದಿನ ಮನೇಲಿರಿ – ನಾನು ಮನೇನ ನೋಡಿಕೊಳತ್ತೇನೆ'' ಎಂದಳು.

ಅವಳು ಹಾಗೆಯೇ ಮಾಡಿದಳು ಕೂಡ.

ಆದರೆ ಸಿಂಜಾಂವನ ಸೋಮಾರಿತನಕ್ಕೆ ಏನು ಕಾರಣ ಎಂಬುದು ಕ್ರಮೇಣ ಗೊತ್ತಾಯಿತು. ಕೆಲಸ ಮಾಡುವ ಮನಸಿದ್ದೂ ಕೆಲಸ ಮಾಡುವಲ್ಲಿಗೆ ಹೋದ ಆತ ಹತ್ಯಾರಗಳನ್ನು ಇರಿಸಿಕೊಂಡು ಹತಾಶನಾಗಿ ಏಕೆ ಕುಳಿತುಕೊಳ್ಳುತ್ತಾನೆ ಎಂಬುದು ತಿಳಿದುಬಂದಿತು.

ಅಂದು ಯಾಗ್ನೆನ ಕುಟುಂಬದವರ ಮಹಡಿ ಮನೆ ಕಟ್ಟುವಲ್ಲಿಗೆ ಹೋದ ಸಿಂಜಾಂವ ಕೆಲಸ ಆರಂಭಿಸಿದ ಅರ್ಧಗಂಟೆಗೆಲ್ಲ ಎದುರು ಮನೆಯ ಜಗಲಿ ಏರಿ ಕುಳಿತ.

''ನನ್ನಿಂದ ಏನೂ ಆಗದು ಕಣೋ ಅಲೆಕ್ಸಿ'' ಎಂದು ತನ್ನ ಸಹ ಕೆಲಸಗಾರನಿಗೆ ಹೇಳಿದ.

ಮನೆಗಾಗಿ ಹೆಂಡತಿಯೊಬ್ಬಳೇ ದುಡಿಯುತ್ತಾಳೆ ಎಂಬ ಆತಂಕ ಅವನಲ್ಲಿತ್ತು. ಮಕ್ಕಳನ್ನು ತಾಯಿಯ ಮನೆಯಲ್ಲಿ ಬಿಟ್ಟು ಆ ಹುಡುಗಿ ಹಗಲೆಲ್ಲ ಕೆಲಸ ಮಾಡುವುದು ಅವನ ಮನಸ್ಸಿಗೆ ಆಘಾತವನ್ನುಂಟುಮಾಡಿತ್ತು. ಹೆಂಡತಿಯ ಶ್ರಮವನ್ನು ತಾನು ತುಸುವಾದರೂ ಕಡಿಮೆ ಮಾಡಬೇಕೆಂಬ ಇರಾದೆ ಅವನಲ್ಲಿತ್ತು. ಆದರೆ ಇದಕ್ಕೆ ಅವನ ಆರೋಗ್ಯ ಅವಕಾಶ ಕೊಟ್ಟಿರಲಿಲ್ಲ. ದುಡಿಯಬೇಕು ಎಂಬ ಹುಮ್ಮಸ್ಸು ಹಟ ಇತ್ತು. ಆದರೆ ಕೆಲಸ ಮಾಡಲು ದೇಹ ಮುಂದಾಗುತ್ತಿರಲಿಲ್ಲ.

ಕೊಂಚಹೊತ್ತು ಕುಳಿತ ಸಿಂಜಾಂವ ಮತ್ತೆ ಎದ್ದ. ನಲವತ್ತು ಅಡಿ ಎತ್ತರದ ಗೋಡೆಯನ್ನೇರಿದ

ಕೆಲಸಗಾರರು ಕಲ್ಲುಗಳನ್ನು ತಂದು ಕೊಡುತ್ತಲಿದ್ದರು. ಒಂದು ಕಡೆಯಿಂದ ಗಾರೆ ಸಿಮೆಂಟಿನ ಸರಬರಾಜು ನಡೆದಿತ್ತು. ಸಿಂಜಾಂವ ಬಗ್ಗಿ ನಿಂತು ತೂಕದ ಗುಂಡನ್ನು ಇಳಿ ಬಿಟ್ಟು ಗೋಡೆಯ ಲಂಬಾಕೃತಿಯನ್ನು ಖಚಿತ ಪಡಿಸಿಕೊಂಡು ಗೋಡೆಯ ಮೇಲೆ ಗಾರೆ ಸುರಿಯುವಾಗ ಅಮ್ಮ ಎಂದು ಎದೆ ಹಿಡಿದುಕೊಂಡು ಕುಳಿತ. ಅಕ್ಕಪಕ್ಕದವರು, ಕೆಳಗಿದ್ದವರು ಏನು ಎಂದು ಕೇಳಿದರು. ಯಾರೋ ಮೇಲೆ ಹತ್ತಿ ಅಟ್ಟಣಿಗೆಯ ಮೇಲಿನಿಂದ ಅವನನ್ನು ಇಳಿಸಿಕೊಂಡರು.

ಸಿಂಜಾಂವನನ್ನು ಆಸ್ಪತ್ರೆಗೂ ಸೇರಿಸಿದರು.

ವೈದ್ಯರು ತಾತ್ಕಾಲಿಕವಾಗಿ ಔಷಧಿ ನೀಡಿದರು.

''ಸಿಂಜಾಂವನಿಗೆ ಹೃದಯಾಘಾತವಾಗಿದೆ,'' ಅವನಿಗೆ ಮಣಿಪಾಲಕ್ಕೆ ಕರೆದೊಯ್ದು ಕೂಡಲೇ ಶಸ್ತ್ರ ಚಿಕಿತ್ಸೆ ಮಾಡಿಸಿದರೆ ಆತ ಉಳಿಯುತ್ತಾನೆ'' ಎಂದು ವೈದ್ಯರು ಕತ್ರೀನ ಮತ್ತು ಅಲ್ಲಿ ನೆರೆದ ಅವಳ ಪರಿವಾರದವರ ಮುಂದೆ ಹೇಳಿ ತಮ್ಮ ಕೆಲಸ ಮುಗಿಸಿದರು.

ಆಸರೆಗಾಗಿ ಆಸ್ಪತ್ರೆಯ ಗೋಡೆಯನ್ನು ಹಿಡಿದು ನಿಂತ ಕತ್ರೀನ ಅಲ್ಲಿಯೇ ಕುಸಿದಳು. ಅವಳ ತಂಗಿಯರು ನಾದಿನಿಯರು ಅವಳಿಗೆ ಸಾಂತ್ವನ ಹೇಳುವ ಕೆಲಸ ಮಾಡಿದರು.

ಸಿಂಜಾಂವ ಮನೆ ಸೇರಿದ. ಹಾಸಿಗೆ ಹಿಡಿದ.

ಕತ್ರೀನ ಹುಚ್ಚು ನಾಯಿ ಅಟ್ಟಿಸಿಕೊಂಡು ಬರುತ್ತಿದೆ ಯೇನೋ ಎಂಬಂತೆ ಊರ ತುಂಬ ಅಲೆದಾಡಿದಳು.

ಲಾದ್ರು ಮೇಸ್ತ್ರೀ ಅವನ ಮಕ್ಕಳು - ''...ದೇವರೇ ನಮ್ಮನ್ನು ಕಾಪಾಡಬೇಕು'' ಎಂದು ಆಕಾಶದತ್ತ ಕೈ ತೋರಿಸಿದರು.

ಕತ್ರೀನಳ ತಂದೆ ತಾಯಿ ಮಕ್ಕಳು ಕೂಡ ''ನಿನಗೆ ಎಂತಹಾ ಕಷ್ಟ ಬಂತು ಮಗಳೆ... ಆ ದೇವ ಮಾತೆಯೇ ನಮ್ಮನ್ನು ರಕ್ಷಿಸಬೇಕು...'' ಎಂದರು.

ಊರಿನ ಕ್ರೀಸ್ತುವರಲ್ಲಿ ಪ್ರಮುಖರಾದವರು, ಬ್ಯಾಂಕ್ ಮ್ಯಾನೇಜರ್ ಮಿಸ್ಕತ್, ರೇಂಜರ್ ಮಿನಿನ ಜೇಸು, ಸಬ್‌ಇನ್ಸ್‌ಪೆಕ್ಟರ್ ಸಾಲ್ವದೋರ, ಜವಳಿ ಅಂಗಡಿ ಜುರ್ನಿಸೋಜ ಮತ್ತಿತರರು – ''ನಾವು ಪಾದರಿಗಳ ಹತ್ತಿರ ಮಾತಾಡತೇವೆ...ನಿನಗಾಗಿ ನಿನ್ನ ಗಂಡನಿಗಾಗಿ ದೇವರಲ್ಲಿ ಬೇಡಿಕೊಳ್ಳುತ್ತೇವೆ...'' ಎಂದರು.

ಕಾನ್ವೆಂಟಿನ ಸಿಸ್ಟರುಗಳು - ''ನಮ್ಮಿಂದ ಆಗುವ ಸಹಾಯ ನಾವು ಮಾಡತೇವೆ. ಹಾಗೇನೆ ನಮ್ಮ ದಿನನಿತ್ಯದ ಪ್ರಾರ್ಥನೆಯಲ್ಲಿ ನಿಮಗಾಗಿ ನಾವು ಏಸುಪ್ರಭುವಿನಲ್ಲಿ ವಿನಂತಿ ಮಾಡಿಕೊಳ್ಳುತ್ತೇವೆ...'' ಎಂದರು.

ಕತ್ರೀನ ಕೆಲಸ ಮಾಡುತ್ತಿದ್ದ ಮನೆಗಳವರಿಗೂ ಈ ವಿಷಯ ತಿಳಿಯಿತು. ಅವರು ಕೂಡ ಮರುಗಿದರು. ಅಯ್ಯೋ ಪಾಪ ಎಂದರು. ತಮ್ಮ ಕೈಲಾಗುವ ಸಹಾಯ ಮಾಡುವುದಾಗಿಯೂ ಇವರು ನುಡಿದರು.

ಊರಿನಲ್ಲಿದ್ದ ಲಯನ್ಸ್ ರೋಟರಿ ಕ್ಲಬ್‌ಗಳ ಪದಾಧಿಕಾರಿಗಳನ್ನೂ ಕಂಡುಬಂದಳು ಕತ್ರೀನ.

ಇವಳಿಗಿದ್ದ ದೊಡ್ಡ ಆಶ್ವಾಸನೆ ಎಂದರೆ ಗೌಳಿಬಾಪ (ಮಂದೆಯ ತಂದೆ) ಎಂದೇ ಕರೆಯಲ್ಪಡುತ್ತಿದ್ದ ಬಿಷಪ್ ಗುರುಗಳು. ಅವರು ಮನಸ್ಸು ಮಾಡಿದರೆ ಯಾವುದೂ ಕಷ್ಟವಲ್ಲ. ಎಲ್ಲರಿಗಿಂತ ಹೆಚ್ಚಿನ ನೆರವನ್ನು ಇವರು ನೀಡಬಲ್ಲರು ಎಂಬ ಬಗ್ಗೆ ಅವಳಿಗೆ ಯಾವುದೇ ಅನುಮಾನವಿರಲಿಲ್ಲ.

ವೈದ್ಯರ ಬಳಿ ಮಾತನಾಡಿ ಅವಳು ಗಂಡನ ಚಿಕಿತ್ಸೆಗೆ ಎಷ್ಟು ಹಣವಾಗಬಹುದು ಎಂಬ ಬಗ್ಗೆ ತಿಳಿದು ಕೊಂಡಿದ್ದಳು. ಶಸ್ತ್ರಚಿಕಿತ್ಸೆಗೇನೆ ಒಂದು ಒಂದೂ ಕಾಲು ಲಕ್ಷವಾಗಬಹುದು. ಉಳಿದ ಖರ್ಚಿಗೆ ಮತ್ತೆ ೨೫ ಸಾವಿರ. ಅಂದರೆ ಒಂದೂವರೆ ಲಕ್ಷ ರೂಪಾಯಿ ಕೈಯಲ್ಲಿ ಇಲ್ಲದೆ ಏನೂ ಮಾಡುವಂತಿಲ್ಲ.

ಈ ಅಂಕೆ ಕೇಳಿದಾಗಲೇ ಅವಳು ಗಾಬರಿಯಾಗಿದ್ದಳು. ಆದರೂ ದೇವರಿದ್ದಾನೆ, ಗುರುಗಳು, ಬಿಷಪ್‌ಗಳು ಕನ್ಯಾಸ್ತ್ರೀಗಳು ಇದ್ದಾರೆ ಎಂಬ ನಂಬಿಕೆ. ಇವರೆಲ್ಲ ಕೈ ಬಿಡಲಾರರು ಎಂಬ ವಿಶ್ವಾಸ.

ಕತ್ರೀನ ನೇರವಾಗಿ ಪಾದರಿಗಳ ಬಂಗಲೆಗೇನೆ ಹೋಗಿ ಬಾಗಿಲು ತಟ್ಟಿದಳು.

ಅವಳು ಇಂತಹಾ ಕೆಲಸಗಳಿಗೆ ತನ್ನನ್ನು ತಾನು ಸಿದ್ಧಪಡಿಸಿಕೊಂಡಿದ್ದಳು. ಕೇಳುವುದು ಹೇಗೆ, ಯಾಚಿಸುವುದು ಹೇಗೆ ಎಂದು ಹಿಂಜರಿದರೆ ಗಂಡನ ಜೀವ ಉಳಿಯುವುದಿಲ್ಲ. ಮೂವತ್ತನೇ ವಯಸ್ಸಿಗೇನೆ ತಾನು ವಿಧವೆಯಾಗಬೇಕಾಗುತ್ತದೆ. ತನ್ನ ಈರ್ವರು ಮಕ್ಕಳು ಅನಾಥರಾಗುತ್ತಾರೆ. ಆತ ಉಳಿಯಬೇಕೆಂದರೆ ತಾನು ಎಲ್ಲ ಬಾಗಿಲುಗಳನ್ನೂ ತಟ್ಟಬೇಕು. ಎಲ್ಲರ ಎದುರೂ ಕೈ ಚಾಚಬೇಕು ಎಂಬ ತೀರ್ಮಾನಕ್ಕೆ ಬಂದಿದ್ದಳು. ಈ ಕೆಲಸವನ್ನು ಆರಂಭಿಸಿದ್ದಳು ಕೂಡ.

ಅವಳು ಪಾದರಿಗಳ ಬಂಗಲೆಗೆ ಬಂದಾಗ ಪಾದರಿಗಳು ಹುಡುಗಿಯರಿಗೆ ಭಕ್ತಿಗೀತೆಗಳನ್ನು ಹೇಳಿಕೊಡುತ್ತಿದ್ದರು.

ಕತ್ರೀನಳನ್ನು ನೋಡಿದ್ದೆ ಪಾದರಿಗಳು ''ಇನ್ನು ಹೋಗಿ, ಅಭ್ಯಾಸ ಸಾಕು'' ಎಂದರು.

ಹುಡುಗಿಯರು ಬಾಯ್, ಬ್ಲೆಸ್‌ಮಿ ಎಂದೆಲ್ಲಾ ಚೀರಾಡಿ ಕುಲುಕುಲು ನಕ್ಕು ಹೋಗುತ್ತಿರಲು ಪಾದರಿಗಳು ಕತ್ರೀನಳತ್ತ ತಿರುಗಿದರು.

''ಬಾ... ಕತ್ರೀನ ಬಾಯಿ'' ಎಂದರು.

''ಪದ್ರಾ ಬಾ... ನಾನೀಗ ದಾರೀ ಮೇಲೆ ಬಿದ್ದಿದೀನಿ'' ಎಂದು ಸೆರಗನ್ನು ತುಟಿಗಳಿಗೆ ಅಂಟಿಸಿಕೊಂಡಳು.

''ನನಗೆ ಗೊತ್ತು ಕತ್ರೀನ ಬಾಯಿ... ನಾನು ನಿತ್ಯ ನಿನ್ನ ಗಂಡನಿಗಾಗಿ ಬೇಡತಿದೀನಿ.''

''ಬಿಷಪ್ ಗುರುಗಳಿಂದ ಏನಾದರೂ ಸಹಾಯ ಕೊಡಿಸಬೇಕು ಪದ್ರಾಬ – ಅವರು ಮನಸ್ಸು ಮಾಡಿದರೆ...''

''ನೀನು ಅವರಲ್ಲಿಗೆ ಒಮ್ಮೆ ಹೋಗಿ ಬಾ... ನಾನು ಕೂಡ ಅವರ ಹತ್ತಿರ ಮಾತಾಡತೇನೆ... ಎಂದರು ಪಾದರಿಗಳು.

ಕತ್ರೀನ ಶಸ್ತ್ರಚಿಕಿತ್ಸೆಗೆ ಎಷ್ಟು ಹಣ ಆಗುತ್ತದೆ ಎಂಬುದನ್ನು ಹೇಳಿದಳು. ಮಣಿಪಾಲಕ್ಕೆ ಹೋಗಬೇಕು. ತಾನಲ್ಲಿ ಹೋಗಿ ಉಳಿಯಬೇಕು. ತನ್ನ ಮನೆಯವರಾಗಲಿ, ತಂದೆಯ ಮನೆಯವರಾಗಲಿ ಅನುಕೂಲಸ್ಥರಲ್ಲ. ಊರ ಜನರಿಂದ ಜಾತಿಯವರಿಂದ ಹೆಚ್ಚಿನ ಸಹಾಯ ಸಿಗಲಾರದು. ಮುಖ್ಯವಾಗಿ ಬಿಷಪ್ ಗುರುಗಳೇ ಸಹಾಯ ಮಾಡಬೇಕು ಎಂದಳು.

''ದೇವರನ್ನು ನಂಬು. ನಿನಗೆ ಅನುಕೂಲವಾಗುತ್ತೆ. ಬಿಷಪ ಗುರುಗಳ ಹತ್ತಿರ ಹೋಗಿ ಬಾ'' ಎಂದರು ಪಾದರಿಗಳು.

ಊರಿನಲ್ಲಿ ಕಿರುಪಾದರಿಗಳಲ್ಲದೆ ಹಿರಿಯ ಪಾದರಿಗಳೂ ಇದ್ದರು. ಸುಮಾರು ಅರವತ್ತೈದರ ಗಡಿ ದಾಟಿದವರು. ಊರಿನ ಚರ್ಚಿನಲ್ಲಿಯೇ ಪೂಜೆ ಪ್ರವಚನ ಮಾಡುತ್ತಿದ್ದರು. ಅಕ್ಕ ಪಕ್ಕದ ಊರುಗಳಿಗೆ ಪೂಜೆಗೆ ಮತ್ತೊಂದಕ್ಕೆ ಕಿರಿ ಪಾದರಿಗಳು ಹೋಗುತ್ತಿದ್ದರು.

ಕತ್ರೀನ ಹಿರಿಯ ಪಾದರಿಗಳ ಕೊಠಡಿ ಬಾಗಿಲನ್ನು ಕೂಡ ಕಟಕಟಿಸಿದಳು. ಅವರು ಎದ್ದು ಬರುವುದೇ ತುಸು



ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನದ ಯಶಸ್ವಿ ಐವತ್ತನೇ ದಿನದ ಕಾರ್ಯಕ್ರಮ ನಗರದ ನಿಮ್ಹಾನ್ಸ್ ಆಸ್ಪತ್ರೆಯಲ್ಲಿ ಜರುಗಿತು. ನಿಮ್ಹಾನ್ಸ್‌ನ ನಿರ್ದೇಶಕರು ಹಾಗೂ ಕುಲಪತಿಗಳಾದ ಡಾ|| ಡಿ. ನಾಗರಾಜ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು (ಚಿತ್ರದಲ್ಲಿ ಎಡತುದಿಯಲ್ಲಿ). ಅದೇ ಸಂದರ್ಭದಲ್ಲಿ ಡಾ|| ಸಿ. ಆರ್. ಚಂದ್ರಶೇಖರ್ ಮತ್ತು ಶ್ರೀ ಗೋಪಾಲಕೃಷ್ಣ ಅವರ ವೈದ್ಯಕೀಯ ಪುಸ್ತಕಗಳನ್ನೂ ಬಿಡುಗಡೆ ಮಾಡಲಾಯಿತು.

ತಡವಾಯಿತು. ಹುಷ್ ಎಂದು ಬಾಗಿಲು ತೆರೆದು ಯಾರು ಎಂದು ಕೇಳಿದರು.

''ಓ! ಕತ್ರೀನ ಬಾಯಿ... ಬಾ... ಬಾ...'' ಎಂದರು. ''ವಿಷಯ ಕೇಳಿದೆ... ಮುಂದೆ ಏನು ಮಾಡತೀಯ?'' ಎಂದು ಕೇಳಿದರು.

''ಮಾಡೋ ಪ್ರಯತ್ನ ಮಾಡು... ಆದರೆ ದೇವರ ಮೇಲೆ ಭಾರ ಹಾಕು. ಚಿಕ್ಕಮಕ್ಕಳನ್ನು ಕೂರಿಸಿಕೊಂಡು ದೇವರ ಪ್ರಾರ್ಥನೆ ಹೇಳಿಕೊಡು. ಮಕ್ಕಳ ಪ್ರಾರ್ಥನೆ ದೇವರಿಗೆ ಕೇಳಿಸುತ್ತೆ...'' ಎಂದೆಲ್ಲ ಹೇಳಿದರು.

ಕತ್ರೀನ ಅಲ್ಲಿ ಒಂದಿಷ್ಟು ಹೊತ್ತು ಕಳೆದು ತಿರುಗಿ ಬಂದಳು. ಅವರು ಕೂಡ ದಿನನಿತ್ಯದ ಪ್ರಾರ್ಥನೆಯಲ್ಲಿ ದೇವರಲ್ಲಿ ಸಿಂಜಾಂವಗಾಗಿ ಬೇಡಿಕೊಳ್ಳುವುದಾಗಿ ಹೇಳಲು ಮರೆಯಲಿಲ್ಲ.

* * *

ಇದು ತಡ ಮಾಡುವ ವಿಷಯವಲ್ಲವೆಂದು ಕತ್ರೀನ ಹೋಗಿ ಬಿಷಪ ಗುರುಗಳನ್ನು ಕಂಡಳು. ಗೇಟನ್ನು ಕಾಯುವ ವಾಚ್‌ಮನ್ ಅವಳನ್ನು ಮೊದಲು ಬಿಡಲಿಲ್ಲ. ನಂತರ ಬಿಷಪ ಗುರುಗಳ ಖಾಸಗಿ ಕಾರ್ಯದರ್ಶಿಗಳು ಅವಳ ವಿಚಾರಣೆ ಮಾಡಿದರು. ಬಿಷಪ ಗುರುಗಳು ಪ್ರೀತಿ ಯಿಂದಲೇ ಅವಳನ್ನು ಕಂಡರು. ಇವಳ ಕಷ್ಟ ಕಿವಿಗೆ ಹಾಕಿಸಿ ಕೊಂಡು ಐದಾರು ಬಾರಿ ಜೇಸಸ್ ಜೇಸಸ್ ಎಂದರು.

''ನಾನು ಫಾದರ್ ಗ್ರೆಗೋರಿಯವರಿಗೆ ಹೇಳತೇನೆ... ನೀನು ಹೋಗು.. ದೇವರು ನಿನ್ನ ಜೊತೆಯಲ್ಲಿ ಇದ್ದಾನೆ'' ಎಂದರು.

ಅವರೂ ಕೂಡ ''ನಿನ್ನ ಕಷ್ಟಗಳು ಬೇಗನೆ ಬಗೆ ಹರಿಯಲೆಂದು ನಾನು ಪ್ರಭುವಿನಲ್ಲಿ ಬೇಡುತ್ತೇನೆ...'' ಎಂದು ಹೇಳಲು ಮರೆಯಲಿಲ್ಲ.

* * *

ನಂತರದ ಭಾನುವಾರ ಇಗರ್ಜಿಯಲ್ಲಿ ಪೂಜೆ ನಡೆಯುವಾಗ ದೇವರ ಪೀಠದ ಮುಂದೆ ಒಂದು ರೊಟ್ಟಿನ ಪೆಟ್ಟಿಗೆ ಇಡಲಾಯಿತು.' ಅದರ ಮೇಲೆ ಒಂದು ಚೀಟಿ. ''ಹೃದಯ ಚಿಕಿತ್ಸೆ ಆಗಬೇಕಾಗಿರುವ ಸಿಂಜಾಂವನ ಸಹಾಯಾರ್ಥ ನಿಮ್ಮ ಕಾಣಿಕೆ'' ಎಂಬ ಬರಹ.

ಇದರ ಬಗ್ಗೆ ಪಾದರಿ ಗ್ರೆಗೋರಿ ಕೂಡ ಪ್ರವಚನದ ನಡುವೆ ಕೆಲ ಮಾತುಗಳನ್ನು ಹೇಳಿದರು.

ಬಿಷಪ ಗುರುಗಳು ಆದೇಶ ನೀಡಿದ್ದಾರೆ. ನೀವೆಲ್ಲ ನಿಮ್ಮ ಶಕ್ತಿ ಮೀರಿ ಕಾಣಿಕೆ ನೀಡಿ ಹಾಗೂ ಸಿಂಜಾಂವಗಾಗಿ ಪ್ರಾರ್ಥಿಸಿ ಎಂದು ಅವರು ನುಡಿದರು.

ಯಾವುದೋ ನಿರೀಕ್ಷೆ ಇರಿಸಿಕೊಂಡು ಎತ್ತರದ ಬೆಟ್ಟವೇರಿದವರು ಅಲ್ಲಿಂದ ಯಾವ ಆಸೆಯೂ ಕೈಗೂಡದೆ ಕೆಳಗೆ ಬಿದ್ದಂತಾಯಿತು ಕತ್ರೀನಾಗೆ. ಗಂಡನ ಗುಂಡಿಗೆ ರೋಗದ ಶಸ್ತ್ರ ಚಿಕಿತ್ಸೆಗಾಗಿ ಅವಳ ಕೈಯಲ್ಲಿ ಸಂಗ್ರಹವಾದ ಹಣ ಕೇವಲ ಐದುಸಾವಿರದ ಮುನ್ನೂರು ಮಾತ್ರ. ಇದರಲ್ಲಿ ಚರ್ಚ್‌ನಲ್ಲಿ ಸಂಗ್ರಹವಾದದ್ದು, ಕನ್ಯಾಸ್ತ್ರೀಗಳು ಕೊಟ್ಟದ್ದು, ಕೆಲಸದ ಮನೆಯವರು ನೀಡಿದ್ದು, ಸಂಘ ಸಂಸ್ಥೆಗಳವರು, ಊರಿನ ಶ್ರೀಮಂತರು ಉದಾರವಾಗಿ ದಯಪಾಲಿಸಿದ್ದು ಎಲ್ಲವೂ ಸೇರಿಕೊಂಡಿತು. ಬಿಷಪ್ ಗುರು ಗಳಿಂದ ಮತ್ತೂ ಹೆಚ್ಚಿನ ಹಣ ಬಂದೀತು ಎಂದವಳು ನಿರೀಕ್ಷೆ ಇರಿಸಿಕೊಂಡಿದ್ದಳು. ಬೆಂಗಳೂರು, ಮಂಗಳೂರಿ ನಲ್ಲಿರುವ ಯಾವುದಾದರೂ ಕ್ರಿಶ್ಚಿಯನ ಆಸ್ಪತ್ರೆಗೆ ಗಂಡನನ್ನು ಸೇರಿಸಬಹುದು ಎಂದು ಯಾರೋ ಒಂದಿಬ್ಬರು ಹೇಳಿದ್ದರು. ಈ ಕಾರ್ಯಕ್ಕೆ ಯಾರೂ ಮುಂದಾಗಲಿಲ್ಲ.

ಈ ಅಲ್ಪ ಹಣದಲ್ಲಿ ನಾನೇನು ಮಾಡಲಿ ಎಂದವಳು ವಿಚಾರ ಮಾಡಿದಳು. ಹಣ ಬಂದಂತೆ ಅದನ್ನು ದೇವರ ಗೂಡಿನಲ್ಲಿ ಇಡುತ್ತ ಬಂದ ಆಕೆ ಮತ್ತೆ ಅತ್ತ ನೋಡಲು ಹೋಗಲಿಲ್ಲ.

ದೇವರೇ ಏನು ಮಾಡಲಿ ? ಏನು ಮಾಡಲಿ ? ಎಂದು ಸಂತೆಯಲ್ಲಿ ಕಳೆದುಹೋದ ಮಗುವಿನಂತೆ ಅವಳು ಹಲುಬಿದಳು. ಕೊನೆಯದಾಗಿ ಅವಳಿಗೊಂದು ದಾರಿ ಕಂಡಿತು. ಈ ಬಗ್ಗೆ ಮಾತನಾಡಲು ಅವಳು ಮತ್ತೊಮ್ಮೆ ಕಿರಿಯ ಪಾದರಿಗಳ ಬಂಗಲೆಯ ಮೆಟ್ಟಲು ಹತ್ತಿ ಬಾಗಿಲನ್ನು ಕಟಕಟಿಸಿದಳು.

''ಕತ್ರೀನ ಬಾಯಿ.. ಮಣಿಪಾಲಕ್ಕೆ ಹೋಗಲಿಲ್ಲವೇ?'' ಎಂದು ಕೇಳಿದರು ಪಾದರಿ ಗ್ರೆಗೋರಿ.

ದೇವರ ಪೀಠದ ಮುಂದಿರಿಸಿದ ರಟ್ಟಿನ ಪೆಟ್ಟಿಗೆ ಯಿಂದ ಅವರೇ ಸಾವಿರದ ಇನ್ನೂರು ರೂಪಾಯಿಗಳನ್ನು ತೆಗೆದುಕೊಟ್ಟಿದ್ದರು.

''ಇಲ್ಲ ಪದ್ರಾಬಾ...'' ಎಂದಳು ಕತ್ರೀನ ತುಟಿ ಕಚ್ಚಿಕೊಂಡು.

''ಈಗ ಏನು ಬಂದೆ ?''

''ಪೊಟ್ಟಕ್ಕೆ ಕರಕೊಂಡು ಹೋಗತಿದಿನಿ ಅವರನ್ನ.'' ಪೊಟ್ಟ ಕೇರಳದಲ್ಲಿಯ ಒಂದು ಪುಣ್ಯ ಸ್ಥಳ. ಅಲ್ಲಿಯ ಪಾದರಿಗಳು ಪ್ರಾರ್ಥನೆ ಮಾಡುವುದರ ಮೂಲಕ ಎಂತಹಾ ರೋಗಗಳನ್ನೂ ವಾಸಿ ಮಾಡುತ್ತಾರೆಂಬುದು ಒಂದು ಪ್ರತೀತಿ. ಸಾವಿರಾರು ಜನ ಸಾಮೂಹಿಕ ಪ್ರಾರ್ಥನೆ ಮಾಡಿದರೆ ರೋಗಗಳು ವಾಸಿಯಾಗುತ್ತವೆ, ಕಷ್ಟಗಳು ಪರಿಹಾರವಾಗುತ್ತವೆ, ಸಂಕಟಗಳು ದೂರವಾಗುತ್ತವೆ ಎಂಬುದು ಕ್ರೈಸ್ತರು, ಅಕ್ರೈಸ್ತರು ಇರಿಸಿಕೊಂಡಿರುವ ನಂಬಿಕೆ.

ಹಿಂದಿನ ದಿನ ಕತ್ರೀನ ಏನು ಮಾಡಲಿ ದೇವರೆ ಎಂದು ಗಂಡನ ಬಳಿ ಕುಳಿತು ವಿಚಾರ ಮಾಡುತ್ತಿರುವಾಗ ಅವಳಿಗೆ ಈ ವಿಷಯ ತಟ್ಟನೆ ಹೊಳೆದಿತ್ತು.

''ದೇವ ಮಾತೆಯೇ ನನಗೆ ದಾರಿ ತೋರಿಸಿದಳು'' ಅಂದುಕೊಂಡಳು ಅವಳು.

ಈ ಬಗ್ಗೆ ಒಂದು ಮಾತು ಕೇಳಲು ಪಾದರಿಗಳ ಬಳಿ ಬಂದಳು. ''ಬಹಳ ಒಳ್ಳೆಯ ವಿಚಾರ ಕತ್ರೀನ ಬಾಯಿ. ಅಲ್ಲಿಯ ಪಾದರಿಗಳಲ್ಲಿ ಒಂದು ಮಹಾನ್ ಶಕ್ತಿ ಇದೆ. ಅವರು ರೋಗಿಗಳನ್ನು ದೇವರ ಪೀಠದ ಮುಂದೆ ಕೂರಿಸಿ, ಅವರ ತಲೆಯ ಮೇಲೆ ಕೈ ಇರಿಸಿ ಪ್ರಾರ್ಥನೆ ಮಾಡಿದರೆ ತತ್‌ಕ್ಷಣ ರೋಗ ವಾಸಿಯಾಗುತ್ತೆ. ಭೂತಗಳು ಬಿಟ್ಟು ಹೋಗತಾವೆ. ಬಹಳ ಜನರಿಗೆ ಅನುಕೂಲವಾಗಿದೆ. ನೀನು ನಿನ್ನ ಗಂಡನನ್ನು ಕರೆದುಕೊಂಡು ಹೋಗಿ ಬಾ...''

ಅವರು ಕತ್ರೀನಾಳನ್ನು ಹುರಿದುಂಬಿಸಿದರು.

ಪೊಟ್ಟಾದ ಬಗ್ಗೆ ಪ್ರಚಲಿತವಾಗಿರುವ ಇನ್ನೂ ಕೆಲ ವಿಷಯಗಳನ್ನು ಹೇಳಿದರು.

ಕತ್ರೀನ ಹೊರಟಾಗ - ''ಹೋಗಿ ಬಾ ಕತ್ರೀನ ಬಾಯಿ'' ಎಂದು ಹೇಳಿ ಮುಂದೆ - ''ನಿನಗಾಗಿ ನಾನು ದೇವರಲ್ಲಿ...'' ಎಂದು ಹೇಳಹೊರಟವರು ಏಕೋ ಅಲ್ಲಿಗೇನೆ ನಾಲಿಗೆ ಕಚ್ಚಿಕೊಂಡು ಸುಮ್ಮನಾದರು.

* * *

ಊರವರೆಲ್ಲ ಕತ್ರೀನ ಬಾಯಿಯ ನಿರ್ಧಾರವನ್ನು ಮೆಚ್ಚಿ ಕೊಂಡರು. ಕನ್ಯಾಸ್ತ್ರೀಯರು ಒಳ್ಳೆಯ ಕೆಲಸ - ಎಂದರು.

ಬ್ಯಾಂಕ್ ಮ್ಯಾನೇಜರ್ ಮಿಸ್ಕತ್ - ''ಇಷ್ಟು ಹೊತ್ತಿಗೆ ನೀನು ಹೋಗಿ ಬಂದಿದ್ದಿದ್ದರೆ ನಿನ್ನ ಗಂಡ ಕೆಲಸದ ಮೇಲೆ ಹೋಗಬಹುದಿತ್ತು... '' ಎಂದರು.

ರೇಂಜರ್ ಮಿನಿನ ಜೇಸು - ''ಆಸ್ಪತ್ರೆ ಔಷಧಿ ಎಲ್ಲ ವ್ಯರ್ಥ... ನಿನಗೆ ನಂಬಿಕೆ ಇದೆ... ಇದೊಂದೇ ದಾರಿ....'' ಎಂದು ನುಡಿದ.

ಸಬ್‌ಇನ್‌ಸ್ಪೆಕ್ಟರ್ ಸಾಲ್ವದೋರ – ''ನೀನು ತಡಮಾಡದೆ ಬಾಯೀ... ನಾಳೇನೆ ಹೊರಡು'' ಎಂದ.

ಜವಳಿ ಅಂಗಡಿ ಜುರ್ನಿಸೋಜ ''ಒಳ್ಳೆ ತೀರ್ಮಾನ... ಕಷ್ಟ ಬಂದಾಗ ನಮಗೆ ದೇವರೇ ಗತಿ ಅಲ್ವಾ ?'' ಎಂದ.

ಒಂದು ಶನಿವಾರ, ಸಿಂಜಾಂವನಿಗೆ ಹೃದಯದ ಕಾಯಿಲೆ ಕಾಣಿಸಿಕೊಂಡ ಮೂರು ತಿಂಗಳ ನಂತರ ಕತ್ರೀನ ಗಂಡನನ್ನು ಕರೆದುಕೊಂಡು ರೈಲಿನಲ್ಲಿ ಪೊಟ್ಟಾಕ್ಕೆ ಹೊರಟಳು. ಹಲವರು ಅವಳ ಮನೆಗೆ ಬಂದು ಪೊಟ್ಟಾಕ್ಕೆ ಹೇಳಿಕೊಂಡ ಹರಕೆಯ ಹಣವನ್ನು ಅವಳ ಕೈಗಿತ್ತು–

''ಅಲ್ಲಿ... ಕಾಣಿಕೆ ಡಬ್ಬಿಗೆ ಹಾಕಿಬಿಡು'' ಎಂದರು.

ಕೆಲವರು ಪೊಟ್ಟಾದಿಂದ ಜಪಸರ, ಪ್ರಸಾದ, ಪವಿತ್ರ ತೀರ್ಥ, ಎಣ್ಣೆ ಇತ್ಯಾದಿ ತರಲು ಹೇಳಿದರು.

''ಸಿಂಜಾಂವ ಬಾಬ... ವಾಸಿಯಾಗಿ ಬಾ'' ಎಂದು ಕೂಡ ಹಾರೈಸಿದರು.

ಮಂಗಳೂರಿಗೆ ಹೋಗುವ ರೈಲು ಊರಿನ ನಿಲ್ದಾಣ ಬಿಟ್ಟಾಗ ಸಂಜೆಯಾಗಿತ್ತು.

ಮೂರು ತಿಂಗಳುಗಳಿಂದ ಊಟ ಮಾಡದೇ ನಿದ್ದೆ ಮಾಡದೆ ಊರ ಬೀದಿಬೀದಿಗಳಲ್ಲಿ ಅಲೆದಾಡಿ, ಕಂಡ ಕಂಡವರ ಮುಂದೆ ಕೈ ಚಾಚಿ ತನ್ನ ಗೋಳು ಹೇಳಿಕೊಂಡ, ನಿತ್ಯ ದೇವರ ಮುಂದೆ ಮೇಣದ ಬತ್ತಿ ಹಚ್ಚಿ ಬಂದು ದಾರಿ ತೋರಿಸು ಎಂದು ಕೇಳಿಕೊಂಡ, ಈ ಮೂರು ತಿಂಗಳಲ್ಲಿ ಸೊರಗಿ ಎರಡು ಕರಟದಷ್ಟು ಮಾಂಸ, ಒಂದು ಚಮಚದಷ್ಟು ರಕ್ತ ಇಷ್ಟನ್ನೇ ಮೈಯಲ್ಲಿ ಉಳಿಸಿಕೊಂಡ ಕತ್ರೀನ ರೈಲಿನ ಕಿಟಕಿಗೆ ಒರಗಿ ಕುಳಿತು, ನಿಲ್ದಾಣದ ಮೇಲೆ ನಿಂತ ತನ್ನ ಆಪ್ತರಿಗೆ ಬಂಧುಗಳಿಗೆ ಕೈ ಬೀಸಿದಾಗ ಅವಳ ಕಣ್ಣುಗಳು ಮಸುಕಾದುವು. ಊರು ಹಿಂದುಳಿಯಿತು.

* * *

ವಿಚಿತ್ರವೆಂದರೆ ಕತ್ರೀನಬಾಯಿ ಗಂಡನನ್ನು ಕರೆದುಕೊಂಡು ಪೊಟ್ಟಾಗೆ ಹೋದ ಮಾರನೇ ದಿನ ಚರ್ಚಿನಲ್ಲಿ ಹಿರಿಯ ಪಾದರಿಗಳು ಬಲಿಪೀಠದ ಮೇಲೆಯೇ ಕುಸಿದರು.

ಅರವತ್ತೈದರ ಪಾದರಿಗಳು ಗಟ್ಟಿಮುಟ್ಟಾಗಿದ್ದರು. ಆದರೆ ಸ್ಥೂಲಕಾಯ. ನಿತ್ಯ ಮಾಂಸ, ಶುಕ್ರವಾರ ಮೀನು, ಒಳ್ಳೆಯ ಆಹಾರ. ಸಂಜೆ ಬಾಲ್ಕನಿಯಲ್ಲಿ ಬೈಬಲಿನ ಪುಟ ತಿರುವಿ ಹಾಕುತ್ತ ಶತಪಥ ತಿರುಗುವಾಗ ಖಾರ ಹಚ್ಚಿದ ಗೋಡಂಬಿ ತಿನ್ನುವುದು, ಎಂದೆಲ್ಲ ಅಭ್ಯಾಸ ರೂಢಿಸಿ ಕೊಂಡಿದ್ದ ಅವರು ಆರೋಗ್ಯದಿಂದಿದ್ದರು. ಒಳ್ಳೆಯವರೂ ಕೂಡ. ದೈವಭಕ್ತಿ ಹೆಚ್ಚು. ಯಾರನ್ನೂ ಜೋರುಮಾಡಿ ಗೊತ್ತಿರಲಿಲ್ಲ. ಎಲ್ಲರನ್ನೂ ಪ್ರೀತಿ ಸ್ನೇಹದಿಂದ ನೋಡಿ ಕೊಂಡವರು. ಐದಾರು ಊರುಗಳಲ್ಲಿ ಸೇವೆ ಮಾಡಿದ್ದರು. ''ವಯಸ್ಸಾಯಿತು ವೃದ್ಧಾಶ್ರಮಕ್ಕೆ ಬಂದು ಇರಿ'' ಎಂದು ಬಿಷಪ ಗುರುಗಳು ಹೇಳಿದ್ದರು. ''ಇನ್ನೊಂದು ವರ್ಷ ಇಲ್ಲಿ

ಜನರ ಸೇವೆ ಮಾಡುತ್ತೇನೆ'' ಎಂದು ಹೇಳಿ ಇಳಿದ್ದರು.

ಭಾನುವಾರ ಬೆಳಿಗ್ಗೆ ಗಾಯನ ಪೂಜೆಯನ್ನು ಅವರೇ ಮಾಡುವುದು ರೂಢಿ. ಈ ಹುಡುಗ ಪಾದರಿಗಳಲ್ಲಿ ಭಕ್ತಿ ಇರುವುದಿಲ್ಲ ಎಂಬ ಕಾರಣಕ್ಕೆ ವಾರದ ಈ ಪ್ರಮುಖ ಪೂಜೆಯನ್ನು ಅವರೇ ನೆರವೇರಿಸುತ್ತಿದ್ದರು. ನಡುವೆ ದಿವ್ಯ ಪ್ರಸಾದ ವಿತರಣೆಗೆ ಮಾತ್ರ ಕಿರಿಯ ಪಾದರಿಗಳು, ಕನ್ಯಾಸ್ತ್ರೀಗಳು ನೆರವು ನೀಡುತ್ತಿದ್ದರು.

ಪವಿತ್ರ ಉಡುಗೆ ಧರಿಸಿ ಪೀಠಬಾಲಕರ ಜೊತೆ ಅವರು ದೇವರ ಪೀಠವನ್ನು ಏರಿದರೆಂದರೆ ಅಲ್ಲೊಂದು ಪ್ರಭೆ ತುಂಬಿಕೊಳ್ಳುತ್ತಿತ್ತು. ಪೂಜೆಗೊಂದು ಪಾವಿತ್ರ್ಯತೆ ಬರುತ್ತಿತ್ತು. ಜನ ಅವರ ಮೆದುವಾದ, ದೃಢವಾದ, ಭಕ್ತಿ ಪೂರಿತವಾದ ದನಿಗೆ ಪರವಶರಾಗಿ ಪೂಜೆಯನ್ನು ಆಲಿಸುತ್ತಿದ್ದರು.

ಅಂದು ಅದು ಗಾಯನ ಪೂಜೆ.

ಪೂಜೆಯ ನಡುವೆ ದೇವರ ವಾಕ್ಯವನ್ನು ಮಿನಿನ ಜೇಸುವಿನ ಮಗಳು ಓದಿ ಪೀಠದ ಮೇಲಿನಿಂದ ಕೆಳಗೆ ಇಳಿದಿದ್ದಳು. ಕುರ್ಚಿಯಲ್ಲಿ ಕುಳಿತ ಹಿರಿಯ ಪಾದರಿಗಳಿಗೆ ಎದ್ದು ನಿಲ್ಲಲು ಪೀಠ ಬಾಲಕರು ನೆರವು ನೀಡಿದರು. ಅವರು ಎದ್ದು ನಿಂತರು ಕೂಡ. ಆದರೆ ಹಾಗೆ ನಿಂತವರು ಮುಖ ಕಿವುಚಿ ಹಾಗೆಯೇ ಕುಸಿದರು. ಜೇಸಸ ಎಂದು ಸಣ್ಣಗೆ ಕೂಗಿಕೊಂಡರು. ಇಗರ್ಜಿಯಲ್ಲಿದ್ದ ಮಿರೋಣ, ಗುರ್ಕಾರ ಮೊದಲಾದವರೆಲ್ಲ ದೇವರ ಪೀಠದತ್ತ ಓಡಿದರು.

* * *

ಜಿಲ್ಲಾ ಕೇಂದ್ರದಿಂದ ಬಿಷಪ ಗುರುಗಳು ವಿಶೇಷ ವೈದ್ಯರ ತಂಡವೊಂದನ್ನು ಕಳಿಸಿದರು. ಹಿಂದೆಯೇ ಬೆಂಗಳೂರಿನಿಂದ ಪ್ರಖ್ಯಾತವಾದ ಕ್ರಿಶ್ಚಿಯನ್ ಆಸ್ಪತ್ರೆಯ ಆಂಬುಲೆನ್ಸ್ ವಾಹನವೊಂದು ಊರಿಗೆ ಬಂದಿತು. ಹಿರಿಯ ಪಾದರಿಗಳಿಗೆ ತುರ್ತು ಚಿಕಿತ್ಸೆ ನೀಡಿ ಅದೇ ವಾಹನದಲ್ಲಿ ಅವರನ್ನು ಬೆಂಗಳೂರಿಗೆ ಕರೆದೊಯ್ಯಲಾಯಿತು. ಹಿರಿಯ ಪಾದರಿಗಳನ್ನು ಬೀಳ್ಕೊಡಲು ಊರಿನ ಕ್ರಿಸ್ತುವರೆಲ್ಲ ಚರ್ಚಿನ ಮುಂದೆ ನೆರೆದಿದ್ದರು. ವಾಹನ ಹೊರಡುವ ಮುನ್ನ ಕಿರಿಯ ಪಾದರಿ ಜನರನ್ನು ಕುರಿತು -

''ಹಿರಿಯ ಪಾದರಿಗಳು ನಾಳೆಯೇ ಹೃದಯ ಶಸ್ತ್ರ ಚಿಕಿತ್ಸೆಗೆ ಒಳಗಾಗಲಿದ್ದಾರೆ. ಅವರು ಬೇಗನೆ ಗುಣ ಮುಖವಾಗಿ ಬರಲೆಂದು ನಾವು ಒಂದು ಪರಲೋಕ ಮಂತ್ರ ಐದು ನಮೋರಾಣೆ ಮಂತ್ರವನ್ನು ಜಪಿಸೋಣ'' ಎಂದು ಹೇಳಿ ಆ ಜಪಗಳನ್ನು ಹೇಳಿಕೊಟ್ಟರು.

ನಂತರ ವಾಹನ ಚರ್ಚಿನ ಕಾಂಪೌಂಡನ್ನು ದಾಟಿತು.

* * *

ಮುಂದೆ....

ಪೊಟ್ಟಾಕ್ಕೆ ಹೋದ ಕತ್ರೀನಳ ಗಂಡ ಸಿಂಜಾಂವ ಗುಣ ಹೊಂದಿ ಬಂದನೆ, ಬೆಂಗಳೂರಿಗೆ ಹೋದ ಹಿರಿಯ ಪಾದರಿಗಳ ಹೃದಯ ಶಸ್ತ್ರಚಿಕಿತ್ಸೆ ಮುಗಿದು ಅವರು ಚೇತರಿಸಿಕೊಂಡು ಬಂದರೆ ಅನ್ನುವುದು ಇಲ್ಲಿ ಮುಖ್ಯವಲ್ಲ ಎನಿಸಿದ್ದರಿಂದ ಆ ವಿವರಗಳನ್ನು ನೀಡದೇನೆ ಕತೆಯನ್ನು ಮುಗಿಸಿದ್ದೇನೆ.

ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ.

ನಾ. ಡಿಸೋಜ
[illegible]
[illegible]

## ಚಿತ್ರಸುದ್ದಿ




**ಬೆಂ**ಗಳೂರಿನಲ್ಲಿ ಸೆಪ್ಟೆಂಬರ್ ೫ರಂದು ಡಾ॥ ಜಿ. ರಾಮಕೃಷ್ಣ ಅವರಿಗೆ ವಿದ್ಯಾರ್ಥಿಗಳು, ಸಂಗಾತಿಗಳು ಮತ್ತು ಅಭಿಮಾನಿಗಳಿಂದ ಅಪರೂಪದ ಅಭಿನಂದನೆ.

ಕಾರ್ಯಕ್ರಮದ ಅಂಗವಾಗಿ ಬೆಳಿಗ್ಗೆ 'ಉನ್ನತ ಶಿಕ್ಷಣ : ಸರಕಾರದ ಪಾತ್ರ' ಎಂಬ ವಿಷಯವನ್ನು ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ ನಡೆಯಿತು. ಅರಣ್ಯ ಖಾತೆ ಸಚಿವ ಶ್ರೀ ಕೆ. ಎಚ್. ರಂಗನಾಥ್ ವಿಚಾರ ಸಂಕಿರಣ ಉದ್ಘಾಟಿಸಿದರು. ಡಾ॥ ಕೆ. ಎಸ್. ತಿಮ್ಮಪ್ಪ ಅಧ್ಯಕ್ಷತೆ ವಹಿಸಿದ್ದರು. ಇತಿಹಾಸ ಪ್ರಾಧ್ಯಾಪಕ ಡಾ॥ ಮುಷೀರ್ ಉಲ್ ಹಸನ್ ಪ್ರಾಸ್ತಾವಿಕ ಭಾಷಣ ಮಾಡಿದರು. ತರುವಾಯ ಎರಡು ವಿಚಾರ ಗೋಷ್ಠಿಗಳು ನಡೆದವು. ಡಾ॥ ಎನ್. ಜಯರಾಮ್, ಡಾ॥ ಎ. ಎಸ್. ಸೀತಾರಾಮು ಅವರು ಉನ್ನತ ಶಿಕ್ಷಣದ ವಿವಿಧ ಆಯಾಮಗಳನ್ನು ಕುರಿತು ಉಪನ್ಯಾಸ ನೀಡಿದರು. ಡಾ॥ ಎಂ. ವಿ. ನಾಡಕರ್ಣಿ ಅಧ್ಯಕ್ಷತೆ ವಹಿಸಿದ್ದರು. ಅನಂತರದ ಗೋಷ್ಠಿಯಲ್ಲಿ ಡಾ॥ ವೆಂಕಟೇಶ್ ಬಿ. ಆತ್ರೇಯ, ಡಾ॥ ಕಿಶೋರ್ ಕುಮಾರ್ ಥೇಕೆದತ್ ಮತ್ತು ಪ್ರೊ॥ ಎ. ಎಂ. ನರಹರಿ ಅವರು ಉಪನ್ಯಾಸ ನೀಡಿದರು. ಈ ಗೋಷ್ಠಿಯ ಅಧ್ಯಕ್ಷರು ಪ್ರೊ॥ ಜಿ. ಎಸ್. ಆರ್. ಕೃಷ್ಣನ್.

ಸಂಜೆ 'ಸಂಗಾತಿಯೊಡನೆ ಸೌಜನ್ಯ ಸಂಜೆ – ಒಂದು ಸ್ಪಂದನ' ಕಾರ್ಯಕ್ರಮದಲ್ಲಿ 'ಸಂಗಾತಿ' ಮತ್ತು 'ಸೌಜನ್ಯ' ಎಂಬ ಗ್ರಂಥ ಮತ್ತು ಸ್ಮರಣಸಂಚಿಕೆಗಳನ್ನು ಬಿಡುಗಡೆ ಮಾಡಲಾಯಿತು. ಕೆ. ಎಚ್. ರಂಗನಾಥ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಆತ್ಮೀಯ ಮಿತ್ರರು, ವಿದ್ಯಾರ್ಥಿಗಳು, ಸಹಪಾಠಿಗಳು, ಅಭಿಮಾನಿಗಳು ಡಾ॥ ಜಿ. ಆರ್. ಅವರನ್ನು ಅಭಿನಂದಿಸಿದರು. ಡಾ॥ ಕೆ. ಮರುಳಸಿದ್ದಪ್ಪ, ಪ್ರೊ॥ ಎಂ. ಎಚ್. ಕೃಷ್ಣಯ್ಯ , ಪ್ರೊ॥ ಎಂ. ಸತ್ಯನಾರಾಯಣರಾವ್, ಪ್ರೊ॥ ಪ್ರಭುಸ್ವಾಮಿ, ಡಾ॥ ವಿಜಯಾ, ಡಾ॥ ಜಿ. ಎನ್. ರೆಡ್ಡಿ, ಡಾ॥ ಸಬಿಹಾ ಭೂಮಿಗೌಡ, ಶ್ರೀ ಹೆಚ್. ವಿ. ನಟರಾಜ್, ಡಾ॥ ತಿಮ್ಮಪ್ಪ, ಶ್ರೀ ರಮೇಶ್ ಕುಮಾರ್ – ಮುಂತಾದ ಗಣ್ಯರ ಆದರದ ಮಾತುಗಳಿಗೆ ಡಾ॥ ಜಿ. ಆರ್. ಪ್ರತಿಸ್ಪಂದಿಸಿದರು.





# ಎ. ಎನ್. ಮೂರ್ತಿರಾಯರು

**ಮೊ**ನ್ನೆ ತಾನೆ ಕಣ್ಮರೆಯಾದ ಎ. ಎನ್. ಮೂರ್ತಿರಾಯರು ನನ್ನ ವಾರಿಗೆಯ (ಮೈಸೂರಿನಲ್ಲಿ ವಿದ್ಯಾರ್ಥಿಗಳಾಗಿದ್ದ) ಹಲವರಿಗೆ ಆಪ್ತರಾಗಿದ್ದರು. ೧೯೩೯ರಲ್ಲಿ ಮೊದಲು ಅವರನ್ನು ನೋಡಿದಾಗ ನಾನಿನ್ನೂ ಹೈಸ್ಕೂಲು ವಿದ್ಯಾರ್ಥಿ. ನನ್ನ ಅಣ್ಣನಿಗೆ ಅವರು ಮೇಷ್ಟರು. ಅವನು ಅವರ ಅಚ್ಚುಕಟ್ಟು ವೇಷಭೂಷಣಗಳನ್ನು, "ಮೂರ್ತಿ ರಾಯರ chaste ಇಂಗ್ಲಿಷ್‌ಅನ್ನು" ಕೊಂಡಾಡುತ್ತಿದ್ದ. ಆ ಕಾಲದಲ್ಲಿ ಮೈಸೂರು ಮಹಾರಾಜ ಕಾಲೇಜಿನ ಯೂನಿಯನ್ ಆಶ್ರಯದಲ್ಲಿ ಆಗಾಗ ನಡೆಯುತ್ತಿದ್ದ ಚರ್ಚಾಕೂಟಗಳಲ್ಲಿ "ಮೂರ್ತಿರಾಯರು ಮಾತನಾಡುತ್ತಾರೆ" ಅಂದರೆ ವಿದ್ಯಾರ್ಥಿಗಳು ಕಿಕ್ಕಿರಿಯುತ್ತಿದ್ದರು. ಪ್ರೊ॥ ಎ. ಆರ್. ವಾಡಿಯ, ಎಂ. ಎ. ವೆಂಕಟರಾವ್, ಸಿ. ಆರ್. ನರಸಿಂಹಶಾಸ್ತ್ರಿಗಳು ಮುಂತಾದ ಮೇಷ್ಟರುಗಳ ಜತೆಯಲ್ಲಿ ಎಸ್. ಎಸ್. ರಾಘವಾಚಾರ್, ಎಂ. ವಿ. ರಾಜಗೋಪಾಲ್, ಡಿ. ಆರ್. ಕೃಷ್ಣಮೂರ್ತಿ ಮುಂತಾದ ಪ್ರತಿಭಾವಂತ ವಿದ್ಯಾರ್ಥಿ-ತರುಣರುಗಳೂ ಆ ಚರ್ಚಾಕೂಟಗಳಲ್ಲಿ ಭಾಗವಹಿಸುತ್ತಿದ್ದ ಅತ್ಯುತ್ಸಾಹದ ದಿನಗಳು ಅವು. ಈ ಗುಂಪಿನಲ್ಲಿ ಎಲ್ಲರ ಗಮನ ಸೆಳೆಯುತ್ತಿದ್ದವರು ಮೂರ್ತಿರಾಯರು.

೧೯೪೫-೪೬ರ ಸುಮಾರಿನಲ್ಲಿ ಅವರು ಮೈಸೂರು ಆಕಾಶವಾಣಿಯ ನಿರ್ದೇಶಕರಾಗಿದ್ದಾಗ ಅವರ ಜತೆ ನನಗೆ ಹೆಚ್ಚು ನಿಕಟಸಂಬಂಧ ಬೆಳೆಯಿತು. ಕಾಲೇಜಿನಲ್ಲಿ ಪಾಠ ಹೇಳುವ ಕೆಲಸದಿಂದ ಸ್ವಲ್ಪಕಾಲ ದೂರವಾಗಿದ್ದ ಅವರಿಗೆ ಮತ್ತೆ ಕಾಲೇಜಿಗೆ ಹಿಂತಿರುಗುವ ಹಂಬಲ ಪ್ರಾರಂಭವಾಗಿತ್ತು. ಆಗ ಇಂಗ್ಲಿಷ್ ಆನರ್ಸ್‌ನಲ್ಲಿದ್ದ ನಮಗೆ ಅಲ್ಲಿಯವರೆಗೆ ಅತ್ಯಂತ ಉಪಯುಕ್ತ ಮಾರ್ಗದರ್ಶನ ನೀಡುತ್ತಿದ್ದ ಕೆಲವೇ ಮಂದಿ ಉಪಾಧ್ಯಾಯರುಗಳಿಗೆ ಮೈಸೂರಿನಿಂದ ಬೇರೆಡೆಗಳಿಗೆ ವರ್ಗವಾಗಿತ್ತು – ಕೆಲವರಂತೂ ವಿಶ್ವವಿದ್ಯಾನಿಲಯ ವನ್ನು ಬಿಟ್ಟುಹೋಗಿದ್ದರು – ಅವರು (ಮುಖ್ಯವಾಗಿ ಪ್ರೊ॥ ಬಿ. ಎಸ್. ಕೇಶವನ್, ಕೆ. ವೆಂಕಟರಾಮನ್‌ರು) ಹಿಂದಿರುಗುವ ಸಂಭವವಿರಲಿಲ್ಲ. ಇಂಥ ತಬ್ಬಲಿತನದ ದಿನಗಳಲ್ಲಿ ನಾನು (ಸ್ವಲ್ಪ ಅಧಿಕ ಪ್ರಸಂಗಿತನ ವಹಿಸಿ)ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ॥ ರಂಗಣ್ಣನವರ ಅಪ್ಪಣೆ ಪಡೆದು ಪ್ರೊ॥ ಮೂರ್ತಿರಾಯರನ್ನು ಭೇಟಿಯಾದೆ. ಅವರು ನಮಗೆ ಕೆಲವು ಗಂಟೆಗಳ ಕಾಲ ಪಾಠ ಹೇಳುವಂತೆ ಬೇಡಿಕೊಂಡೆ. ಆ ಕಾಲದಲ್ಲಿ (ನಮ್ಮ ಸೌಭಾಗ್ಯದಿಂದಲೋ ಏನೋ) ಮನುಷ್ಯ ಸಂಬಂಧಗಳು ಹೆಚ್ಚು ಆಪ್ತವಾಗಿರುತ್ತಿದ್ದವು. ಅಧಿಕಾರದಲ್ಲಿದ್ದವರಿಗೆ ಹೆಚ್ಚಾಗಿ – ಈಗ 'ಬ್ಯೂರಾಕ್ರಟಿಕ್' ಎನ್ನುವ – ಮನೋಭಾವ ಆಗ ಇರಲಿಲ್ಲವೆಂದು ನನ್ನ ಭಾವನೆ. ನಮ್ಮ 'ಮೇಷ್ಟರು' ದೊಡ್ಡ ಮನಸ್ಸು ಮಾಡಿ ಕೆಲವು ತಿಂಗಳು ಆಗಾಗ ಬಂದು ನಮಗೆ ಪಾಠ ಹೇಳಿದರು. ಆಮೇಲೆ ಅವರು ಆಕಾಶವಾಣಿಯಿಂದ ಮತ್ತೆ ಮಹಾರಾಜ ಕಾಲೇಜಿಗೆ ವರ್ಗವಾದ ಮೇಲೆ ಮೈಸೂರಿನಲ್ಲಿ ಹೆಚ್ಚುಕಾಲ ನಿಲ್ಲಲಿಲ್ಲ. ಅವರು ಚಿತ್ರದುರ್ಗದ 'ಹೊಸ ಕಾಲೇಜಿ'ಗೆ ಪ್ರಿನ್ಸಿಪಾಲರಾಗಿ ಹೊರಟು ಹೋದರೆಂದು ನೆನಪು. ಅವರ-ನನ್ನ ಗುರುಶಿಷ್ಯ ಸಂಬಂಧ ಅಲ್ಲಿಗೆ ಮುಗಿಯಲಿಲ್ಲ. ವಿದ್ಯಾರ್ಥಿ ದೆಶೆ ಕಳೆದು ನಿರುದ್ಯೋಗದ ಬವಣೆಯಲ್ಲಿದ್ದ ನನ್ನನ್ನು ಅವರು ತುಂಬಾ ವಾತ್ಸಲ್ಯದಿಂದ ನೋಡಿಕೊಂಡರು. ಆಗಾಗ ಅವರನ್ನು ಭೇಟಿಯಾದಾಗಿನ ಹಲವಾರು ನೆನಪುಗಳು ನನ್ನನ್ನು ಈಗಲೂ ಕಾಡುತ್ತವೆ. ಅವು ಹಾಗಿರಲಿ.

ಅವರ ಬದುಕು ಒಂದು 'ತೆರೆದ ಪುಸ್ತಕ'. ಅವರ ವ್ಯಕ್ತಿತ್ವದ ಋಜುತೆ, ಪಾರದರ್ಶಕತೆ, ಅತ್ಯಂತ ಸೂಕ್ಷ್ಮ ಸಂವೇದನಾಶೀಲತೆ – ಎಲ್ಲಕ್ಕೂ ಮಿಗಿಲಾಗಿ ಅವರ 'ಮಾನವಾನುಕಂಪೆ'ಗಳಿಗೆ ಅವರ ಪುಸ್ತಕಗಳೇ ಸಾಕ್ಷಿಯಾಗಿವೆ.

ಅವರನ್ನು ನೆನೆದಾಗಲೆಲ್ಲ ನನಗೆ ಅಮೆರಿಕದ ವಿಮರ್ಶಕನೊಬ್ಬ ಪ್ರಸಿದ್ಧ ವಿಮರ್ಶಕ ಲಯನಲ್ ಟ್ರಿಲಿಂಗ್‌ನನ್ನು ಕುರಿತು ಹೇಳಿದ ಮಾತುಗಳೇ ನೆನಪಾಗುತ್ತವೆ. ಆತ ಟ್ರಿಲಿಂಗ್‌ನನ್ನು ನೈತಿಕ ಹೊಣೆಗಾರಿಕೆಯುಳ್ಳ ವಿಮರ್ಶಕ ಎಂದು ವರ್ಣಿಸಿ 'ಒಂದಿಷ್ಟೂ ಪೂರ್ವಗ್ರಹಗಳಿಲ್ಲದ, ಸ್ವತಂತ್ರ ಮನೋಭಾವದ ಬರೆಹಗಾರ' ಎನ್ನುತ್ತಾನೆ. ಟ್ರಿಲಿಂಗ್‌ನ ಬರವಣಿಗೆಯಲ್ಲಿ ಎದ್ದುಕಾಣುವ ಅವನ ನಿಶಿತ ಸಮತೋಲನ ದೃಷ್ಟಿ, ನ್ಯಾಯಪರ, ನಿಷ್ಪಕ್ಷಪಾತ ಧೋರಣೆ, ನಿಷ್ಕೃಷ್ಟ, ಖಚಿತ ಬರೆವಣಿಗೆಯ ರೀತಿ, ಶೈಲಿಯ ಸುಭಗತೆಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ.

ಮೂರ್ತಿರಾಯರದೂ ಅಂಥದೇ ಮನೋಧರ್ಮ. ಅವರ ಕೆಲವೇ ವಿರಳ ವಿಮರ್ಶನ ಗ್ರಂಥಗಳಲ್ಲಿ ಅವರ ಪರಿಪಕ್ವ ವ್ಯಕ್ತಿತ್ವ ಸ್ಫುಟವಾಗಿ ಕಾಣಿಸಿಕೊಳ್ಳುತ್ತದೆ. ಮೂಲತಃ ವಿಚಾರವಾದಿಯಾದರೂ ತುಂಬಾ ಆಳವಾದ ಹೃದಯವಂತಿಕೆಯ ವ್ಯಕ್ತಿ ಅವರು. ಅಪರೂಪವಾದ ಹೃದಯ ಸಂಸ್ಕಾರ ಅವರದು. ಯಾವುದೇ ವಿಚಾರವಾಗಿ ಮಾತನಾಡುವಾಗ ಅವರ (ಟ್ರಿಲಿಂಗ್ ಹೇಳುವ) 'ಲಿಬರಲ್ ಇಮ್ಯಾಜಿನೇಷನ್' ಗಮನ ಸೆಳೆಯುವಂತಿರುತ್ತಿತ್ತು. ಜತೆಗೆ ಅವರದು ಮಾರ್ಗದರ್ಶನ ಕಣ್ಣುನೋಟ-ಕಾಡುಗಿಡ, ಗಂಟೆ, ಬಿಳಿಲು, ಬಳ್ಳಿಗಳನ್ನು ಕಡಿದು ನೇರ ದಾರಿ ಬಿಡಿಸಿಕೊಂಡು ಹೋಗುವ trail blazerನ ಮನೋಧರ್ಮ.

ಅವರಲ್ಲಿ ಈ ಪರಿಪಕ್ವ ಮನೋಭಾವ ಹೇಗೆ ಬೆಳೆಯಿತು ? ಈ ಪ್ರಶ್ನೆ ನನ್ನನ್ನು ಹಲವೊಮ್ಮೆ ಕೆದರಿದ್ದುಂಟು. ಅವರಿಗೆ ಇಂಗ್ಲಿಷ್ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದ ಅವರ ಉಪಾಧ್ಯಾಯರುಗಳ ಬಗ್ಗೆ ಅವರು ವಿಶದವಾಗಿ ಬರೆದಿದ್ದಾರಷ್ಟೆ. ಅವರಲ್ಲಿ ವಿಶೇಷವಾಗಿ ಸಾಹಿತ್ಯಾಭಿರುಚಿಯ ಪ್ರೇರಣೆ ಮೂಡಿಸಿದವರು ಪ್ರೊ॥ ಜೆ. ಸಿ. ರಾಲೋ ಎಂದು ನಾವು ಕೇಳಿದ್ದೇವೆ. ಅವರೇ ಹೇಳುವಂತೆ 'ಅವರುಗಳು ಯಾರೂ ಸಾಹಿತ್ಯಾಭ್ಯಾಸಕ್ಕೆ ಉಪಯುಕ್ತವಾದ ಯೋಜನೆಯನ್ನೇನು ಹಾಕಿಕೊಡಲಿಲ್ಲ. ಯಾವನೊಬ್ಬ ಕವಿಯ ಕೃತಿಗಳಲ್ಲಿ ಮುಖ್ಯವಾದುದನ್ನು ಓದಿ ಅವನ ಪ್ರತಿಭೆ ವಿಕಾಸವಾದದ್ದನ್ನು, ಅವನ ಜೀವನ ದೃಷ್ಟಿಯನ್ನು, ಬಣ್ಣಿಸಲಿಲ್ಲ. ನಾನು ಅವರಿಗಿಂತ ತೀರಾ ಕಿರಿಯನೆಂಬುದನ್ನು ಮರೆತು ನನ್ನೊಡನೆ ಸಾಹಿತ್ಯದ ವಿಷಯ ಹರಟೆ ಹೊಡೆದರು. ಇಷ್ಟ ಬಂದದ್ದನ್ನು ನನಗೆ ಓದಿ ಹೇಳಿದರು ಅಷ್ಟೆ.

ಈ ಹರಟೆ, ಮೂರ್ತಿರಾಯರಿಗೆ ಬಹು ಪ್ರಿಯವಾದ ಹವ್ಯಾಸ, ನೇರವಾದ, ಸಾಹಿತ್ಯಾಭಿವ್ಯಕ್ತಿಯ ಮಾರ್ಗ. ಹರಟೆಯನ್ನು ಸಾಹಿತ್ಯದ ಮಟ್ಟಕ್ಕೆ ಏರಿಸಿ ಅದಕ್ಕೆ ಸುಂದರವಾದ, 'ಪ್ರಬಂಧ'ವೆಂಬ ರೂಪ ಕೊಟ್ಟು ಅದನ್ನು ನಮ್ಮ ಸಾಹಿತ್ಯದ ಒಂದು ಅಪರೂಪದ ಪ್ರಕಾರವನ್ನಾಗಿ ಮಾಡಿದ ಕೀರ್ತಿ ಮುಖ್ಯವಾಗಿ ಅವರದೇ ಎಂಬುದು ಯಾರಿಗೆ ತಿಳಿಯದು ?

ಎಚ್. ಕೆ. ರಾಮಚಂದ್ರಮೂರ್ತಿ

ಅವರು ಪಾಠ ಹೇಳುತ್ತಿದ್ದುದು ಅದೇ ರೀತಿಯಾಗಿರುತ್ತಿತ್ತು. ನಮಗೆ ಅವರು ಷೇಕ್ಸ್‌ಪಿಯರ್‌ನ 'ರೋಮಿಯೋ-ಜೂಲಿಯಟ್', 'ಕಿಂಗ್ ಲಿಯರ್', 'ದ ಟೆಂಪೆಸ್ಟ್'ಗಳನ್ನು ಕುರಿತು ನೀಡಿದ ೩-೪ ಗಂಟೆಗಳ ಉಪನ್ಯಾಸ ಬಹುಕಾಲದಿಂದ ಉಳಿದುಬಂದ ನೆನಪಾಗಿದೆ. 'ಶಾಕುಂತಲಾ' ನಾಟಕವನ್ನು ಕುರಿತು ಮಾತನಾಡುತ್ತ ಅವರು ಹೇಳಿದ 'observe how in Kalidasa's play you see almost a chemical union between man and nature' ಎನ್ನುವ ವಾಕ್ಯವೋ, ಅಥವಾ ಷೇಕ್ಸ್‌ಪಿಯರ್ ನಾಟಕದ ಬಗ್ಗೆ ಪ್ರಸ್ತಾಪಿಸುವಾಗ Look at the profound irony we sense in the reconciliation at the end, of the Houses of the Montagues and the Capulets ಎನ್ನುವ ಪದಪುಂಜವನ್ನೋ ನಾನು ನನ್ನ ವಿದ್ಯಾರ್ಥಿಗಳೆದುರಿನಲ್ಲಿ ಪುನರುಚ್ಚರಿಸಿ ಮೂರ್ತಿರಾಯರನ್ನು ನೆನೆದದ್ದುಂಟು.

ಪ್ರೊ॥ ಜೆ. ಸಿ. ರಾಲೋ ಬಗ್ಗೆ ಬರೆಯುತ್ತಾ ಅವರು ಸಾಹಿತ್ಯವನ್ನು ಬೋಧಿಸುತ್ತಿದ್ದುದು

ಸಂಬಳಕ್ಕಾಗಿಯಲ್ಲ – ಕರ್ತವ್ಯ ದೃಷ್ಟಿಯಿಂದಲೂ ಅಲ್ಲ – ಆತ್ಮ ಸಂತೋಷಕ್ಕಾಗಿ – ತಮಗೆ ಪ್ರಿಯವಾದ ಕವನಗಳನ್ನು ನಾಟಕಗಳನ್ನು ಶಿಷ್ಯರೊಡನೆ ಸವಿಯಲು ಅವಕಾಶ ಸಿಕ್ಕೀತೆ ಎಂದು ಕಾದಿರುತ್ತಿದ್ದರೋ ಏನೋ ಎಂದಿದ್ದಾರೆ. ನನಗೆ ಮೂರ್ತಿರಾಯರ ಜತೆ ಮಾತನಾಡುವಾಗಲೂ ಇದೇ ತೆರನಾದ 'ರಸಾನುಭವ' ಲಭಿಸಿತ್ತು. ಅವರ ದೃಷ್ಟಿಯಲ್ಲಿ 'ಮಹಾಭಾರತ', 'ಕಿಂಗ್ ಲಿಯರ್' – ಎರಡೂ ವಿಶ್ವ ಸಾಹಿತ್ಯದ ಉತ್ತುಂಗ ಶಿಖರಗಳು – ಜೀವನದ ಅತ್ಯಂತ ವೇದನೆಯನ್ನುಂಟುಮಾಡುವ ವಿಚಾರಗಳನ್ನು ಕುರಿತು ಮಾತನಾಡುವಾಗಲೆಲ್ಲ ಅವರಿಗೆ ಮಹಾಭಾರತದ ಅಥವಾ 'ಕಿಂಗ್ ಲಿಯರ್' ನಾಟಕದ ಯಾವುದಾದರೂ ಸಂದರ್ಭ ನೆನಪಾಗುತ್ತಿತ್ತು.

ನಮ್ಮನ್ನೆಲ್ಲಾ ಹೆಚ್ಚಾಗಿ ಆಕರ್ಷಿಸುತ್ತಿದ್ದುದು ಅವರ ಹಾಸ್ಯಪ್ರಿಯತೆ – ಮುಕ್ತ ಹೃದಯದ ಅಂತಃಕರಣ ಪ್ರವೃತ್ತಿ. ಒಮ್ಮೆ ನಾನು ಅವರ ಮುಂದೆ ''ತೋಡಿ ರಾಗ ನನಗೆ ಬಹಳ 'ಬೋರ್' '' ಎಂದಾಗ ಅವರು 'ಆಹಾ, ನಿನ್ನ ಸಂಗೀತ ಜ್ಞಾನವನ್ನು ನಾನು ಹೇಗೆ ಕೊಂಡಾಡಲಿ?' ಎಂದರು. ಅವರಿಗೆ ಒಳ್ಳೆ ಊಟ-ತಿಂಡಿ, ಕಾವ್ಯ, ಸಂಗೀತ, ಹರಟೆ, ಪ್ರವಾಸ, ಹೇಗೆ ಇಷ್ಟವಾಗಿದ್ದವೋ ಅಷ್ಟೆ ಅನಾದರವಿತ್ತು ಅವರಿಗೆ, ಕ್ರಿಕೆಟ್ ಆಟದ ಮೇಲೆ. ಅದು ಅವರ 'pet aversion'. ಹಾಗೆಂದು ಅವರು ಯಾವುದನ್ನೂ ಕಠಿಣವಾಗಿ ಟೀಕಿಸಿದವರಲ್ಲ. ಒಂದು ಸಲ ನಾವು (ಶಿವಮೊಗ್ಗೆಯಲ್ಲೋ ಅಥವಾ ತೀರ್ಥಹಳ್ಳಿಯ ಹಿರಿಯ ಗೆಳೆಯ ಪುಟ್ಟಣ್ಣ ಗೌಡರ ಮನೆಯಲ್ಲೋ ಇರಬೇಕು) ಆಗ ನಡೆಯುತ್ತಿದ್ದ ಕ್ರಿಕೆಟ್ ಟೆಸ್ಟ್‌ನಲ್ಲಿನ ಆಟಗಾರರ ಬಗ್ಗೆ ಮಾತನಾಡಲು ಪ್ರಾರಂಭಿಸಿದ್ದೆವು. ಮೂರ್ತಿರಾಯರು ಅವರಿಗೆ ಪ್ರಿಯವಾದ 'ಮಾಕ್ ಹಿರಾಯಿಕ್' ಶೈಲಿಯಲ್ಲಿ 'ಅದು ಯಾರೋ 'ಸೆಂಚುರಿ' ಬಾರಿಸಿದ ಅಂದಿರಲ್ಲಾ... ಪಾಪ ಅದನ್ನೇಕೆ ಬಾರಿಸಲು ಹೋದ ಅವನು?' ಎಂದರು. ಇನ್ನೂ ಏನೋ ಹಾಸ್ಯೋಕ್ತಿಗಳು ಚಿಮ್ಮಿದಾಗ ನಾನು 'Dost thou think, thou art virtuous, there shall be no more cakes and ale? ಎಂದುದನ್ನು ಕೇಳಿ ಜೋರಾಗಿ ನಕ್ಕು 'That's good' ಎಂದಾಗ ನಾನು ಪಟ್ಟ ಸಂತೋಷವೆಂಥದೋ !!

ಅವರ 'ದೇವರು' ಪ್ರಕಟವಾದಾಗ 'ದೇವರಂಥ ಈ ಮನುಷ್ಯ – ಏಕಿಷ್ಟು ಕಠಿಣವಾಗಿ ಬರೆದಿದ್ದಾರೆ' ಎಂದು ಕೊಂಡವರಲ್ಲಿ ನಾನೂ ಸೇರಿದ್ದೆ. ಆ ಬಗ್ಗೆ ಅವರು ಯಾರಿಗೂ ಸಮಜಾಯಿಷಿ ಕೊಡಲು ಹೋಗಲಿಲ್ಲ – ಬಹುಕಾಲ ಅವರ ಮನಸ್ಸಿನಲ್ಲಿ ಸುಳಿದು ಸುತ್ತಿ ಹರಳುಗಳಾಗಿದ್ದ ಪರಿಕಲ್ಪನೆಗಳಿಗೆ ಅವರು ಖಚಿತವಾದ, ತರ್ಕಬದ್ಧವಾದ ನಿರ್ವಚನ ನೀಡಿದ್ದರು... ಒಮ್ಮೆ ನನ್ನನ್ನು ಆಗ ಕೇಳಿದರು : 'ದೇವರಲ್ಲಿ ನಿನಗೆ ನಂಬಿಕೆ ಇದೆಯೇ?' ಅದಕ್ಕೆ ನಾನು ಕೊಟ್ಟ ಉತ್ತರ : 'ದೇವರಲ್ಲಿ ನಂಬಿಕೆ ಇಲ್ಲವೆನ್ನುವಷ್ಟು ಧೈರ್ಯ ನನಗಿಲ್ಲ ಸರ್'. ಹಾಗೆಂದಾಗ ಅವರು ನಕ್ಕು ಸುಮ್ಮನಾಗಿದ್ದರು.

'ಮೂರ್ತಿರಾಯರದು ಸಾರ್ಥಕ್ಯ ಪಡೆದ ಜೀವನ' ವೆಂಬ ಮಾತು ಕ್ಲೀಷೆಯಾದೀತೆಂಬ ಭಯ ನನಗಿದೆ – ಆದರೆ ಪ್ರಾಮಾಣಿಕವಾದ ನನ್ನ ಭಾವನೆಯನ್ನು ವ್ಯಕ್ತಪಡಿಸಲು ಬೇರೆ ಮಾತುಗಳು ಈಗ ಹೊಳೆಯುತ್ತಿಲ್ಲ. ಮನುಷ್ಯ ಜೀವನದಿಂದ ತಾವು ಸ್ವಂತಕ್ಕೆ ಏನನ್ನೂ ನಿರೀಕ್ಷಿಸದೆ, ಬಯಸದೆ, ತಮ್ಮ ಸುತ್ತಲಿನ ಪ್ರಪಂಚದ ನೋವು, ನರಳಿಕೆಗಳಿಗೆ ಸದಾ ಸ್ಪಂದಿಸುತ್ತಾ, ಅನ್ಯಾಯ, ಕೆಡುಕು, ಸೋಲುಗಳಿಂದ ಒಂದಿಷ್ಟೂ ತಮ್ಮ ಆಶಾವಾದವನ್ನು ಕಳೆದುಕೊಳ್ಳದೆ ಬದುಕಿದ ಅವರ ಆದರ್ಶ ಉದಾತ್ತವಾದುದು. ಯಾರಿಗೆ ಸಿಕ್ಕೀತು ಅಂಥ ಬದುಕು?

ಎಚ್. ಕೆ. ರಾಮಚಂದ್ರಮೂರ್ತಿ
ನಂ. ೨೦೯, ೧೦ನೇ 'ಬಿ' ಕ್ರಾಸ್, ೨೯ನೇ ಮೆಯಿನ್
ಜೆ.ಪಿ.ನಗರ ೧ನೇ ಹಂತ, ಬೆಂಗಳೂರು - ೫೬೦ ೦೭೮

## ನಾನು - ನನ್ನ ಹೆಂಡತಿ



ನನ್ನ ಹೆಂಡತಿಗೆ ವಯಸ್ಸು ನಲವತ್ತು.
ಆದರೂ
ಅವಳ ಕೂದಲು ಮಾತ್ರ ಈಗಲೂ ಅಚ್ಚ ಕಪ್ಪು.

ನನ್ನ ವಯಸ್ಸು ಈಗ ಐವತ್ತು.
ಆದರೂ
ನನ್ನ ಒಂದು ಕೂದಲೂ ಇಲ್ಲ ಕಪ್ಪು.

ಅವಳು ಹೇಳುತ್ತಾಳೆ, ''ಬಣ್ಣ ಹಚ್ಚಿ''.
ನಾನು ಹೇಳುತ್ತೇನೆ, ''ಅಯ್ಯೋ ಹುಚ್ಚಿ''

ಶ್ರೀನಿವಾಸ್ ವಿ. ಸುತ್ರಾವೆ
೧೬೪೬ - ೧೮ ಮಹಡಿ
ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಮನುಷ್ಯನ ನಿತ್ಯ ಜೀವನಕ್ಕೆ ಬೇಕಾಗುವ ಕೆಲವು ಸ್ವಾಭಾವಿಕ ಕ್ರಿಯೆಗಳಲ್ಲಿ ಊಟ, ನಿದ್ರೆ, ನೀರು, ಗಾಳಿ ಹಾಗೂ ಲೈಂಗಿಕ ಆಸಕ್ತಿ ಮುಂತಾದವು ಸೇರಿವೆ. ಈ ಕ್ರಿಯೆಗಳಲ್ಲಿ ಕೆಲವನ್ನು ಸ್ವಲ್ಪ ದಿನಗಳ ಮಟ್ಟಿಗೆ ಇಲ್ಲದೇ ಬದುಕಬಹುದು. ಆದರೆ ನೀರು ಗಾಳಿಗಿಂತಲೂ ಅವಶ್ಯವಾಗಿ ನಿದ್ರೆ ಇಲ್ಲದೇ ಬದುಕಲಾರದಂತಹ ಪರಿಸ್ಥಿತಿ ಇಂದು ಬೆಳೆದು ಬಂದಿರುವುದು ಆಶ್ಚರ್ಯವಾದರೂ, ಮನುಷ್ಯನ ಜೀವನ ಚಕ್ರದಲ್ಲಿ ಅದು ಸಮಂಜಸವೇ ಆಗಿದೆ. ಹೀಗಾಗಿ ನಿದ್ರೆ ಅಷ್ಟೊಂದು ಅತ್ಯವಶ್ಯಕವಾಗಿ ಬೆಳೆದುಬಿಟ್ಟಿದೆ.

ನಿದ್ರೆ ಮೈ ಮನಗಳಿಗೆ, ದಣಿದ ದೇಹಕ್ಕೆ ನೀಡುವ ವಿಶ್ರಾಂತಿಯಾಗಿದೆ. ನಿದ್ದೆ ಮಾಡುವುದರಿಂದ ಮನಸ್ಸು ಹಗುರವಾಗುತ್ತದೆ. ಎಲ್ಲರೂ ಪ್ರಸನ್ನತೆಯಿಂದ ಇರುತ್ತಾರೆ. ಕತ್ತಲೆ ಎಂದರೆ ಅದಕ್ಕೆ ತುಂಬ ಇಷ್ಟ ಒಮ್ಮೆಲೇ ಆವರಿಸಿ ಬಂದುಬಿಡುತ್ತದೆ. ಕೆಲವರ ದೃಷ್ಟಿಯಲ್ಲಿ ನಿದ್ರೆ ಹೊಟ್ಟೆ ತುಂಬಾ ಊಟ ಮಾಡಿದಾಗ ಬರುತ್ತದಂತೆ. ''ಅವನೇನು ಕಂಠಮಟ ತಿಂದಾನ. ನಿದ್ದೆ ಬರದ ಮತ್ತೇನು ಮಾಡೀತು'' ಎಂದು ಗದರಿಸುತ್ತಾರೆ.

ತಿನ್ನುವುದಕ್ಕೆ ಬಕಾಸುರ, ಬಲಶಾಲಿಗಳಲ್ಲಿ ಭೀಮ, ಭಕ್ತಿಯಲ್ಲಿ ರಾಮ ಹೀಗೆ ಒಂದಕ್ಕೊಂದು ಒಬ್ಬೊಬ್ಬರನ್ನು ಉದಾಹರಿಸುತ್ತೇವೆ. ಹಾಗೆಯೇ ನಿದ್ರೆಗೂ ಯಾರಾದರೂ ಇರಲೇಬೇಕಲ್ಲವೇ? ಇದ್ದಾರೆ. ಅವರೇ ಶ್ರೀಮಾನ್ ಕುಂಭಕರ್ಣ ಮಹಾರಾಜರು. ಸೊಂಪಾಗಿ ನಿದ್ರೆ ಮಾಡುವವರು ಈತನನ್ನು ಭಕ್ತಿಯಿಂದ ಪೂಜಿಸುತ್ತಾರೆ. ಈತ ಆರು ತಿಂಗಳುಗಳ ಕಾಲ ನಿದ್ರಿಸುತ್ತಿದ್ದನಂತೆ. ಈಗ ಆರು ತಾಸು ನಿದ್ದೆ ಮಾಡುವುದಕ್ಕೂ ಸಾಧ್ಯವಾಗದಂತಹ ಪ್ರಸಂಗದಲ್ಲಿ ಈಗೇನಾದರೂ ಕುಂಭಕರ್ಣ ಇದ್ದಿದ್ದರೆ ನಿದ್ದೆ ಮಾಡಲು ಎಲ್ಲಿಗೆ ಹೋಗುತ್ತಿದ್ದನೋ... ಪಾಪ! ಶಾಶ್ವತ ನಿದ್ರೆ ಕಂಡುಕೊಂಡ.

ನಿದ್ದೆಯನ್ನು ಎಲ್ಲರೂ ಮಾಡುತ್ತಾರೆ. ಎಲ್ಲಾ ಪಶು, ಪಕ್ಷಿಗಳೂ ಮಾಡುತ್ತವೆ. ಮನುಷ್ಯ ಹೊದ್ದುಕೊಂಡು ಮಲಗಿದರೆ, ಪಶುಗಳು ಕಾಲನ್ನು ಚಾಚಿಕೊಂಡು ಮಲಗುತ್ತವೆ. ಕುದುರೆ ಬರೀ ಉರುಳಾಡಿದರೆ, ಹಲ್ಲಿ ಕಣ್ಣು ತೆರೆದುಕೊಂಡೇ ಬಿದ್ದಿರುತ್ತದೆ. ಒಟ್ಟಿನಲ್ಲಿ ಎಲ್ಲರೂ ನಿದ್ದೆ ಮಾಡುತ್ತಾರೆ. ಮನುಷ್ಯ ಎಲ್ಲಿ ನಿದ್ರಿಸುತ್ತಾನೆ ಎಂದರೆ ಸಿಗುವ ತಕ್ಷಣದ ಉತ್ತರ ಮನೆಯಲ್ಲಿ, ಇಲ್ಲವೇ ಬೆಡ್‌ರೂಮ್‌ನಲ್ಲಿ, ನಿಜಾನೆ. ಆದರೆ ಇನ್ನೊಂದು ಹೆಜ್ಜೆ ಮುಂದಿಟ್ಟು ನೋಡಿದರೆ ಮನುಷ್ಯ ಬರೀ ಮನೆಯಲ್ಲಷ್ಟೇ ಏಕೆ ಆಫೀಸಿನಲ್ಲಿ ಕೂಡಾ ನಿದ್ರಿಸುತ್ತಾನೆ. ಆಫೀಸುಗಳಲ್ಲಿ ಕೂಡಾ ನಿದ್ರಿಸುತ್ತಾರಾ ಎಂದು ಯಾರಾದರೂ ಕೇಳಿದರೆ ಅವರಿನ್ನೂ ಓಬೀರಾಯನ ಕಾಲದಲ್ಲಿದ್ದಾರೆಂದೇ ಅರ್ಥ. ಬರೀ ಆಫೀಸಿನಲ್ಲಿ ಅಷ್ಟೇ ಏಕೆ ಸ್ವಾಮಿ, ಹೇರ್ ಕಟಿಂಗ್ ಸಲೂನ್‌ನಲ್ಲಿ, ಬಸ್‌ನಲ್ಲಿ, ಟ್ರೇನ್‌ನಲ್ಲಿ, ಲೈಬ್ರರಿಯಲ್ಲಿ, ಗುಡಿ ಗುಂಡಾರದಲ್ಲಿ, ಪಾರ್ಕ್‌ಗಳಲ್ಲಿ, ಶಾಲಾ-ಕಾಲೇಜುಗಳಲ್ಲಿಯೂ ನಿದ್ರೆ ಮಾಡುವವರಿರುವಾಗ ಆಫೀಸಿನಲ್ಲಿ ನಿದ್ದೆ ಮಾಡುವುದೇನು ಮಹಾ. ಬಸ್‌ನಲ್ಲಿ ಸೀಟು ಸಿಕ್ಕಿತೆಂದರೆ ಸ್ವರ್ಗ ಮೂರೇ ಗೇಣು. ಸೀಟು ಸಿಗದಿದ್ದರೆ ನಿಂತಾದರೂ ನಿದ್ರಿಸುವವರು ಉಂಟು ನಮ್ಮಲ್ಲಿ, ನಿಂತಾದರೂ ನಿದ್ರಿಸುತ್ತಾರಲ್ಲ ಅವರ ಸಮಯ ಪ್ರಜ್ಞೆ ನಾವು ಮೆಚ್ಚಿ ಶಭಾಷ್ ಎನ್ನಲೇಬೇಕು.

ಆಫೀಸಿನಲ್ಲಿ ನಿದ್ದೆ ಮಾಡುವ ನನ್ನ ಸ್ನೇಹಿತನೊಬ್ಬನನ್ನು ವಿಚಾರಿಸಿದಾಗ ಅವ ಹೇಳಿದ್ದು ನಿದ್ದೆಯನ್ನು ಮಾಡುವುದಕ್ಕೆ ಮನೆಯನ್ನು ನೆಚ್ಚಿಕೊಂಡರೆ ಆಗುತ್ತದೆಯೇ? ಅಥವಾ ನಾನೊಬ್ಬನೇ ಇಲ್ಲಿ ನಿದ್ದೆ ಮಾಡುತ್ತಿದ್ದೇನೆಯೇ? ಅವನು ಪ್ರಶ್ನಿಸಿದರೆ ಯಾರ ಬಳಿಯಾದರೂ ಉತ್ತರ ಸಿಗುತ್ತದೆಯೇ?

ನನ್ನ ಸ್ನೇಹಿತನ ಮಾತನ್ನು ಹಾಸ್ಯವಾಗಿ ಪರಿಗಣಿಸದೆ ಗಂಭೀರವಾಗಿ ವಿಚಾರಿಸಿದರೆ ಸ್ವಲ್ಪ ಸತ್ಯ ಹೊರಬೀಳುತ್ತದೆ. ಮರುಭೂಮಿ, ಮಲೆನಾಡು ಎಂಬ ವರ್ಗ ಭೇದವಿಲ್ಲದೆ ಎಲ್ಲಾ ಕಡೆಗೂ ಕುಡಿಯುವ ನೀರು ಸಿಗದಂತಹ ಪರಿಸ್ಥಿತಿ ಉಂಟಾಗಿದೆ. ನೀರು ತರಲು ಹೊರ ಹೊರಟರೆ ಅವನು ಯಾವುದಾದರೊಂದು ಗರಡಿ ಮನೆಯಲ್ಲಿ ಪಳಗಿದವನಿರಬೇಕು. ಹೋರಾಟ ನಡೆಸಿದರೆ ಮಾತ್ರ ನೀರು, ಇಲ್ಲದಿದ್ದರೆ ಇಲ್ಲ. ಹೀಗಾಗಿ ಬೆಳಿಗ್ಗೆ ನಾಲ್ಕಕ್ಕೇ ಏಳಬೇಕು. ಒಂದೂವರೆಯಿಂದ ಎರಡು ತಾಸಿನಲ್ಲಿ ಎಂಟೋ ಅಥವಾ ಹತ್ತೋ ಕೊಡ ನೀರು ತಂದವನೇ ಭಾಗ್ಯಶಾಲಿ. ಹಿಂದೆಯೇ ಶೇವಿಂಗ್, ಬ್ರಷಿಂಗ್, ಸ್ನಾನ, ಅಡುಗೆ, ಐರನ್, ಟಿಫಿನ್ ಮುಗಿಸಿ ಊಟಕ್ಕೆ ಡಬ್ಬಿ ಕಟ್ಟಿಕೊಂಡು ರೆಡಿಯಾಗುತ್ತಲೇ ಆಫೀಸಿಗೆ ಸಮಯವಾಗಿರುತ್ತದೆ. ಬಸ್ಸಿಗಾಗಿ ಓಡಾಟ. ಅಲ್ಲಿ ಮತ್ತೊಂದು ಜಂಗೀ ಕುಸ್ತಿ. ಆಫೀಸು ಮುಗಿಸಿ ಮನೆಗೆ ಬಂದರೆ ನಿತ್ಯದ ಸಂಸಾರದ ಜಂಜಾಟ, ಶಾಪಿಂಗ್ ಹೀಗೆ ದಿನವೆಲ್ಲಾ ಕಳೆದು ಹೋಗುತ್ತದೆ. ರಾತ್ರಿ ಮಲಗುವಾಗ ಹತ್ತೂವರೆಯೋ, ಹನ್ನೊಂದೋ ಆಗಿರುತ್ತದೆ. ಸರಿಯಾಗಿ ಗಂಡ ಹೆಂಡತಿ ಒಂದೈದು ನಿಮಿಷ ಆರಾಮವಾಗಿ ಕುಳಿತು ಕಾಫಿ ಕುಡಿಯಲೂ ಸಮಯವಿರುವುದಿಲ್ಲ. ಅಲ್ಲದೇ ಪರಿಪೂರ್ಣ ಆರೋಗ್ಯಕ್ಕೆ ಕನಿಷ್ಠ ಆರು ತಾಸಾದರೂ ನಿದ್ರೆ ಮಾಡಬೇಕು ಎಂದು ಆರೋಗ್ಯ ತಜ್ಞರು ಹೇಳುತ್ತಿಲ್ಲವೇ? ಹಾಗಾದಾಗ ಉಳಿದ ಒಂದು ತಾಸು ನಿದ್ದೆಯನ್ನು ನನ್ನ ಸ್ನೇಹಿತ ಎಲ್ಲಿ ಮಾಡಬೇಕು? ಆಫೀಸ್ ಬಿಟ್ಟರೆ ಇಂತಹ ಸನ್ನಿಹಿತ ಸ್ಥಳ ಎಲ್ಲಿಯಾದರೂ ಸಿಗುತ್ತದೆಯೇ?



ಎಲ್ಲಾ ರೋಗಗಳಿಗೂ ಕೆಲವು ಲಕ್ಷಣಗಳನ್ನು ಹೇಳುತ್ತೇವೆ. ಹಾಗೆಯೇ ನಿದ್ದೆಯೆಂಬ ಸವಿರೋಗಕ್ಕೆ ಲಕ್ಷಣಗಳನ್ನು ಹೇಳಬಹುದು. ಮಿತಿ ಮೀರಿ ಆಕಳಿಸುತ್ತಿದ್ದರೆ, ಕಣ್ಣು ಜಾಸ್ತಿ ಕೆಂಪಗಾಗಿದ್ದರೆ, ಜಾಸ್ತಿ ಕಣ್ಣು ಪುಳಕಿಸುತ್ತಿದ್ದರೆ, ಜೋಲಿ ಹೊಡೆಯುತ್ತಿದ್ದರೆ ನಿದ್ದೆ ಬಂದಿದೆ ಎಂದೇ ಅರ್ಥ. ಚುನಾವಣಾ ಸಂದರ್ಭದಲ್ಲಿ ಮತಗಟ್ಟೆಗಳನ್ನು ಸೂಕ್ಷ್ಮ, ಅತಿ ಸೂಕ್ಷ್ಮ ಎಂದು ಗುರುತಿಸುವುದಿಲ್ಲವೇ? ಹಾಗೆಯೇ ನಿದ್ದೆ ಮಾಡುವವರನ್ನು ಸೂಕ್ಷ್ಮ ನಿದ್ರಾಗಾಮಿಗಳು, ಅತಿ ಸೂಕ್ಷ್ಮ ನಿದ್ರಾಗಾಮಿಗಳು ಎಂದು ವಿಭಾಗಿಸುವದಲ್ಲದೇ ಗೊರಕೆ ಹೊಡೆಯುವವರು, ಕೋಳಿ ನಿದ್ರೆ ಮಾಡುವವರು, ಕಳ್ಳ ನಿದ್ರೆ ಮಾಡುವವರು ಕೆಲ ಬಗೆಗಳೆಂದು ವಿಂಗಡಿಸಬಹುದು.

ಅತಿ ಸೂಕ್ಷ್ಮ ನಿದ್ರಾಗಾಮಿಗಳೆಂದರೆ ಲೈಟಿನ ಸ್ವಿಚನ್ನು ಒತ್ತಿದರೆ, ಬೆಳಕಿನ ಕಿರಣಗಳು ಕಣ್ಣಿಗೆ ಬಿದ್ದರೆ, ಪಕ್ಕದಲ್ಲಿ ಯಾರಾದರೂ ಮಾತನಾಡುತ್ತಿದ್ದರೆ ಎಚ್ಚರವಾಗುವವರು ಈ ವರ್ಗಕ್ಕೆ ಸೇರುತ್ತಾರೆ. ಇಂತಹ ಜನರನ್ನು ಮನೆ ಕಾಯಲು ನೇಮಿಸಿ ಮನೆಯವರೆಲ್ಲರೂ ಹೊರ ಹೋಗಲು ಉಪಯೋಗಿಸುತ್ತಾರೆ. ಸೂಕ್ಷ್ಮ ನಿದ್ರಾಗಾಮಿಗಳೆಂದರೆ ಪಕ್ಕದಲ್ಲಿ ಮೈಕ್ ಒದರುತಿದ್ದರೆ, ಗೊರಕೆ ಹೊಡೆಯುತ್ತಿದ್ದರೆ ನಿದ್ರೆ ಬರುವುದಿಲ್ಲ. ಇನ್ನು ಗೊರಕೆ ಹೊಡೆಯುವವರ ಬಗ್ಗೆ ಏನೂ ಹೇಳಬೇಕಾಗಿಲ್ಲ. ಅವರು ಉಂಡಮನೆಗೆ ಕೇಡು ಬಗೆಯುವವರು. ತಾವು ಸೊಂಪಾಗಿ ನಿದ್ರೆ ಮಾಡುತ್ತಾರೆ. ಪಕ್ಕದಲ್ಲಿರುವವರ ನಿದ್ರೆ ಕೆಡಿಸುತ್ತಾರೆ. ತಮಗಿಂತಲೂ ಬಲಶಾಲಿ ಗೊರಕೆ ಹೊಡೆಯುವವರು ಇದ್ದರೂ ಬಗ್ಗದವರು. ಇವರು ಸುತ್ತ ನಾಲ್ಕೈದು ಮನೆಯವರಿಗೆ ನಿದ್ರೆ ಮಾಡಗೊಡುವುದಿಲ್ಲ.

ಕೋಳಿ ನಿದ್ರೆ ಮಾಡುವವರೆಂದರೆ ಒಂದು ತಾಸೋ, ಎರಡು ತಾಸೋ ನಿದ್ದೆ ಮಾಡಿ ಎಚ್ಚರವಿದ್ದುಬಿಡುವವರು. ನಂತರ ಇವರಿಗೆ ನಿದ್ದೆಯೇ ಬರುವುದಿಲ್ಲ. ಕಳ್ಳ ನಿದ್ದೆ ಮಾಡುವವರ ಬಗ್ಗೆ ಏನೂ ಹೇಳಲು ಸಾಧ್ಯವಿಲ್ಲ. ಇವರು ಯಾಕೆ ಹೀಗೆ ನಟಿಸುತ್ತಾರೋ, ಅವರ ಉದ್ದೇಶಗಳೇನು? ಏನು ಸಾಧಿಸುವುದು ಇದೆ ಎಂದು ಊಹಿಸುವುದು ಕೂಡಾ ಕಷ್ಟ. ಬಸ್‌ನಲ್ಲಿ ಕೆಲವರು ಕೃತಕ ನಿದ್ದೆ ಮಾಡುತ್ತಿರುತ್ತಾರೆ. ಆಗ ಅವರ ಉದ್ದೇಶ ತಮಗಾರೋ ಪರಿಚಯವಿದ್ದವರನ್ನು ಕರೆದು ತಮ್ಮ ಸೀಟಿನಲ್ಲಿಯೇ ಸ್ವಲ್ಪ ಸರಿ ಹೊಂದಿಸಿಕೊಳ್ಳ ಬೇಕಾಗುತ್ತದೆಯೇನೋ ಎಂದು ಅಥವಾ ತಮಗೆ ಪರಿಚಯವಿರುವವರ ಟಿಕೆಟ್ ತಾವೆಲ್ಲಿ ತೆಗೆಯಿಸಬೇಕಾಗುತ್ತದೆಯೇನೋ ಎಂದು. ಆಗ ಕಳ್ಳ ನಿದ್ದೆ ಒಮ್ಮೆಲೇ ಪ್ರಾರಂಭ. ಒಬ್ಬ ಯುವಕನ ಪಕ್ಕದಲ್ಲಿ ಸುಂದರ ಯುವತಿ ಬಂದು ಕುಳಿತುಬಿಟ್ಟರಂತೂ ಆ ಯುವಕನಿಗೆ ಬಹುಬೇಗನೇ ಕಳ್ಳನಿದ್ದೆ ಬಂದುಬಿಡುತ್ತದೆ. ಕಳ್ಳ ನಿದ್ದೆ ಮಾಡುತ್ತಾ ಆ ಯುವತಿಯ ಅವಯವಗಳನ್ನು ಸೋಕಿಸುತ್ತಾ ಸಂತೃಪ್ತಿಪಡುವ ಕೀಳು ಬುದ್ಧಿಯ ಜನರೂ ಇದ್ದಾರೆ. ಎಷ್ಟೋ ಸಂದರ್ಭಗಳಲ್ಲಿ ಅಲ್ಲಿ ಪ್ರೇಮ ಉತ್ಪತ್ತಿಯಾಗುವುದನ್ನು ತಳ್ಳಿಹಾಕುಪಂತಿಲ್ಲ.




ನವಕರ್ನಾಟಕ ಪ್ರಕಾಶನ ಹಾಗೂ ಪುಸ್ತಕ ಮಹಲ್ ಸಂಸ್ಥೆಗಳು ಮಂಗಳೂರಿನಲ್ಲಿ ಪುಸ್ತಕ ಪ್ರದರ್ಶನ ಏರ್ಪಡಿಸಿದ್ದವು. ಸೆಪ್ಟೆಂಬರ್ ೧ರಿಂದ ೧೪ರವರೆಗೆ ಪುಸ್ತಕ ಪ್ರದರ್ಶನ-ಮಾರಾಟ ಯಶಸ್ವಿಯಾಗಿ ನಡೆಯಿತು. ನವಕರ್ನಾಟಕದ ಅಧ್ಯಕ್ಷರಾದ ಶ್ರೀ ಬಿ. ವಿ. ಕಕ್ಕಿಲ್ಲಾಯರು ಪ್ರದರ್ಶನ ಉದ್ಘಾಟಿಸಿದರು. ಜಾನಪದ ವಿದ್ವಾಂಸ ಡಾ|| ಕೆ. ಚಿನ್ನಪ್ಪಗೌಡ, ಮೇಯರ್ ಕೆ. ದಿವಾಕರ ಹಾಗೂ ಇತರ ಪುಸ್ತಕ ಪ್ರಿಯರು ಭಾಗವಹಿಸಿದ್ದರು.

ಕೆಲವೊಬ್ಬರು ಎಲ್ಲಿಗೋ ಹೋಗಬೇಕಾಗಿರುತ್ತದೆ. ಬೆಳಿಗ್ಗೆ ಬೇಗನೆ ಏಳಬೇಕು. ಅದಕ್ಕಾಗಿ ನಾಲ್ಕೈದು ಜನರಿಗೆ ಹೇಳಿ ಗಡಿಯಾರ ರೆಡಿ ಮಾಡಿಟ್ಟುಕೊಂಡು ಮಲಗಿರುತ್ತಾರೆ. ನಾಲ್ಕಕ್ಕೇ ಏಳಬೇಕು ಎಂಬ ಉದ್ವೇಗದಲ್ಲಿ ಕನಿಷ್ಠ ನಾಲ್ಕೈದು ಬಾರಿ ಎಚ್ಚರವಾಗುತ್ತಲೇ ಇರುತ್ತಾರೆ. ಇನ್ನೂ ಕೆಲವರು ಗಡಿಯಾರ ಹೊಡೆದುಕೊಂಡರೆ ಅದನ್ನು ಸುಮ್ಮನಿರಿಸಿ ತಾವೂ ಸುಮ್ಮನಾಗುತ್ತಾರೆ. ನಿದ್ದೆಯಲ್ಲಿದ್ದವರನ್ನು ಸತ್ತವರಿಗೆ ಹೋಲಿಸುತ್ತಾರೆ. 'ಅವನನ್ನು ನೋಡು ಸತ್ತ ಹೆಣ ಬಿದ್ದಂಗ ಬಿದ್ದಾನ' ಎನ್ನುವುದನ್ನು ಕೇಳಿದ್ದೇವೆ. ಅಂದರೆ ಅವನು ಚಿರನಿದ್ದೆ ಮಾಡುತ್ತಿದ್ದಾನೆ ಎಂದು ಅವರ ಮಾತಿನ ಅರ್ಥ.

ಇದುವರೆಗೂ ನಿದ್ದೆ ಮಾಡುವವರ ಬಗ್ಗೆ ಮಾತನಾಡಿದ್ದಾಯ್ತು. ನಿದ್ದೆ ಮಾಡದವರು ಇದ್ದಾರೆಯೇ ? ಅವರೂ ಇದ್ದಾರೆ. ಕೆಲವರಿಗೆ ನಿದ್ದೆಯೇ ಬರುವುದಿಲ್ಲ. ಅವರ ದೈಹಿಕ ಸ್ಥಿತಿಯಿಂದ, ಮಾನಸಿಕ ಚಿಂತನೆಯಿಂದ, ಅತಿಯಾದ ತೊಂದರೆ ಇದ್ದರೆ ಅವರಿಗೆ ನಿದ್ದೆ ಬರುವುದಿಲ್ಲ. ನಿದ್ದೆಯನ್ನು ಕೊಂಡುಕೊಳ್ಳಲು ಬರುವಂತಿದ್ದರೆ ಎಷ್ಟೊಂದು ಚೆನ್ನಾಗಿರುತ್ತಿತ್ತಲ್ಲ ಎಂದು ಆಕಾಶದ ಕಡೆ ನೋಡುತ್ತಾ ಕಾಣದ ದೇವರಿಗೆ ಮೊರೆಯಿಡುತ್ತಾರೆ. ಇವರೆಲ್ಲಾ ನಿದ್ದೆ ಬರುತ್ತಾ ಇಲ್ಲವಲ್ಲ ಎಂದು ಪೇಚಾಡುತ್ತಿದ್ದರೆ ಪರೀಕ್ಷೆಯ ಸಮಯದಲ್ಲಿ ವಿದ್ಯಾರ್ಥಿಗಳಿಗೆ ನಿದ್ದೆಯ ಕಾಟ. ಮೊದ ಮೊದಲು ಹನ್ನೊಂದು ಗಂಟೆಯವರೆಗೂ ಏಳುತ್ತಿದ್ದವರಿಗೆ ಈಗ ಹತ್ತು ಗಂಟೆಗೇನೇ ನಿದ್ದೆ ಬರುತ್ತದೆ. ಪರೀಕ್ಷೆಯು ಹತ್ತಿರ ಬಂದಂತೆ ನಿದ್ದೆಯೂ ತೀರಾ ಹತ್ತಿರ ಬರುತ್ತದೆ.

ಜಗತ್ತೆಲ್ಲಾ ಬೆಳಗಾದರೆ ಹಗಲು, ಕತ್ತಲಾದರೆ ರಾತ್ರಿ ಎಂದು ತಿಳಿದುಕೊಂಡು ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸುತ್ತಾರೆ. ಆದರೆ ನಾಟಕ ಮಂಡಳಿಯಲ್ಲಿ ಕೆಲಸ ಮಾಡುವವರು, ನೈಟ್ ವಾಚ್‌ಮನ್‌ಗಳು, ನೈಟ್ ಶಿಫ್ಟ್‌ಗಳಲ್ಲಿ ಕೆಲಸ ಮಾಡುವವರು, ಪೊಲೀಸ್, ಗೂರ್ಖಾ, ಗಾರ್ಡ್, ಇವರಿಗೆಲ್ಲಾ ತಿರುವು ಮುರುವು. ಹಗಲು ರಾತ್ರಿಯಾದರೆ, ರಾತ್ರಿ ಹಗಲು. ಹಾಗಂತ ಇವರು ನಿದ್ದೆಗೆಡುವುದಿಲ್ಲ. ಹಗಲಲ್ಲಿ ನಿದ್ದೆ ಮಾಡುತ್ತಾರೆ.

ಆರೋಗ್ಯ ಸರಿಯಾಗಿರಲು ನಿದ್ದೆ ಮಾಡಬೇಕು. ಹಾಗೆಯೇ ಯೋಗಾಸನ ಮಾಡಿದರೆ ಒಳ್ಳೆಯದಲ್ಲವೇ ? ಎಷ್ಟೇ ಕಷ್ಟವಾದರೂ ಒಂದು ಆಸನವನ್ನು ಖಂಡಿತ ಮಾಡಬಹುದು. ಅದೇ ಶವಾಸನ. ಅದರ ಮತ್ತೊಂದು ಹೆಸರೇ ನಿದ್ರಾಸನ. ಕೈ ಕಾಲುಗಳನ್ನು ನಿರಾಳವಾಗಿ ಬಿಟ್ಟು ಮಲಗುವುದು. ಈ ಆಸನವನ್ನು ಗಂಟೆಗಟ್ಟಲೇ ಮಾಡುವ ಜನ ನಮ್ಮಲ್ಲಿ ಅನೇಕರಿದ್ದಾರೆ. ಹಾಗಾದರೆ ನಮಗೂ ಆಸನ ಮಾಡಲು ಬರುತ್ತದೆಯೆಂದಾಯ್ತು. ಅದೇ ಹೆಮ್ಮೆಯ ವಿಷಯ. ನಿದ್ದೆ ನಮಗೆ ಬಹು ಮುಖ್ಯವಾಗಿ ಸುಂದರ ಕನಸುಗಳನ್ನು ಹೆಣೆದುಕೊಡುತ್ತದೆ. ಆ ದಿನವೆಲ್ಲ ಸುಖಮಯವಾಗಿ ಕ್ಷಣಗಳನ್ನು ಸಾಗಿಸಲು ಈ ಸುಂದರ ಕನಸುಗಳು ಎಷ್ಟೊಂದು ಚೇತೋಹಾರಿ ಎಂಬುದು ಕನಸುಗಳನ್ನು ಕಂಡವರಿಗೇ ಗೊತ್ತು.

ಯಾವಾಗಲೂ ನಿದ್ದೆ ಮಾಡುವವರನ್ನು ದರಿದ್ರ ಎಂದೇ ಕರೆಯುತ್ತೇವೆ. ಆದರೆ ಎಷ್ಟು ಜನಕ್ಕೆ ಗೊತ್ತು. ಆ ದರಿದ್ರರಿಗೂ ಒಬ್ಬ ದೇವತೆ ಇದ್ದಾಳೆಂದು. ಅವಳಾರು ಗೊತ್ತೇ !? ನಿದ್ರಾ ಲಕ್ಷ್ಮಿ ! ಹಾಗಾದರೆ ಆ ದರಿದ್ರರನ್ನು ಕಾಪಾಡಲು, ಸಲಹಲು, ಸಂರಕ್ಷಿಸಲು ಅವರಿಗೂ ಒಬ್ಬ ದೇವತೆಯೂ ಇದ್ದಾಳಲ್ಲ.

ನಿದ್ದೆ ಯಾಕೆ ಬೇಕೆಂದರೆ ದೈಹಿಕ ಸ್ಥಿತಿ ಸರಿಯಾಗಿರಲು ನಿದ್ದೆ ಬೇಕು. ವಿಶ್ರಾಂತಿ ಇರಬೇಕೆಂಬುದು ನಮಗೆ ಗೊತ್ತಿದೆ. ನಿದ್ದೆ ಬೇರೆ ಯಾವುದಾದರೂ ರೀತಿಯಿಂದ ಉಪಯೋಗವಾಗುತ್ತದೆಯೇ ? ಖಂಡಿತ ಉಪಯೋಗವಿದೆ. ಮನೆಯ ಬಾಡಿಗೆದಾರನಿಂದ ಬಾಡಿಗೆ ಹಣವನ್ನು ಕೊಡದೇ ತಪ್ಪಿಸಿಕೊಳ್ಳಲು, ಹಾಲಿನವ, ಪೇಪರಿನವ, ತರಕಾರಿಯವ, ಮುಂತಾದವರನ್ನು ಮುಂದಿನ ದಿನ ಬಾ ಎಂದು ಹೇಳಲು ಈ ನಿದ್ದೆ ತುಂಬಾ ಸಹಕಾರಿ. ನಮಗೆ ಬೇಡವಾದ ಜನ ನಮ್ಮನ್ನು ಭೇಟಿಯಾಗಲು ಬಂದರೆ ಆಗಲೂ ಉಪಕಾರಿ. ನನ್ನ ಸ್ನೇಹಿತ ತನ್ನ ಹೆಂಡತಿ ಸಂಗಡ ಹರಟೆ ಹೊಡೆಯುತ್ತಾ ಯಾರೋ ಕಾಣಲು ಬಂದವರನ್ನು ತನ್ನ ಮಗನ ಸಂಗಡ ಅಪ್ಪ ನಿದ್ದೆ ಮಾಡುತ್ತಿದ್ದಾರೆ ಎಂದು ಹೇಳಲು ತಿಳಿಸಿದ. ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳುವುದಾದರೆ ನಿದ್ದೆ ಆಪದ್ಬಾಂಧವ.

ನಿದ್ದೆ ಮಾಡುವುದರಿಂದ ಹಾನಿಕರವೇನೂ ಇಲ್ಲ. ಹೆಚ್ಚೆಂದರೆ ಸಮಯ ಪೋಲಾಗಬಹುದು. ಅದು ಬಿಟ್ಟರೆ ನಿದ್ದೆಯಿಂದ ಉಪಯೋಗವೇ ಜಾಸ್ತಿ. ಜಾಸ್ತಿ ನಿದ್ದೆ ಮಾಡುವ ಬದಲು ಸಮಯಕ್ಕನುಗುಣವಾಗಿ ಮಾಡುತ್ತಿದ್ದರೆ ದೇಹಕ್ಕೂ, ಮನಸ್ಸಿಗೂ ಒಳ್ಳೆಯದು. ಇಲ್ಲದಿದ್ದರೆ ದೇವರಂತೆ ನಾವು ಕೌಸಲ್ಯಾ ಸುಪ್ರಜಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ಎಂದು ಸುಪ್ರಭಾತ ಕೇಳಿಸಿಕೊಂಡೇ ಏಳಬೇಕಾಗುತ್ತದೆ.

**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ ಕೈಗಾರಿಕಾ ತರಬೇತಿ ಸಂಸ್ಥೆ
ಮಂಡಲಗಿರಿ, ತಾ|| ಯಲಬುರ್ಗಾ, ಜಿ. ಕೊಪ್ಪಳ - ೫೮೩ ೨೩೨

# ಕೋಮು ಸೌಹಾರ್ದತೆ ಮತ್ತು ಅಪರಾಧೀಕರಣ

**ಡಾ॥ ಬಸವರಾಜ ಸಬರದ**

ಯಾವುದೇ ಒಂದು ಕೋಮು, ಒಂದು ಜಾತಿ ಅಥವಾ ಒಂದು ಧರ್ಮಕ್ಕೆ ಎರಡು ಸಾಧ್ಯತೆಗಳಿರುತ್ತವೆ. ಸುಟ್ಟು ಭಸ್ಮಗೊಳಿಸುವ ಬೆಂಕಿಯ ಶಕ್ತಿ ಒಂದಾದರೆ, ಅಂತಃಕರಣದ ಚೇತನವಾಗಿ ಬೆಳಗುವ ಬೆಳಕಿನ ಶಕ್ತಿ ಮತ್ತೊಂದಾಗಿದೆ. ಇವುಗಳಲ್ಲಿರುವ ಶಕ್ತಿ ಸಾಧ್ಯತೆಗಳನ್ನು ಇತ್ಯಾತ್ಮಕವಾಗಿಸುವ ಇಲ್ಲವೆ ನೇತ್ಯಾತ್ಮಕಗೊಳಿಸುವ ಪ್ರಕ್ರಿಯೆಗಳು ಆಯಾ ಸಮಾಜ ವ್ಯವಸ್ಥೆಯಲ್ಲಿ ನಡೆಯುತ್ತಲೇ ಇರುತ್ತವೆ. ಹೀಗಾಗಿ ಒಂದು ಕೋಮು ಅಥವಾ ಒಂದು ದೇಶದ ಒಳಿತು-ಕೆಡುಕುಗಳು ಆಯಾ ಕೋಮು ಅಥವಾ ದೇಶದ ಜನಸಮುದಾಯವನ್ನು ಅವಲಂಬಿಸಿವೆ. ಆದರೆ ಈ ಜನಸಮುದಾಯವನ್ನು ರಾಜಕೀಯ - ಧಾರ್ಮಿಕ ಶಕ್ತಿಗಳು ನಿಯಂತ್ರಿಸುತ್ತಲೇ ಬಂದಿವೆ. ಹೀಗಾಗಿ ಹೆಸರಿಗೆ ಮಾತ್ರ ಜನಸಮುದಾಯ, ಹೆಸರಿಗೆ ಮಾತ್ರ ಪ್ರಜಾಪ್ರಭುತ್ವವಿರುವ ಭಾರತದಂತಹ ದೇಶಗಳಲ್ಲಿ ಕೋಮುವಾದದ ಬೆಳವಣಿಗೆಗೆ, ರಾಜಕೀಯ ಪಕ್ಷಗಳು ಅದರಲ್ಲೂ ಸತತವಾಗಿ ಅಧಿಕಾರದಲ್ಲಿರುವ ಬಲ ಪಂಥೀಯ ರಾಜಕೀಯ ಪಕ್ಷಗಳು ಮುಖ್ಯ ಕಾರಣವಾಗಿವೆ. ಹೀಗಾಗಿ ಕೋಮು ಸಂಘರ್ಷಕ್ಕೂ ರಾಜಕೀಯ ಅಪರಾಧೀಕರಣಕ್ಕೂ ನೇರವಾದ ಸಂಬಂಧ ಇದೆ. ಈ ಸತ್ಯವನ್ನು ಮರೆತು ಕೋಮುಸೌಹಾರ್ದತೆಯ ಬಗೆಗೆ ಮಾತನಾಡುವುದೆಂದರೆ, ಹೆಗ್ಗಣವನ್ನು ಒಳಗಿಟ್ಟುಕೊಂಡು ತೆಗ್ಗು ಮುಚ್ಚಿದಂತಾಗುತ್ತದೆ.

ರಾಜಕೀಯ ಅಪರಾಧೀಕರಣದ ಒಳಸುಳಿಗಳನ್ನು ತಿಳಿದುಕೊಳ್ಳದೆ, ಅವುಗಳನ್ನು ಭೇದಿಸದೆ ಕೋಮು ಸೌಹಾರ್ದತೆಯನ್ನು ಹುಟ್ಟುಹಾಕಲಿಕ್ಕಾಗುವುದಿಲ್ಲ. ಎಲ್ಲ ಧರ್ಮದ ಸ್ವಾಮಿಗಳನ್ನು ಒಂದು ವೇದಿಕೆಯಲ್ಲಿ ಕೂಡಿಸಿ ಭಾಷಣ ಮಾಡುವುದರಿಂದ ಕೋಮುಸೌಹಾರ್ದತೆ ಉಂಟಾಗುವುದಿಲ್ಲ. ದುಷ್ಟ ರಾಜಕೀಯದ ಕುಹಕತನದ ಮುಖಗಳನ್ನು ಪರಿಚಯ ಮಾಡಿಕೊಳ್ಳದೆ, 'ನಾವೆಲ್ಲಾ ಒಂದೇ-ಒಂದೆ!' ಎಂದಾಡುನ ಮಾತುಗಳು ಬಹಳ ದಿನ ಉಳಿಯಲಾರವು. ಕೋಮುಸೌಹಾರ್ದತೆ ಭಾಷಣ ಮಾಡಿದಷ್ಟು ಸುಲಭವಲ್ಲ. ಕೋಮುಸೌಹಾರ್ದತೆಯ ಬಗೆಗೆ ಕಳಕಳಿಯುಳ್ಳವರು ಮೊದಲು ಈ ದೇಶದ ಕೋಮು ಸಂಘರ್ಷದ ಚರಿತ್ರೆಯನ್ನು ತಿಳಿದುಕೊಳ್ಳಬೇಕು.

ಒಂದೇ ಮತ, ಒಂದೇ ಧರ್ಮ, ಒಂದೇ ದೇಶದಲ್ಲಿಯೇ ಭೇದಗಳನ್ನು ನಿರ್ಮಿಸಿ, ಬಿರುಕುಗಳನ್ನು ಸೃಷ್ಟಿಸಿರುವ ರಾಜಕೀಯ ಅಪರಾಧೀಕರಣವು ತುಂಬಾ ಅಪಾಯಕಾರಿಯಾದುದಾಗಿದೆ. ಇದರ ಕೈಯಲ್ಲಿ ಕೋಮುಗಲಭೆ ಸಿಕ್ಕರಂತೂ ಬೆಂಕಿ ಭುಗಿಲೇಳುತ್ತದೆ. ಇತ್ತೀಚೆಗೆ ಗುಜರಾತ್‌ನಲ್ಲಿ ನಡೆದದ್ದೇನು? ಎಂಬಂತಹ ಸತ್ಯ ಸಂಗತಿಗಳನ್ನು ಅರ್ಥಮಾಡಿಕೊಂಡರೆ, ಜನಸಾಮಾನ್ಯರಿಗೆ ಕೋಮುವಾದವೆಂದರೇನೆಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಗುಜರಾತ್‌ನ ಬೀದಿಯೊಂದರಲ್ಲಿ ಮುಸ್ಲಿಂ ಗರ್ಭಿಣಿಯ ಹೊಟ್ಟೆಯನ್ನು ಸೀಳಿ, ಭ್ರೂಣವನ್ನು ತ್ರಿಶೂಲಕ್ಕೆ ಸಿಕ್ಕಿಸಿ, ಆಕೆಯನ್ನು ರಸ್ತೆಯಲ್ಲಿಯೇ ಜೀವಂತವಾಗಿ ಸುಟ್ಟ ಪ್ರಕರಣವು, ಕೋಮುವಾದದ ಹೀನಾಯ ಕೃತ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ೧೯೫೭ರಲ್ಲಿ, ೧೯೭೮ರಲ್ಲಿ ಹಾಗೂ ೧೯೮೪ರಲ್ಲಿ ದೆಹಲಿಯಲ್ಲಿ ಕೋಮುಗಲಭೆಗಳು ನಡೆದಿವೆ; ಆದರೆ ಫೆಬ್ರುವರಿ ೨೦೦೨ರಲ್ಲಿ ಗುಜರಾತ್‌ನಲ್ಲಿ ನಡೆದ ಕೋಮುಗಲಭೆ ಇವೆಲ್ಲಾ ಗಲಭೆಗಳನ್ನು ಮೀರಿಸಿ ರಕ್ತದ ಹೊಳೆ ಹರಿಸಿದೆ, ಕಣ್ಣೀರಿನ ಕೋಡಿಕಟ್ಟಿದೆ. ಅನೇಕ ಮುಸ್ಲಿಂ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದ್ದಾರೆ, ಕೂಸು-ಕಂದಮ್ಮಗಳನ್ನು ಸುಟ್ಟುಹಾಕಿದ್ದಾರೆ. ಕೆಲವು ಮಹಿಳೆಯರನ್ನು ಬೆತ್ತಲೆಗೊಳಿಸಿದ್ದಾರೆ, ಕೆಲವರಿಗೆ ಚಿತ್ರಹಿಂಸೆ ಕೊಟ್ಟಿದ್ದಾರೆ. ವಿಶ್ವದ ಮುಂದೆ ಭಾರತ ತಲೆತಗ್ಗಿಸುವಂತೆ ಮಾಡಿದ್ದಾರೆ. ಇವರೆಲ್ಲಾ ಯಾರು? ಯಾಕೆ ಹೀಗೆ ಮಾಡಿದರು? ಎಂಬಂತಹ ಪ್ರಶ್ನೆಗಳಿಗೆ ಉತ್ತರಗಳು ಸರಳವಾದಾಗ ಮಾತ್ರ ಈ ದೇಶದ ಜನತೆಗೆ ಕೋಮುಗಲಭೆ ಎಂದರೇನೆಂಬುದು ಅರ್ಥವಾಗುತ್ತದೆ.

ಮೂಲಭೂತವಾದ ಹಾಗೂ ಕೋಮುವಾದ ಇವೆರಡೂ ಅಪಾಯಕಾರಿಯಾದವುಗಳೇ ಆಗಿವೆ. ಆದರೆ ಮೂಲಭೂತವಾದಕ್ಕಿಂತ ಕೋಮುವಾದ ಹೆಚ್ಚು ಅಪಾಯಕಾರಿಯಾಗಿದೆ. ಕೋಮುಸೌಹಾರ್ದತೆಯನ್ನು ಸ್ಥಾಪಿಸಬೇಕಾದರೆ ಮೂಲಭೂತವಾದ ಮತ್ತು ಕೋಮುವಾದಗಳೆರಡನ್ನೂ ಕಿತ್ತುಹಾಕಬೇಕಾಗುತ್ತದೆ.

ಭಾರತದಂತಹ ದೇಶದಲ್ಲಿ ಹಿಂದೂ ಮೂಲಭೂತವಾದದ ಜತೆಗೆ ಇಸ್ಲಾಂ ಮೂಲಭೂತವಾದವೂ ಇದೆ. ಇವೆರಡೂ ಪ್ರತಿಗಾಮಿ ಶಕ್ತಿಗಳೇ ಆಗಿವೆ. ಆದರೆ ಭಾರತದಲ್ಲಿ ಹಿಂದೂ ಮೂಲಭೂತವಾದ ಕೋಮುವಾದವಾಗಿ ಬೆಳೆದುನಿಂತಿದೆ. ಏಕೆಂದರೆ ಹಿಂದೂ ಮೂಲಭೂತವಾದವು ಇಲ್ಲಿನ ಬಹುಸಂಖ್ಯಾತ ಧರ್ಮದ್ದಾಗಿದೆ, ಆ ಕಾರಣಕ್ಕಾಗಿಯೇ ಯಾವಾಗಲೂ ಪ್ರಭುತ್ವ ಅದರ ಹಿಂದಿದೆ. ಹಿಂದೂ ಮೂಲಭೂತವಾದವು ಕೋಮುವಾದವಾಗಿ ಬೆಳೆಯಲು ಹಿಂದೂ ರಾಜಕೀಯ ಅಪರಾಧೀಕರಣ ಮುಖ್ಯ ಕಾರಣವಾಗಿದೆ. ಈ ಅವಕಾಶ ಮುಸ್ಲಿಂ ಮೂಲಭೂತವಾದಕ್ಕೆ ಭಾರತದಲ್ಲಿ ಲಭ್ಯವಾಗುವುದಿಲ್ಲ. ಏಕೆಂದರೆ ಅವರು ಅಲ್ಪಸಂಖ್ಯಾತರಾಗಿದ್ದಾರೆ ಮತ್ತು ಪ್ರಭುತ್ವದ ಮುಂಚೂಣಿಯಲ್ಲಿಲ್ಲ. ಈ ಸತ್ಯಸಂಗತಿಯನ್ನು ಸಾಮಾನ್ಯ ಜನತೆ ಅರ್ಥಮಾಡಿಕೊಂಡಾಗ ಮಾತ್ರ ಕೋಮುಗಲಭೆಯ ಒಳಮುಖಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಕೆಡವಿದಾಗ ಕೇಂದ್ರದಲ್ಲಿ ಕಾಂಗ್ರೆಸ್ ಸರಕಾರವಿತ್ತು. ಇತ್ತೀಚೆಗೆ ಗುಜರಾತ್‌ನಲ್ಲಿ ಕೋಮುಗಲಭೆ ನಡೆದು ನರಮೇಧವಾದಾಗ ಕೇಂದ್ರದಲ್ಲಿ ಬಿ.ಜೆ.ಪಿ. ಸರಕಾರವಿದೆ.

ಕಾಂಗ್ರೆಸ್ ಮತ್ತು ಬಿ.ಜೆ.ಪಿ. ರಾಜಕೀಯ ಪಕ್ಷಗಳ ಸಿದ್ಧಾಂತಗಳಲ್ಲಿ-ಪ್ರಣಾಳಿಕೆಗಳಲ್ಲಿ ಅಜಗಜಾಂತರ ವ್ಯತ್ಯಾಸ ಇದೆ. ಒಂದಕ್ಕೊಂದು ವಿರುದ್ಧವಾಗಿರುವ ಈ ಎರಡೂ ರಾಷ್ಟ್ರೀಯ ಪಕ್ಷಗಳು ಹಾಗೂ ರಾಜಕೀಯ ನಾಯಕರು ಹಿಂದೂವಾದದ ಮಾತು ಬಂದಾಕ್ಷಣ ಮೌನವಾಗುತ್ತಾರೆ. ದಿನವಿಡೀ ತಮ್ಮ ಭಾಷಣಗಳಲ್ಲಿ, ವೇದಿಕೆಗಳಲ್ಲಿ ಅಲ್ಪ ಸಂಖ್ಯಾತರ ಬಗೆಗೆ, ದಲಿತರ ಬಗೆಗೆ ಮಾತನಾಡುತ್ತಾರೆ. ಇವರ ರಾಜಕೀಯ ಅಪರಾಧೀಕರಣದ ಹಿಂದಿರುವ ಈ ದ್ವಂದ್ವ ನೀತಿಯನ್ನರಿಯದ ಜನಸಾಮಾನ್ಯರು ತಮಗರಿವಿಲ್ಲದಂತೆಯೇ ಈ ದೇಶದಲ್ಲಿ ಕೋಮುವಾದಿಗಳಾಗಿ ಮಾರ್ಪಡುತ್ತಾರೆ.

ಹೀಗೆಂದಾಕ್ಷಣ ಮುಸ್ಲಿಂ ಮೂಲಭೂತವಾದವು ಕೋಮುವಾದವಾಗಿ ಬೆಳೆಯಲಾರದೆಂದು ಇಲ್ಲಿ ಹೇಳುತ್ತಿಲ್ಲ. ಆದರೆ ಸದ್ಯದ ವರ್ತಮಾನದಲ್ಲಿ ಆ ಸಾಧ್ಯತೆಗಳಿಲ್ಲ. ಹಿಂದೆ ಭಾರತದಲ್ಲಿ ಮುಸ್ಲಿಂ ಅರಸರ ಪ್ರಭುತ್ವವಿದ್ದಾಗ ಕೆಲವು ಕಡೆ ಇಂತಹ ಪ್ರಸಂಗಗಳು ನಡೆದುದನ್ನು ಚರಿತ್ರೆ ನಮಗೆ ಹೇಳುತ್ತದೆ. ಆದರೆ ಅದು ಅರಸರ ಯುಗವಾಗಿತ್ತು, ವಂಶ ಪಾರಂಪರೆಯ ಕಾಲವಾಗಿತ್ತು. ಅಂದು ಹಿಂದೂ ರಾಜರಿದ್ದ ಕಡೆ ಅನೇಕ ಜಿನಾಲಯಗಳನ್ನು ಒಡೆದು ಶಿವಾಲಯಗಳನ್ನು ಮಾಡಲಾಯಿತು. ಮುಸ್ಲಿಂ ರಾಜರಿದ್ದ ಕಡೆ ಹಿಂದೂ ದೇವಾಲಯಗಳನ್ನು ಕೆಡುಹಿ ಮಸೀದಿಗಳನ್ನು ಕಟ್ಟಿಸಲಾಯಿತು. ಹಾಗೆಂದಾಕ್ಷಣ ಆ ಸೇಡನ್ನು ಇಂದು ತೀರಿಸಿಕೊಳ್ಳುವುದು ಸರಿಯೆ? ಯಾರೋ ಎಂದೋ ಮಾಡಿದ ತಪ್ಪಿಗೆ ಯಾರಿಗೆ ಶಿಕ್ಷೆ? ಇಂದಿನ ಅಮಾಯಕ ಮುಸ್ಲಿಂ ಜನಾಂಗ ಏನು ಮಾಡಿದೆ? ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಪಾತ್ರ ಕಡಿಮೆಯೆ? ಟಿಪ್ಪು ಸುಲ್ತಾನನಂತಹ ಪರಾಕ್ರಮಿ ಈ ನೆಲದ ಸಲುವಾಗಿ ಬ್ರಿಟಿಷರ ವಿರುದ್ಧ ಹೋರಾಡಿ ಹತನಾದದ್ದನ್ನು ಮರೆಯಲು ಸಾಧ್ಯವೆ? ಸಂತ ಶಿಶುನಾಳ ಶರೀಫ ನಮ್ಮ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿಲ್ಲವೆ? ನಮ್ಮೊಳಗನ್ನು, ನಾವಿಂದು ಕೇಳಿಕೊಳ್ಳಬೇಕಾಗಿದೆ.

ಪ್ರಭುತ್ವಕ್ಕೂ ಧರ್ಮಕ್ಕೂ ಸಂಬಂಧವಿದೆ. ಆಯಾಯ ಕಾಲದ ರಾಜಕೀಯ ಪ್ರಭುತ್ವವು, ತನ್ನ ಅಸ್ತಿತ್ವ ಹಾಗೂ ಮುಂದುವರಿಕೆಗಾಗಿ ತನ್ನ ಸಮರ್ಥಕ ಜನಾಂಗದ ಧಾರ್ಮಿಕ ಭಾವನೆಗಳನ್ನು ಪ್ರೋತ್ಸಾಹಿಸುತ್ತಾ ಕುಮ್ಮಕ್ಕು ಕೊಡುತ್ತದೆ. ಪ್ರಭುತ್ವ ತಮ್ಮೊಂದಿಗಿದೆಯೆಂಬ ಭರವಸೆಯಿಂದಲೇ ಆ ಜನಾಂಗದ ಕೆಲವರು ಕೋಮುವಾದವನ್ನು ಪ್ರಾರಂಭಿಸುತ್ತಾರೆ. ಸಮಸ್ಯೆಯಲ್ಲದೇ ಇರುವುದನ್ನು ಸಮಸ್ಯೆಯನ್ನಾಗಿ ಮಾಡುತ್ತಾರೆ. ಆ ಮೂಲಕ ಜ್ವಲಂತ ಸಮಸ್ಯೆಗಳನ್ನು ಮರೆಮಾಚಲೆತ್ನಿಸುತ್ತಾರೆ. ಆಗ ಸಾಮಾನ್ಯ ಜನತೆ ತಮ್ಮ ದಿನನಿತ್ಯದ ಹಸಿವು-ಬಡತನ-ನಿರುದ್ಯೋಗದಂತಹ ಮೂಲಭೂತ ಸಮಸ್ಯೆಗಳನ್ನು ಮರೆತು, ತಮ್ಮ ಧರ್ಮ ಉಳಿದರೆ ಇವೆಲ್ಲಾ ಉಳಿಯುತ್ತವೆಯೆಂಬ ಭ್ರಮೆಯಿಂದ ಕೋಮುಗಲಭೆಯನ್ನು ಪ್ರಾರಂಭಿಸುತ್ತಾರೆ. ಇಂತಹ ಗಲಭೆಗಳಲ್ಲಿ ಸ್ಥಳೀಯ ಗೂಂಡಾಗಳು, ಲೂಟಿಕೋರರು ಪ್ರಮುಖ ಪಾತ್ರ ವಹಿಸಿ, ಸಿಕ್ಕಿದ್ದನ್ನು ದೋಚಿಕೊಂಡು ಹೋಗುತ್ತಾರೆ. ಹಿಂಸೆ ನಡೆದು, ಅತ್ಯಾಚಾರವಾಗಿ ಅಮಾಯಕರು ಮಡಿದು, ಎಲ್ಲಾ ಮುಗಿದ ಮೇಲೆ ಪ್ರಭುತ್ವದ ಪ್ರತಿನಿಧಿಗಳಾದ ಪೊಲೀಸರು ರಕ್ಷಣೆ ಕೊಡುವುದಾಗಿ ಹೇಳುತ್ತಾರೆ. ಪ್ರಭುತ್ವದ ಮುಂಚೂಣಿಯಲ್ಲಿರುವ ಸಚಿವರು, ಶಾಸಕರು ಅಲ್ಪ ಮೊತ್ತದ ಪರಿಹಾರವನ್ನು ಘೋಷಿಸಿ ಅಲ್ಪಸಂಖ್ಯಾತರನ್ನು ತಬ್ಬಿಕೊಂಡು ಮೊಸಳೆ ಕಣ್ಣೀರು ಸುರಿಸಲು ಪ್ರಯತ್ನಿಸುತ್ತಾರೆ.

ಕೋಮುವಾದದಿಂದ ರಾಜಕೀಯ ನಾಯಕರಿಗೆ ಹಾಗೂ ಗೂಂಡಾಗಳಿಗೆ ಹೆಚ್ಚಿನ ಲಾಭವಿದೆ. ಜನಸಮುದಾಯದ ಎಲ್ಲ ಬಡವರಿಗೆ ಹಾಗೂ ಅಮಾಯಕರಿಗೆ ಇದರಿಂದ ನಿರಂತರವಾದ ತೊಂದರೆಯಿದೆ. ಹೀಗಾಗಿ ಕೋಮುವಾದ ಏಕಕಾಲಕ್ಕೆ ಕೆಲವರಿಗೆ ಪ್ರಯೋಜನವನ್ನು ಅನೇಕರಿಗೆ ಕೆಟ್ಟದ್ದನ್ನು ಮಾಡುತ್ತಾ ಹೋಗುತ್ತದೆ. ಈ ಕಾರಣಕ್ಕಾಗಿಯೇ ಕೆಲವು ರಾಜಕೀಯ ಪಕ್ಷಗಳ ಮುಖ್ಯ

ಪ್ರಣಾಳಿಕೆಯೇ ಕೋಮುವಾದವಾಗಿರುತ್ತದೆ. ಈ ಸತ್ಯವನ್ನರಿಯದ ಅಮಾಯಕ ಜನ ನಿತ್ಯ ಸಾಯುತ್ತಲೇ ಇರುತ್ತಾರೆ. ಇದಕ್ಕೆ ಪರಂಪರೆಯೂ ಹೊರತಾಗಿಲ್ಲ. ಹಿಂದಿನ ಕಾಲದಲ್ಲಿ ನಡೆದ ಕೋಮುಗಲಭೆಗಳಿಗೆ ಪ್ರಭುತ್ವ ಹೇಗೆ ಪೂರಕವಾಗಿತ್ತೆಂದು ತಿಳಿಯಲು ಅನೇಕ ಚಾರಿತ್ರಿಕ ಸಾಕ್ಷಿಗಳು ನಮ್ಮ ಮುಂದೆ ಇವೆ. ತಾಳಿಕೋಟೆಯ ಯುದ್ಧವಾಗಿರಬಹುದು, ಹೈದ್ರಾಬಾದ ನಿಜಾಮನ ಪ್ರಭುತ್ವದಲ್ಲಿ ನಡೆದ ರಜಾಕಾರರ ಹಾವಳಿಯಾಗಿರಬಹುದು. ಇಂತಹ ಅನೇಕ ಘಟನೆಗಳಲ್ಲಿ ಅಂದಿನ ಅಮಾಯಕ ಹಿಂದೂಗಳು ಚಿತ್ರಹಿಂಸೆಗೊಳಗಾಗಿದ್ದಾರೆ, ಮಡಿದು ಹೋಗಿದ್ದಾರೆ. ಹಾಗೆಂದುಕೊಂಡು ಪ್ರಜಾಪ್ರಭುತ್ವದ ವ್ಯವಸ್ಥೆಯಿರುವ ವರ್ತಮಾನದ ಸಂದರ್ಭದಲ್ಲಿ ಹಿಂದಿನದನ್ನು ಕೆದಕಿ ಸಾಮಾನ್ಯ ಜನತೆಯನ್ನು ಭಾವುಕರನ್ನಾಗಿ ಮಾಡಿ ಅಲ್ಪಸಂಖ್ಯಾತರ ವಿರುದ್ಧ ಹಿಂದೂಗಳನ್ನು ಎತ್ತಿಕಟ್ಟಿ ನಿಲ್ಲಿಸಿ ತಾವು ಅಧಿಕಾರ ಹಿಡಿಯಲು ಪ್ರಯತ್ನಿಸುವುದು ಅಥವಾ ಅಧಿಕಾರದಲ್ಲಿ ಮುಂದುವರಿಯಲು ಇಂತಹ ಕುತಂತ್ರಗಳನ್ನು ರೂಪಿಸುವುದೇ ನಿಜವಾದ ಅಪರಾಧೀಕರಣವಾಗಿದೆ.

ಹಳ್ಳಿಗಳಾಗಿರಲಿ, ಪಟ್ಟಣಗಳಾಗಿರಲಿ ಸಮಾಜ ವ್ಯವಸ್ಥೆಯಲ್ಲಿ ಬಹುಸಂಖ್ಯಾತರು-ಅಲ್ಪಸಂಖ್ಯಾತರು ಸೌಹಾರ್ದತೆಯಿಂದಲೇ ಬಾಳುತ್ತಿರುತ್ತಾರೆ. ಇದನ್ನು ಗಮನಿಸಿದ ಕೆಲವು ರಾಜಕೀಯ ಶಕ್ತಿಗಳು ಆ ಸೌಹಾರ್ದವನ್ನು ಹಾಳುಮಾಡಲು ಪ್ರಯತ್ನಿಸುತ್ತಾರೆ. ತಾವು ಅಧಿಕಾರದಲ್ಲಿ ಬರುವುದಕ್ಕಾಗಿ ಇತಿಹಾಸವನ್ನು ತಿರುಚಲು ಪ್ರಯತ್ನಿಸುತ್ತಾರೆ. ಪುರಾಣಗಳನ್ನು ಇತಿಹಾಸವಾಗಿಸುತ್ತಾರೆ. ಪುರಾಣಕ್ಕೂ-ಇತಿಹಾಸಕ್ಕೂ ವ್ಯತ್ಯಾಸವಿರದಂತೆ ಮಾಡಿಬಿಡುತ್ತಾರೆ. ಆಗ ಜನಸಮುದಾಯದಲ್ಲಿ ಗೊಂದಲ ಪ್ರಾರಂಭವಾಗಿಬಿಡುತ್ತದೆ. ಇದು ನನ್ನ ಧರ್ಮ, ಇವನು ನನ್ನ ನಾಯಕ, ಇದು ನನ್ನ ಮಂದಿರ ಎಂಬಂತಹ ಭಾವೋದ್ವೇಗಗಳು ಹುಟ್ಟಿಕೊಳ್ಳತೊಡಗುತ್ತವೆ. ಆಗ ಸಹೋದರರಂತೆ ಬದುಕುತಿದ್ದ ಜನತೆ ಮತ್ತೊಂದು ಕೋಮಿನವರನ್ನು ವೈರಿಗಳಂತೆ ಕಾಣುತ್ತಾರೆ. ಸ್ನೇಹಿತರಾಗಿದ್ದವರು ದ್ವೇಷ ಮಾಡಲು ಪ್ರಾರಂಭಿಸುತ್ತಾರೆ. ಆಗ ಸೌಹಾರ್ದದ ಸ್ಥಾನದಲ್ಲಿ ಸಂಘರ್ಷ ಹುಟ್ಟಿಕೊಳ್ಳುತ್ತದೆ, ಶಾಂತಿ ನೆಲೆಸಿದ್ದ ನಾಡಿನಲ್ಲಿ ಯುದ್ಧ ಪ್ರಾರಂಭವಾಗುತ್ತದೆ. ಅಮಾನವೀಯತೆಯಿಂದ, ಮತೀಯ ಹೆಸರಿನಲ್ಲಿ ನಡೆಯುವ ಬರ್ಬರ ಕೃತ್ಯಗಳಿಂದ ಸಮುದಾಯವೇ ನಾಶವಾಗುವ ಸ್ಥಿತಿ ತಲುಪುತ್ತದೆ.

ಹೀಗೆ ಕೋಮುವಾದದ ಬೀಜ ಸಮುದಾಯದಲ್ಲಿ ಹುಟ್ಟಿ ಬೆಳೆಯಲು ರಾಜಕೀಯ ಸ್ವಾರ್ಥಿಗಳೇ ಪ್ರಮುಖ ಕಾರಣರಾಗಿದ್ದಾರೆ. ಇಂಥವರು ಧರ್ಮವನ್ನು ತಮ್ಮ ತಾಳಕ್ಕೆ ತಕ್ಕಂತೆ ಕುಣಿಯಲು ಹಚ್ಚಿ, ಅದನ್ನೂ ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡುಬಿಡುತ್ತಾರೆ. ಆಗ ದಯೆಯ ಮೂಲವಾಗಿದ್ದ ಧರ್ಮಗಳು ಭಯ ಹುಟ್ಟಿಸಲು ಪ್ರಾರಂಭಿಸುತ್ತವೆ. ಧರ್ಮ ಮತ್ತು ರಾಜಕೀಯ ಕ್ಷೇತ್ರದಲ್ಲಿರುವ ಕೆಲವೇ ಕೆಲವು ಸ್ವಾರ್ಥಿಗಳು ಹುಟ್ಟುಹಾಕಿದ ಕೋಮುಗಲಭೆ ಇಡೀ ಸಮುದಾಯವನ್ನೆ ಸುಟ್ಟು ಭಸ್ಮ ಮಾಡತೊಡಗುತ್ತದೆ. ಆಗ ಇದೇ ಸ್ವಾರ್ಥಿಗಳೇ ಆ ದಳ್ಳುರಿಯನ್ನು ಆರಿಸುವ ಪೋಜು ಕೊಡುತ್ತಾರೆ. ಈ ಒಳಸತ್ಯಗಳನ್ನರಿಯದ ಸಾಮಾನ್ಯ ಜನತೆ ಯಾವ ಘಟನೆಗೆ ಯಾರು ಕಾರಣವೆಂಬುದನ್ನರಿಯದೆ ಅಮಾಯಕರಾಗಿಯೇ ಉಳಿದುಬಿಡುತ್ತಾರೆ. ಸಮುದಾಯದಲ್ಲಿ ಪರಿಸ್ಥಿತಿಯನ್ನು ಅರಿಯಲು ಆಗದ ಇಂತಹ ಅಮಾಯಕತೆ, ಮುಗ್ಧತೆ, ಮೌಢ್ಯತೆಗಳು ಬೆಳೆಯಲು, ನಮ್ಮಲ್ಲಿ ಇರುವ ಅನಕ್ಷರತೆ-ಬಡತನ-ಮೂಢನಂಬಿಕೆಗಳೇ ಕಾರಣವಾಗಿವೆ.

ಅದೇ ಕಾರಣ ಪುರಾಣವನ್ನು ಇತಿಹಾಸ ಮಾಡುವ ಸ್ವಾರ್ಥಿಗಳನ್ನೂ ಭಟ್ಟಂಗಿಗಳನ್ನೂ ನಾವು ಒಪ್ಪಿಕೊಳ್ಳುತ್ತೇವೆ. ಇತಿಹಾಸ-ಪುರಾಣದ ವ್ಯತ್ಯಾಸ ತಿಳಿಯದೆ, ಭೂತ-ವರ್ತಮಾನ ಅಂತರ ಅರಿಯದೆ ರಾಜಕೀಯ ಅಪರಾಧೀಕರಣದ ಸುಳಿಯಲ್ಲಿ ಸಿಕ್ಕು ನಮಗೆ ತಿಳಿಯದಂತೆಯೇ ಕೋಮುದಳ್ಳುರಿಯ ಕೊಳ್ಳಿರಾಮರಾಗಿಬಿಡುತ್ತೇವೆ.

ಶ್ರೀರಾಮನಾಗಲಿ, ಶ್ರೀಕೃಷ್ಣನಾಗಲಿ, ವಿಷ್ಣುವಾಗಲಿ, ಶಿವನಾಗಲಿ, ಗಣಪತಿಯಾಗಲಿ ಇವೆಲ್ಲಾ ಪೌರಾಣಿಕ ಪರಿಕಲ್ಪನೆಗಳು. ವಾಲ್ಮೀಕಿ ರಚಿಸಿದ ರಾಮಾಯಣ ಒಂದು ಮಹಾಕಾವ್ಯ. ಆ ಮಹಾಕಾವ್ಯದ ನಾಯಕ ಶ್ರೀರಾಮ. ವಾಲ್ಮೀಕಿಯ ಕಲ್ಪನೆಯ ಕೂಸು ರಾಮ. ದಶಾವತಾರಗಳಲ್ಲಿರುವ ಒಂದು ಪರಿಕಲ್ಪನೆ ರಾಮ. ಇಂತಹ ಕಲ್ಪನೆ-ಪರಿಕಲ್ಪನೆಯ ನಾಯಕನನ್ನು ಇತಿಹಾಸದ ನಾಯಕನನ್ನಾಗಿ ಮಾಡಿದಾಗಲೇ ಗೊಂದಲ ಪ್ರಾರಂಭವಾಗುತ್ತದೆ. ಹೀಗೆ ಪುರಾಣದ ಪರಿಕಲ್ಪನೆಗಳು ಇತಿಹಾಸವಾಗಿ ಮಾರ್ಪಟ್ಟಾಗ ರಾಮ ಅಯೋಧ್ಯೆಯ ನಿವಾಸಿಯಾಗುತ್ತಾನೆ, ಕೃಷ್ಣ ಹಸ್ತಿನಾಪುರಕ್ಕೆ ಬರುತ್ತಾನೆ, ಗಣಪತಿ ಹಾಲು ಕುಡಿಯಲು ಪ್ರಾರಂಭಿಸುತ್ತಾನೆ. ಆಗ ಇಲ್ಲಿರುವ ವ್ಯಕ್ತಿಗಳು, ಇಲ್ಲಿ ವಾಸ್ತವದಲ್ಲಿರುವ ವ್ಯಕ್ತಿಗಳಿಗಾಗಿ ಕಚ್ಚಾಟ ಪ್ರಾರಂಭಿಸುತ್ತಾರೆ. ಆ ಕಚ್ಚಾಟ ಮಂದಿರದ ರೂಪದಲ್ಲಿ, ಮಸೀದಿಯ ರೂಪದಲ್ಲಿ ಭುಗಿಲೆದ್ದು ದಳ್ಳುರಿಯಾಗುತ್ತದೆ.

ಇನ್ನು ಇತಿಹಾಸದ ವ್ಯಕ್ತಿಗಳನ್ನು ಕೆಲವರು ಪುರಾಣದ ವ್ಯಕ್ತಿಗಳನ್ನಾಗಿಸುತ್ತಾರೆ. ಬುದ್ಧ-ಬಸವ-ಅಂಬೇಡ್ಕರ್ ಈ ದೇಶದ ಇತಿಹಾಸ ಪುರುಷರು; ಕ್ರಾಂತಿಕಾರಿಗಳು. ವ್ಯಕ್ತಿ ಪೂಜೆಯನ್ನು, ಮೂರ್ತಿ ಪೂಜೆಯನ್ನು ದೇವಾಲಯ ವ್ಯವಸ್ಥೆಯನ್ನು, ಪುರೋಹಿತ ವ್ಯವಸ್ಥೆಯನ್ನು ಏಕಕಾಲಕ್ಕೆ ಧಿಕ್ಕರಿಸಿದವರು. ಆದರೆ ಇಂದು ನಾವಿವರನ್ನು ಏನು ಮಾಡಿದ್ದೇವೆ ? ಪ್ರತಿ ಊರು - ತಾಲೂಕು - ಜಿಲ್ಲೆಗಳಲ್ಲಿ ಇವರ ಹೆಸರುಗಳಲ್ಲಿ ಮಂದಿರ - ಮಠ - ಗುಡಿ - ಮೂರ್ತಿಗಳನ್ನು ಸ್ಥಾಪಿಸಿ ಅದರ ನಿರ್ವಹಣೆಗಾಗಿ ಪೂಜಾರಿಗಳನ್ನು - ಪುರೋಹಿತರನ್ನು - ಸ್ವಾಮಿಗಳನ್ನು- ಜಗದ್ಗುರುಗಳನ್ನು ನೇಮಿಸಿ ಪುರೋಹಿತಶಾಹಿಯನ್ನು ಬೆಳೆಸುತ್ತಿದ್ದೇವೆ, ವ್ಯಕ್ತಿ ಪೂಜೆಯನ್ನು - ಮೂರ್ತಿಪೂಜೆಯನ್ನು ಮಾಡುತ್ತಿದ್ದೇವೆ. ಈ ಇತಿಹಾಸದ ವ್ಯಕ್ತಿಗಳ ಜಯಂತಿಗಳು ಇಂದು ಸಣ್ಣ-ಸಣ್ಣ ಉದ್ದಿಮೆಗಳಾಗಿವೆ. ಇವರ ಹೆಸರಿನಲ್ಲಿ ಹೆದರಿಸಿ-ಬೆದರಿಸಿ ಪಟ್ಟಿ ವಸೂಲು ಮಾಡಿ ಸುಲಿಗೆ ಮಾಡುತ್ತಿದ್ದೇವೆ. ಹೀಗಾಗಿ ಈ ದೇವಾಲಯಗಳು- ಮಠಗಳು ಇಂದು ಬಂಡವಾಳವಿಲ್ಲದ ಉದ್ದಿಮೆಗಳಾಗಿ ಕೆಲವು ಸ್ವಾರ್ಥಿಗಳ ಆದಾಯ ಮೂಲಗಳಾಗಿವೆ.

ಕೋಮುಗಲಭೆಯ ಸಂದರ್ಭದಲ್ಲಿ ನಡೆಯುವ ಮತ್ತೊಂದು ಮಹತ್ವದ ಅಪಾಯಕಾರಿ ಬೆಳವಣಿಗೆಯೆಂದರೆ ಲೂಟಿ. ಜಗತ್ತಿನಲ್ಲಿ ಎಲ್ಲಿಯೇ ಕೋಮುಗಲಭೆಗಳು ನಡೆದಿರಲಿ ಅಲ್ಲಿ ಲೂಟಿಗಳಾಗಿರುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಜಾತಿಮತ-ಪಕ್ಷದ ಭೇದವಿಲ್ಲ. ಘಜನಿ ಮೊಹಮ್ಮದ, ಘೋರಿ ಮೊಹಮ್ಮದರು ಹಿಂದೆ ಈ ದೇಶವನ್ನು ಲೂಟಿ ಮಾಡಿದರೆಂದು ಹೇಳಲಾಗುತ್ತದೆ. ಆದರೆ ಶ್ರೀಹರ್ಷನೆಂಬ ಹಿಂದೂ ದೊರೆ ಇದೇ ರೀತಿಯ ಲೂಟಿಯನ್ನು ಮಾಡಿಸುತ್ತಿದ್ದನೆಂಬ ಸತ್ಯವನ್ನು ಮರೆಯಲಾಗುತ್ತದೆ. ಕಲ್ಹಣನ ''ರಾಜತರಂಗಿಣಿ'' ಕೃತಿಯಲ್ಲಿ ಇದಕ್ಕೆ ಸಂಬಂಧಿಸಿದಂತೆ ಸ್ಪಷ್ಟವಾದ ದಾಖಲೆಗಳಿವೆ. ಲೂಟಿ ಮಾಡುವುದಕ್ಕಾಗಿಯೇ ಈ ದೊರೆ ಒಬ್ಬ ಮಂತ್ರಿಯನ್ನು ನೇಮಿಸಿಕೊಂಡಿದ್ದನೆಂದರೆ ಈ ದೊರೆ ಹೇಗಿದ್ದನೆಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ.

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಹಿಂದೆ ನಿಜಾಮನು ರಾಜ್ಯವಾಳುತ್ತಿದ್ದಾಗ, ರಜಾಕಾರ ಹಾವಳಿ ಪ್ರಾರಂಭವಾಯಿತು. ಹಿಂದೂ-ಮುಸ್ಲಿಂ ಭಾಯಿ-ಭಾಯಿ ಎಂದು ಬದುಕುತಿದ್ದ ಈ ಪ್ರದೇಶದಲ್ಲಿ ರಜಾಕಾರರು ಕೋಮುಗಲಭೆಯನ್ನು ಪ್ರಾರಂಭಿಸಿ ಲೂಟಿ ಮಾಡತೊಡಗಿದರು. ಆ ಸಂದರ್ಭದಲ್ಲಿ ಇಂತಹ ಲೂಟಿಗಳಿಗೆ ಸಹಾಯಕರಾಗಿ ನಿಂತವರೇ ಊರಿನ ಗೌಡ ಕುಲಕರ್ಣಿಯರಾಗಿದ್ದರೆಂಬುದನ್ನು ಮರೆಯುವಂತಿಲ್ಲ. ನಿಜಾಮನ ಎಂಜಲಿಗಾಗಿ ಈ ಪ್ರದೇಶದ ಕೆಲವರು ದೇಸಾಯಿಗಳು ಜಾಗೀರದಾರರು ಏನೆಲ್ಲಾ ಮಾಡಿದ್ದಾರೆಂಬುದಕ್ಕೆ ಅನೇಕ ಪುರಾವೆಗಳಿವೆ. ಇದೇ ಜನಾಂಗದಿಂದ ಬಂದ ಈ ಪ್ರದೇಶದ ಹಿರಿಯ ಲೇಖಕರಾಗಿರುವ ಸಗರ ಕೃಷ್ಣಾಚಾರ್ಯರು ತಮ್ಮ ''ಆದರ್ಶ'' ಕಥೆಯಲ್ಲಿ ಕಡುಗಲಿ ಮೋಹನರಾಯರ ಪಾತ್ರದ ಮೂಲಕ ಸತ್ಯ ಸಂಗತಿಗಳನ್ನು ಬಿಚ್ಚಿಟ್ಟಿದ್ದಾರೆ. ಊರ ಮುಖಂಡನಾಗಿದ್ದ ಕಡುಗಲಿ ಮೋಹನರಾಯ ರಜಾಕಾರ ಹಾವಳಿಯಲ್ಲಿ ಹೇಗೆ ಗೂಂಡಾಗಿರಿ ಮಾಡಿದ, ಹೇಗೆ ರಜಾಕಾರರ ಹೆಸರಿನಲ್ಲಿ ಊರನ್ನು ಲೂಟಿ ಮಾಡಿದನೆಂಬುದನ್ನು ಈ ಸಣ್ಣ ಕತೆ, ಮನ ಮಿಡಿಯುವಂತೆ ಹೇಳುತ್ತದೆ.

ಹೈದ್ರಾಬಾದ್ ಕರ್ನಾಟಕದಲ್ಲಿ ನಡೆದ ರಜಾಕಾರರ ಹಾವಳಿಯ ಈ ಇನ್ನೊಂದು ಮುಖ ನಮ್ಮ ಜನಸಾಮಾನ್ಯರಿಗೆ ಪರಿಚಯವಾಗಿಲ್ಲ. ಆ ಬಗೆಗೆ ನಿಜವಾದ ವಸ್ತುನಿಷ್ಠ ಅಧ್ಯಯನ ನಡೆದರೆ, ರಜಾಕಾರರ ಹೆಸರಿನಲ್ಲಿ ಈ ಹಿಂದೂ ಪ್ರತಿನಿಧಿಗಳು ಅಂದು ಹೇಗೆ ಪರೋಕ್ಷವಾಗಿ, ತೆರೆಯಮರೆಯಲ್ಲಿ ನಿಂತುಕೊಂಡು ಜನರನ್ನು ದೋಚಿದರೆಂಬ ಭಯಾನಕ ಪ್ರಸಂಗಗಳು ಬಿಚ್ಚಿಕೊಳ್ಳುತ್ತವೆ.

ಟಿಪ್ಪೂ ಸುಲ್ತಾನನ ಸಂದರ್ಭದಲ್ಲಿ ಈ ದೇಶದ ಹಿಂದೂ ದೊರೆಗಳೆನಿಸಿಕೊಂಡ ಕೆಲವು ಪೇಶ್ವೆ-ಮರಾಠಾ ಅರಸರು ಮಾಡಿದ್ದೇನು ? ಮುಸ್ಲಿಂರ ವಿರುದ್ಧ ಹಿಂದೂಗಳನ್ನು ಎತ್ತಿಕಟ್ಟಿ ದಂಗೆ ಮಾಡಿದ್ದಾರೆ. ಬ್ರಿಟಿಷರ ಗುಲಾಮರಾಗಿ ಇಂತಹ ಆಳರಸರು ಒಂದು ಕಡೆಯಿದ್ದರೆ, ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ, ತನ್ನ ಕೊನೆಯ ಉಸಿರು ಇರುವವರೆಗೂ ಈ ನೆಲ-ಜಲ, ಈ ನಾಡು-ನುಡಿಗಾಗಿ ಹೋರಾಡಿ ಮಡಿದ ಟಿಪ್ಪೂ ನಿಜವಾದ ಹಿಂದೂ ವಾರಸದಾರನಾಗುತ್ತಾನೆ, ನಿಜವಾದ ರಾಷ್ಟ್ರಭಕ್ತನಾಗುತ್ತಾನೆ. ಇತಿಹಾಸವನ್ನು ತಿರುಚುವ, ಅದನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವವರೇ ಹೆಚ್ಚಾಗಿರುವಾಗ, ಈ ದೇಶದ ನಿಜವಾದ ರಾಷ್ಟ್ರಭಕ್ತನಾಗಿದ್ದ ಟಿಪ್ಪೂ ಇಂಥವರಿಗೆ ಮುಸ್ಲಿಂ ಅರಸನಾಗಿ ಮಾತ್ರ ಕಾಣುತ್ತಾನೆ.

ಏಸುಕ್ರಿಸ್ತ ಹುಟ್ಟಿದ ಜನಾಂಗದಲ್ಲಿಯೆ ಬುಷ್ ಹುಟ್ಟಿದ್ದಾನೆ. ದಯೆಯ ಮೂರ್ತಿಯಾದ ಏಸು ಎಲ್ಲಿ, ಯದ್ಧೋತ್ಪಾದಕನಾದ ಬುಷ್ ಎಲ್ಲಿ? ಪೈಗಂಬರನ ಜನಾಂಗದಲ್ಲಿಯೇ ಲಾಡೆನ್ ಹುಟ್ಟಿದ್ದಾನೆ. ಪೈಗಂಬರನ ಅಂತಃಕರಣವೆಲ್ಲಿ? ಲಾಡೆನ್‌ನ ಭಯೋತ್ಪಾದನೆಯೆಲ್ಲಿ? ಅದೇ ರೀತಿ ವಿವೇಕಾನಂದ ಹುಟ್ಟಿದ ನಾಡಿನಲ್ಲಿಯೇ ಹಿಂದೂಮತೀಯವಾದಿಗಳು ಹುಟ್ಟಿದ್ದಾರೆ ; ಗಾಂಧಿಯಿದ್ದ ದೇಶದಲ್ಲಿಯೇ ಗೋಡ್ಸೆ ಇದ್ದರೆ, ಗೋಡ್ಸೆ ಅಂತಹವರನ್ನು ಸಿದ್ಧಪಡಿಸಿದ ಪ್ರಖರ ಹಿಂದೂವಾದಿಗಳಿದ್ದಾರೆ. ಸೂಫಿ ಸಂತರು ಹುಟ್ಟಿದ ಮನೆತನಗಳಲ್ಲಿಯೇ ಮುಸ್ಲಿಂ ಮತಾಂಧರು ಹುಟ್ಟಿದ್ದಾರೆ. ಕೋಮುಗಲಭೆ ನಡೆಯಲು ಕೇವಲ ಕೋಮು ಜಗಳ ಮಾತ್ರ ಕಾರಣವಲ್ಲ, ಅದರ ಹಿಂದೆ ರಾಜಕೀಯ ಅಪರಾಧೀಕರಣವಿದೆ, ಕಾಣದ ಕೈಗಳಿವೆ. ಅದನ್ನು ಬಗೆದು ಬಿಚ್ಚಿ ನೋಡುವ ಕಾರ್ಯ ನಮ್ಮ ಜನಸಮುದಾಯದಿಂದ ಪ್ರಾರಂಭವಾಗಬೇಕಾಗಿದೆ.

---

**ಡಾ|| ಬಸವರಾಜ ಸಬರದ**

ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೫೮೫ ೧೦೬

# ಹುಡುಕಾಟ

ಕ್ಷಮಿಸಿ ಸ್ವಾಮಿ –
ನೀವು ನನ್ನ ತಂದೆಯೇನು ?
ನಿಮ್ಮನ್ನು ಕಾಣಲಿಕ್ಕಾಗಿ ಎಷ್ಟೊಂದು ಕಷ್ಟಪಟ್ಟು ಹುಡುಕಿದ್ದೇನೆ
ನಾನು ತಿಳಿಯಬೇಕಿದೆ. ನಿಮಗರ್ಥವಾಗುವುದೆ ?
ನೀವಿರದೆ ಜೀವನ ಅದೆಷ್ಟು ಕಠಿಣವೆಂದು ?

ಕ್ಷಮಿಸಿ ಸ್ವಾಮಿ –
ದಯವಿಟ್ಟು ........
ನೀವು ನನ್ನಪ್ಪನೇನು ?
ನೀವಿರಬಹುದು – ಕಂದು ಕೂದಲೆಂದು ಅವಳು ಹೇಳಿದ್ದಳು,
ಮತ್ತು ನೀವೆಲ್ಲಿದ್ದರೂ, ನಾನು ಗುರುತಿಸುವೆನೆಂದು.

ಕ್ಷಮಿಸಿ ಸ್ವಾಮಿ –
ನೀವು ನನ್ನ ತಂದೆಯೇನು ?
ನಿಮ್ಮ ವಿಷಯ ಹೇಳುವುದನು ಬಿಟ್ಟು,
ಅಮ್ಮ ಯಾವಾಗಲೂ ಅಳುತ್ತಿದ್ದಳು,
ಅದಕೇ, ನನಗೇನು ತಿಳಿದಿಲ್ಲ
ನಾನಿಲ್ಲಿರುವುದೊಂದನು ಬಿಟ್ಟು.

ಕ್ಷಮಿಸಿ ಸ್ವಾಮಿ –
ನೀವು ನನ್ನಪ್ಪನೇನು ?
ಹೀಗೆ ನಾ ಕೇಳಿದರೆ, ನೀವು ತಪ್ಪು ತಿಳಿಯುವುದಿಲ್ಲವೆಂದಾಶಿಸುತ್ತೇನೆ.
ಅದೇನು ಪ್ರೇಮವಾಗಿತ್ತೊ – ಅಥವಾ ಅತೀವ ಅಸಹ್ಯವೋ ?
ನನಗೇನೂ ತಿಳಿದಿಲ್ಲ. ನಿಮಗರ್ಥವಾಗುವುದೇನು ?
ನೀವವಳ ಪ್ರೀತಿಸಿದ್ದಿರೇನು ? ನಿಜಕ್ಕೂ ಪ್ರೀತಿಸಿದ್ದಿರೇನು ?
ಅವಳ ಕೂದಲ ನೇವರಿಸಿದ್ದಿರೇನು ? ಅವಳ ಕೈ ಹಿಡಿದಿದ್ದಿರೇನು ?
ಅಥವಾ ಅವಳೂ ಕೇವಲ ಮತ್ತೊಂದು ಪಾತ್ರವೇನು ?
ಅಥವಾ ಅತ್ಯಾಚಾರವೇನು ? ಅವಳು ಅತ್ತಳೇನು ?
ನನಗರ್ಥವಾಗುವುದು.

ಕ್ಷಮಿಸಿ ಸ್ವಾಮಿ –
ಆಕಸ್ಮಾತ್ತಾಗಿ ?
ನೀವವಳ ಪ್ರೇಮಿಯಾದಿರೇನು ?
ಅದೆಷ್ಟೋ ಬಾರಿ ಕುಡುಕರ ನಡೆಯಂತೆ ?
ನಾನು ಬಂದದ್ದು ಹಾಗೆಯೇ ಏನು ?
ಓ, ದಯೆಯಿಟ್ಟು ದಯೆಯಿಟ್ಟು ಹೇಳಿ ನನಗೆ.

ಕ್ಷಮಿಸಿ ಸ್ವಾಮಿ –
ನನ್ನಪ್ಪನನು ಯಾವಾಗಲೂ ಬಯಸಿದ್ದೆ ನಾನು.
ಹುಡುಗಿಯರ ಮನಸು ಹೇಗೆಂದು ನಿಮಗು ತಿಳಿದಿಹುದು.
ಆದರೆ, ರೇಷಿಮೆ, ಜರಿ, ರಿಬ್ಬನ್‌ಗಳಿಲ್ಲದೆಯೆ, ನಾನು ಬೆಳೆದೆ
ಬರಿ ನನ್ನ ಮನಸಿನೊಡನೆ.... ಎಲ್ಲವೂ ಬರಿ ಒಂದು ಸುಳಿಯಲ್ಲಿ.

ಕ್ಷಮಿಸಿ ಸ್ವಾಮಿ –
ಅಗತ್ಯವಾಗಿಯೂ... ನಾನು ಹುಡುಕಲೇಬೇಕಿದೆ
ಯಾವುದೊಂದು, ಅಸಲಿ ಕಾರಣಕಾಗಿಯಲ್ಲ
ನಿಮಗೆ ತಿಳಿದಿದೆ, ಹಣಕ್ಕಾಗಿ ನಾನು ಕೇಳುತ್ತಿಲ್ಲ
ನನಗೆ ತಿಳಿದಿರುವಂಥ ಅಪ್ಪನೊಬ್ಬನಿದ್ದರೆ,
ಅದು, ಬೆಟ್ಟದಷ್ಟು ವ್ಯತ್ಯಾಸ ಮಾಡುವುದೆಂದು.

ಕ್ಷಮಿಸಿ ಸ್ವಾಮಿ –
ನೀವು ನನ್ನಪ್ಪನೇನು ?



ಎಲ್ಲೆಲ್ಲಿಯೂ ಹುಡುಕುತ್ತಿದ್ದೇನೆ ನಾನು.
ಪ್ರೀತಿಸದಿದ್ದರೂ ಪರವಾಗಿಲ್ಲ ನೀವು ನನ್ನನ್ನು
ಪ್ರಮಾಣ ಮಾಡುತ್ತೇನೆ, ಯಾರಿಗೂ ಹೇಳುವುದಿಲ್ಲ ನಾನು.

ಕ್ಷಮಿಸಿ ಸ್ವಾಮಿ –
ಉತ್ತರದಲ್ಲೆಲ್ಲಾ ಮತ್ತು ದಕ್ಷಿಣದಲ್ಲಿಯೂ ಸಹ ಹುಡುಕಿದ್ದೇನೆ
ಒಂದೊಂದೆ ನಗರವಾಗಿ, ಇಡಿ ದೇಶವನ್ನೇ ಹುಡುಕಿದ್ದೇನೆ.
ನನ್ನಮ್ಮ ಕಪ್ಪಗಿದ್ದಳು, ಬೆಳ್ಳಗಿದ್ದನು ನನ್ನಪ್ಪ
ಅದರಿಂದಲೇ ನಾ ಹೀಗೆ ಕಂದು ಬಣ್ಣವಾಗಿದ್ದೇನೆ.

ಕ್ಷಮಿಸಿ ಸ್ವಾಮಿ –
ನೀವು ನನ್ನ ತಂದೆಯಲ್ಲದಿದ್ದರೆ
ಎಲ್ಲಾದರು ನೀವವನ ಕಂಡಿರುವಿರೇನು ?
ನನ್ನಪ್ಪನನು ನಾನು ಕಾಣ ಬಯಸುವೆನು
ಕೇವಲ ಅವನನೊಮ್ಮೆ ಭೇಟಿ ಮಾಡುವುದಕಾಗಿ, ಭೇಟಿ ಮಾಡುವುದಕಾಗಿ
ಎಲ್ಲೊ ಒಂದು ಕಡೆ, ಅವನಿರುವನೆಂಬುದನು, ಕೇವಲ, ತಿಳಿಯುವುದಕಾಗಿ.

ಕ್ಷಮಿಸಿ ಸ್ವಾಮಿ –
ಕ್ಷಮಿಸಿ ಸ್ವಾಮಿ
ಕ್ಷಮಿಸಿ ಸ್ವಾಮಿ


ಬಾಬಿ ಸೈಕ್ಸ್ (ಆಸ್ಟ್ರೇಲಿಯನ್ ಕವಿ)
ಕನ್ನಡಕ್ಕೆ : ಎಲ್. ವಿ. ಶಾಂತಕುಮಾರಿ
ನಂ. ೬೦, 'ಆಶೀರ್ವಾದ', ಆಂಜನೇಯ ನಗರ, ೩ನೇ ಅಡ್ಡರಸ್ತೆ, ಬಿ. ಎಸ್. ಕೆ. ೩ನೇ ಹಂತ, ಬೆಂಗಳೂರು

# ರಾಜ್ಯದ ಜನತೆಗೆ 57ನೇ ಸ್ವಾತಂತ್ರ್ಯ ದಿನಾಚರಣೆಯ ಶುಭಾಶಯಗಳು

**ಭಾರತೀಯನಾಗಿರುವುದೇ ಹೆಮ್ಮೆ**
**ಕರ್ನಾಟಕದಲ್ಲಿರುವುದಂತೂ ಮತ್ತಷ್ಟು ಹೆಮ್ಮೆ**



ಶ್ರೀ ಎಸ್. ಎಂ. ಕೃಷ್ಣ
ಮುಖ್ಯಮಂತ್ರಿಗಳು

## ಭಾರತದ ಹೆಮ್ಮೆಯ ರಾಜ್ಯ ಕರ್ನಾಟಕ

56 ವರ್ಷಗಳ ಹಿಂದೆ ನಮ್ಮ ರಾಷ್ಟ್ರನಾಯಕರು ಕಂಡ ದೂರದೃಷ್ಟಿ, ಹಾಕಿಕೊಟ್ಟ ಭದ್ರ ಬುನಾದಿ, ಕರ್ನಾಟಕವನ್ನು ಇಂದು ರಾಷ್ಟ್ರದ ಮಾದರಿ ರಾಜ್ಯವನ್ನಾಗಿ ನಿರೂಪಿಸಿದೆ ಹಾಗೂ ತನ್ನ ಸಾಧನೆಯ ಸಿಂಹಾವಲೋಕನದೊಂದಿಗೆ ಸಾಧಿಸಿದ ಪ್ರಗತಿಯನ್ನು ದಾಖಲಿಸುತ್ತದೆ.

ಕಳೆದ ಮೂರು ವರ್ಷಗಳಿಂದ ಕರ್ನಾಟಕ ಅನುಭವಿಸಿದ ಬರದ ಪ್ರತಿಕೂಲದ ನಡುವೆಯೂ ಪ್ರಗತಿಗೆ ಬರ ಬಂದಿಲ್ಲ. ಶಿಕ್ಷಣ, ವಸತಿ, ರೈತರ ಹಿತ, ಗ್ರಾಮೀಣಾಭಿವೃದ್ಧಿ ಕ್ಷೇತ್ರಗಳಲ್ಲಿ ಕರ್ನಾಟಕ ಇಂದು ಮುಂಚೂಣಿಯಲ್ಲಿದೆ. 1999ರ ಅಕ್ಟೋಬರ್ 11 ರಂದು ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಅವರ ನೇತೃತ್ವದಲ್ಲಿ ಅಧಿಕಾರಕ್ಕೆ ಬಂದ ಇಂದಿನ ಸರ್ಕಾರ ರೈತ, ದೀನ ದಲಿತ, ಅಲ್ಪಸಂಖ್ಯಾತ, ಮಹಿಳೆ ಮತ್ತು ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ರೂಪಿಸಿದ ಹಲವಾರು ಯಶಸ್ವಿ ಕಾರ್ಯಕ್ರಮಗಳು ಇಂದು ಫಲ ನೀಡಿವೆ.

**1. ಸ್ತ್ರೀಶಕ್ತಿ**

ಸರ್ಕಾರದ ಯೋಜನೆಯಾಗಿ ರೂಪುಗೊಂಡ ಸ್ತ್ರೀಶಕ್ತಿ ಇಂದು ಒಂದು ಆಂದೋಲನ. 11 ಲಕ್ಷಕ್ಕೂ ಹೆಚ್ಚಿನ ಮಹಿಳೆಯರನ್ನೊಳಗೊಂಡ 76,000 ಮಹಿಳಾ ಸ್ವಸಹಾಯ ಗುಂಪುಗಳು ಸಂಗ್ರಹಿಸಿರುವ ಉಳಿತಾಯದ ಮೊತ್ತ 140 ಕೋಟಿ ರೂ.ಗಳಿಗೂ ಹೆಚ್ಚು. ಇನ್ನೂ 25 ಸಾವಿರ ಸ್ತ್ರೀ ಶಕ್ತಿ ಗುಂಪುಗಳನ್ನು ರಚಿಸುವ ಗುರಿ.

**2. ರಸ್ತೆ ಸುಧಾರಣೆ**

ರಸ್ತೆ ಸುಧಾರಣೆಗಾಗಿಯೇ ಅಸ್ತಿತ್ವಕ್ಕೆ ಬಂದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ 10 ಸಾವಿರ ಕಿಲೋಮೀಟರ್‌ಗಳಿಗೂ ಹೆಚ್ಚು ಉದ್ದದ ಜಿಲ್ಲಾ ರಸ್ತೆಗಳನ್ನು ಅಭಿವೃದ್ಧಿಪಡಿಸಿದೆ. 147 ಸೇತುವೆಗಳನ್ನು ನಿರ್ಮಿಸಿದೆ. ಗ್ರಾಮೀಣ ರಸ್ತೆ ಸುಧಾರಣೆಗೆ ಮುಂದಿನ 2 ವರ್ಷಗಳಲ್ಲಿ 300 ಕೋಟಿ ರೂ. ವೆಚ್ಚ ಮಾಡಲು ನಿರ್ಧರಿಸಲಾಗಿದೆ. ರಸ್ತೆ ನಿರ್ವಹಣೆಗೆ ಆದ್ಯತೆ ನೀಡಲಾಗಿದೆ. ರಾಜ್ಯದ 2269 ಕಿ. ಮೀ. ಹೆದ್ದಾರಿಗಳ ನಿರ್ವಹಣೆಗೆಂದು **ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯನ್ನು** ರೂಪಿಸಲಾಗಿದೆ.

**3. ಗ್ರಾಮೀಣ ಸಾರಿಗೆ**

ಸಾರಿಗೆ ವ್ಯವಸ್ಥೆಯಲ್ಲಿ ರಾಷ್ಟ್ರಮಟ್ಟದ ಮನ್ನಣೆ ಪಡೆದಿರುವ ಕರ್ನಾಟಕ ಇದೇ ಆಗಸ್ಟ್ 15ರಿಂದ ಹಳ್ಳಿಗಳ ನಡುವೆ ಸಂಚರಿಸುವ ಮಿನಿ ಬಸ್‌ಗಳನ್ನು ರಸ್ತೆಗಿಳಿಸಿದೆ.

**4. ಕುಡಿಯುವ ನೀರು**

ಬರದ ಬವಣೆಯಲ್ಲೂ ಕುಡಿಯುವ ನೀರು ಪೂರೈಕೆಯನ್ನು ಸಮರ್ಪಕವಾಗಿ ನಿರ್ವಹಿಸಿದ ಹೆಗ್ಗಳಿಕೆ ಸರ್ಕಾರದ್ದು. ಗ್ರಾಮೀಣ ಕುಡಿಯುವ ನೀರು ಯೋಜನೆಗಳಿಗೆ ಮಾಡಲಾದ ವೆಚ್ಚ 132 ಕೋಟಿ ರೂ. ಜಲನಿರ್ಮಲ, ಜಲನಿಧಿ, ಸ್ವಜಲಧಾರಾ ಯೋಜನೆಗಳ ಮೂಲಕ 27 ಸಾವಿರ ಜನವಸತಿ ಪ್ರದೇಶಗಳಿಗೆ ಸುರಕ್ಷಿತ ನೀರು ಪೂರೈಸಲಾಗಿದೆ.

**5. ಸ್ವಚ್ಛ ಗ್ರಾಮ**

ಉತ್ತಮ ರಸ್ತೆ, ಒಳಚರಂಡಿ, ಸಮುದಾಯ ಗೊಬ್ಬರ ಕೇಂದ್ರ, ಹೊಗೆರಹಿತ ಒಲೆ, ಸಮುದಾಯ ಶೌಚಾಲಯ ಕಲ್ಪಿಸುವ ಸ್ವಚ್ಛ ಗ್ರಾಮ ಯೋಜನೆಯಲ್ಲಿ 27 ಸಾವಿರಕ್ಕೂ ಹೆಚ್ಚಿನ ಹಳ್ಳಿಗಳಲ್ಲಿ ಜೀವನ ಮಟ್ಟ ಅಭಿವೃದ್ಧಿಪಡಿಸಲಾಗಿದೆ.

**6. ಅಕ್ಷರ ದಾಸೋಹ**

ವಾರ್ಷಿಕ ರೂ. 202 ಕೋಟಿ ವೆಚ್ಚದ ಬೃಹತ್ ಮಧ್ಯಾಹ್ನದ ಬಿಸಿಯೂಟ ಯೋಜನೆಯಿಂದಾಗಿ ಕರ್ನಾಟಕದಾದ್ಯಂತ 1 ರಿಂದ 5ನೇ ತರಗತಿಯವರೆಗಿನ 53 ಲಕ್ಷಕ್ಕೂ ಅಧಿಕ ಶಾಲಾ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಿದೆ.

ಜೈ ಹಿಂದ್



ಕರ್ನಾಟಕ ವಾರ್ತೆ



# ಗೋಹತ್ಯೆ ಮತ್ತೊಂದು ರಾಜಕೀಯ ಅಸ್ತ್ರ

*ಕ್ಷಾಮ ಕಾಲದಲ್ಲೊಮ್ಮೆ ಸ್ವಾಮಿ ವಿವೇಕಾನಂದರನ್ನು ಒಂದು ಮುದಿ ಗೋವುಗಳ ಸಂರಕ್ಷಣಾ ಕೇಂದ್ರಕ್ಕೆ ಕರೆದುಕೊಂಡು ಹೋಗಿದ್ದರು. ಭೇಟಿಯ ಕೊನೆಯಲ್ಲಿ ಸ್ವಾಮೀಜಿ ಕೇಳಿದರು : ''ಇದೆಲ್ಲಾ ಒಳ್ಳೆಯದು. ಆದರೆ ಕ್ಷಾಮಪೀಡಿತ ಜನಕ್ಕೇನು ಮಾಡುತ್ತಿದ್ದೀರಿ ?'' ಉತ್ತರ : ''ಅದು ನಮ್ಮ ಕೆಲಸವಲ್ಲ. ಗೋಮಾತೆಯ ಸೇವೆಗೆ ನಾವು ಬದ್ಧರು.'' ಸ್ವಾಮೀಜಿ ಕಟುವಾಗಿ ನುಡಿದರು : ''ಹೌದು, ನಿಮ್ಮಂಥ ಹೃದಯವಿಲ್ಲದವರಿಗೆ ಗೋವು ಮಾತ್ರವೇ ತಾಯಿಯಾಗ ಬಲ್ಲುದೆಂದು ತೋರುತ್ತದೆ.''*

ಕೇಂದ್ರ ಮಾನವ ಸಂಪನ್ಮೂಲ ಮಂತ್ರಿ ಮುರಳಿ ಮನೋಹರ ಜೋಶಿಯವರು ಮೂಲತಃ ಭೌತಶಾಸ್ತ್ರದ ಅಧ್ಯಾಪಕರು. ಭೌತಶಾಸ್ತ್ರವನ್ನು ವಿದ್ಯಾರ್ಥಿಗಳಿಗೆ ಬೋಧಿಸುವವರಲ್ಲಿ ಮುಖ್ಯವಾಗಿ ವೈಜ್ಞಾನಿಕ ಮನೋಭಾವ, ಚಿಂತನೆ, ವಿಚಾರವಂತಿಕೆ ಇರಬೇಕು. ಆದರೆ ತಮ್ಮ ಮಂತ್ರಿ ಪದವಿಯ ಅವಧಿಯಲ್ಲಿ ಅವರು ಕೈಗೊಂಡಿರುವ ಅನೇಕ ನಿರ್ಧಾರಗಳು ಅವೈಜ್ಞಾನಿಕವಾದುವೇ ಆಗಿವೆ. ಇಷ್ಟು ಸಾಲದೆಂಬಂತೆ ಕಳೆದ ವರ್ಷ ಭಾರತೀಯ ರಾಷ್ಟ್ರೀಯ ವಿಜ್ಞಾನ ಅಕಾಡೆಮಿಯ ಸದಸ್ಯರನ್ನು ಉದ್ದೇಶಿಸಿ ಮಾತನಾಡುತ್ತಿದ್ದ ಜೋಶಿ, ತಾವು ಚಿಕ್ಕವರಾಗಿದ್ದಾಗ ಅಂದಿನ ಜನ ಗೋಮೂತ್ರವನ್ನು ನೇರವಾಗಿ ಹಾಗೆಯೇ ಸೇವಿಸುತ್ತಿದ್ದುದನ್ನು ಕಂಡಿದ್ದಾಗಿ ವಿವರಿಸುತ್ತಾ ''ಆರಂಭದಲ್ಲಿ ನನಗೂ ಅದನ್ನು ಕಂಡು ಅಸಹ್ಯವಾಗುತ್ತಿತ್ತು; ಆದರೆ ಅನೇಕ ವರ್ಷಗಳ ಶೈಕ್ಷಣಿಕ ತರಬೇತಿ (?) ಹಾಗೂ ಸಂಘ ಪರಿವಾರದ ಒಡನಾಟದ ಫಲವಾಗಿ ಈ ಪ್ರಾಚೀನ ಕ್ರಿಯೆಗಳಿಗೂ ಒಂದು ವೈಜ್ಞಾನಿಕ ತಳಹದಿ ಇದೆ ಎಂದು ಅರಿವಾಯಿತು'' ಎಂದು ಹೇಳಿದಾಗ ಅಲ್ಲಿ ನೆರೆದಿದ್ದ ಅನೇಕ ವಿಜ್ಞಾನಿಗಳು, ವಿಚಾರವಾದಿಗಳು, ಗೋಮೂತ್ರ ಸೇವಿಸಿದಂತೆಯೇ ದಿಙ್ಮೂಢರಾಗಿದ್ದರು. ಜೋಶಿಯವರಿಗೆ ಗೋವಿನ ಬಗ್ಗೆ ಎಷ್ಟು ಪೂಜ್ಯ ಭಾವನೆ ಇದೆಯೆಂದರೆ ಅವರ ಮಂತ್ರಿ ಮಂಡಲದ ಪರಿಧಿಯಲ್ಲಿ ಬರುವ ಅನೇಕ ಸಂಸ್ಥೆಗಳ ಮೂಲಕ ''ಗೋಹತ್ಯೆ ಮಾಡುವುದರಿಂದಲೇ ಭೂಕಂಪಗಳಾಗುತ್ತವೆ'' ಎಂಬ ಅಭಿಪ್ರಾಯ ವ್ಯಕ್ತವಾಗುತ್ತಿದೆ! ಭಾರತೀಯ ಗೋವಂಶ ರಕ್ಷಣಾ ಮತ್ತು ಪರಿಪಾಲನಾ ಪರಿಷತ್‌ನ ವಿಜ್ಞಾನಿ (?) ಪರಮಾನಂದ ಮಿತ್ತಲ್‌ರವರ ''ಗೋರಕ್ಷೆ - ಆತ್ಮರಕ್ಷೆ - ರಾಷ್ಟ್ರರಕ್ಷೆ – ಒಂದು ವೈಜ್ಞಾನಿಕ (?) ಪರಿಶೀಲನೆ'' ಎಂಬ ಕಿರುಹೊತ್ತಿಗೆಯಲ್ಲಿ ಲೇಖಕರು ದೆಹಲಿ ವಿಶ್ವವಿದ್ಯಾಲಯದ ಈರ್ವರು ಪ್ರೊಫೆಸರ್‌ಗಳ ಸಂಶೋಧನೆಯನ್ನು ಪ್ರಸ್ತಾಪಿಸಿ ''ಭೂ ಮಾತೆಯು ತನ್ನ ಮಕ್ಕಳ ಅಂದರೆ (ಗೋವುಗಳ) ಅಮಾನವೀಯ ಹತ್ಯೆಯನ್ನು ನೋಡುತ್ತಾ ನೋವಿನಿಂದ ಅರಚಿ, ನರಳಿ, ಹೊರಳಾಡುತ್ತಾಳೆ. ಹಾಗಾಗಿಯೇ ಭೂಕಂಪಗಳಾಗುತ್ತವೆ'' ಎಂದಿದ್ದಾರೆ.

ಸಂಘಪರಿವಾರದ ಧ್ಯೇಯೋದ್ದೇಶಗಳಲ್ಲಿ ಈ ರೀತಿಯ ಅವೈಜ್ಞಾನಿಕ ಕಿರು ಹೊತ್ತಿಗೆಗಳನ್ನು ಹೊರತರುವುದೇ ಅಲ್ಲದೆ, ಸಗಣಿ ಗೋಮೂತ್ರದಿಂದ ಅನೇಕ ಔಷಧಿಗಳನ್ನು ತಯಾರಿಸುವ ಯೋಜನೆಗಳೂ ಇವೆ. ನಾಗಪುರದಲ್ಲಿನ ಗೋ ವಿಜ್ಞಾನ ಕೇಂದ್ರವು ''ಪರಿಸರ ಸ್ನೇಹಿ ಗೋಕೇಂದ್ರಿತ ಆರ್ಥಿಕತೆಗೆ ವೈಜ್ಞಾನಿಕ ತಳಹದಿಯನ್ನು'' ಸ್ಥಾಪಿಸಲು ಹವಣಿಸುತ್ತಿದೆ. ಈ ಸಂಸ್ಥೆಯಲ್ಲಿ ಗೋಮೂತ್ರ, ಸಗಣಿಯಿಂದ ಶಾಂಪೂ, ಸಾಬೂನು, ಕೆಮ್ಮಿನ ಔಷಧಿ ಮುಂತಾದ ೩೨ ಪದಾರ್ಥಗಳನ್ನು ತಯಾರಿಸಲಾಗುತ್ತದೆ. ಈ ಗೋ ಕೇಂದ್ರಿತ ಚಿಕಿತ್ಸಾ ವಿಧಾನವನ್ನು ಜನರ ಬಳಿ ಕೊಂಡೊಯ್ಯುವುದು ಈ ಸಂಸ್ಥೆಯ ಧ್ಯೇಯವಾಗಿದೆ. ಸಂಸ್ಥೆಯ ಈ ಪರಿಶ್ರಮಗಳಿಗೆ ಕೇಂದ್ರ ವೈಜ್ಞಾನಿಕ ಸಂಶೋಧನಾ ಸಂಸ್ಥೆ, ರಾಷ್ಟ್ರೀಯ ಪರಿಸರ ತಾಂತ್ರಿಕ ಸಂಶೋಧನಾ ಸಂಸ್ಥೆ, ಕೇಂದ್ರ ಔಷಧ ಸಂಶೋಧನಾ ಸಂಸ್ಥೆ, ರಾಷ್ಟ್ರೀಯ ಸಸ್ಯವಿಜ್ಞಾನ ಸಂಶೋಧನಾ ಸಂಸ್ಥೆ, ಮುಂತಾದವು ಪ್ರೋತ್ಸಾಹ ನೀಡುತ್ತಿವೆ.

ಪ್ರಾಚೀನ ಕಾಲದಿಂದಲೂ ಪುರಾಣಗಳಲ್ಲಿ ಗೋವಿಗೆ ಒಂದು ಪವಿತ್ರ ಸ್ಥಾನ ನೀಡಲಾಗಿದೆ. ಗೋವುಗಳು ವಾಸಿಸುವ ಪ್ರದೇಶವನ್ನೇ ಪವಿತ್ರವೆಂದು ಭಾವಿಸಲಾಗುತ್ತದೆ. ವೇದ ಮಂತ್ರ ಪಠಣ, ಗೋವು, ಅಗ್ನಿ ಹಾಗೂ ಬ್ರಾಹ್ಮಣ ಪುರೋಹಿತರು ವೈದಿಕ ಸಂಸ್ಕೃತಿಯ ನಾಲ್ಕು ಸ್ತಂಭಗಳಂತೆ. ಯಾವುದೇ ಯಜ್ಞ ಯಾಗಾದಿಗಳಲ್ಲಿ ಈ ನಾಲ್ಕು ಅಂಶಗಳನ್ನು ಕಡ್ಡಾಯವಾಗಿ ಕಾಣಬಹುದು. ಯಜ್ಞ ಕ್ರಿಯೆಯಲ್ಲಿ ತುಪ್ಪವನ್ನು ಮುಖ್ಯವಾಗಿ ಉಪಯೋಗಿಸುವುದರಿಂದ ಗೋವಿಗೆ ದೈವೀ ಸ್ವರೂಪವನ್ನೇ ನೀಡಲಾಗಿದೆ. ಯಾವುದೇ ಯಜ್ಞ ಮುಗಿದ ನಂತರ ಆ ಸ್ಥಳವನ್ನು ಗೋಮೂತ್ರ ಸಗಣಿಯಿಂದ ಸಾರಿಸಿ ಶುದ್ಧೀಕರಿಸಲಾಗುತ್ತದೆ. ಇಂದು ಈ ಪ್ರಾಚೀನ ಪದ್ಧತಿಗಳನ್ನು ಅನುಸರಿಸುವುದಲ್ಲವಾದರೂ ಯಜ್ಞ ನೆರವೇರಿಸುವ ವ್ಯಕ್ತಿ ಗೋವಿನ ಉತ್ಪನ್ನಗಳಾದ ಹಾಲು - ಮೊಸರು - ತುಪ್ಪ - ಗೋಮೂತ್ರ - ಸಗಣಿಯನ್ನು ಬೆರೆಸಿ ತಯಾರಿಸಿದ ಪಂಚಗವ್ಯವನ್ನು ಸೇವಿಸಬೇಕಾಗುತ್ತದೆ. ಗೋಮೂತ್ರದಲ್ಲಿ ಗಂಗೆ ಇರುವುದರಿಂದ ಅದರ ಸೇವನೆಯಿಂದ ರೋಗ ನಿವಾರಣೆಯಾಗುತ್ತದೆ, ಸಗಣಿಯಿಂದ ಕಾಲರಾ-ಪ್ಲೇಗ್ ಮುಂತಾದ ಖಾಯಿಲೆಗಳು ವಾಸಿಯಾಗುತ್ತವೆ, ಯುದ್ಧ ಕಾಲದಲ್ಲಿ ಸಗಣಿ ಉಪಯೋಗಿಸುವ ಮನೆಗಳು ಬಾಂಬ್ ದಾಳಿಯಿಂದ ಸುರಕ್ಷಿತವಾಗಿರುತ್ತವೆ, ಇತ್ಯಾದಿ ಮಿಥ್ಯೆಗಳನ್ನು ಸೃಷ್ಟಿಸಲಾಗುತ್ತಿದೆ.

ಶ್ರೀ ಡಿ. ಎನ್. ಝಾ ಪ್ರಕಾರ ಗೋವು ಮತ್ತು ಮಂದಿರ ಭಾರತೀಯ ಪ್ರಜಾತಂತ್ರದ ಮುಖ್ಯ ಆಧಾರಸ್ತಂಭಗಳಂತೆ. ಸಂಘಪರಿವಾರದ ವಕ್ತಾರರಾದ ದೇವೇಂದ್ರ ಸ್ವರೂಪ, ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ''ಗೋವಿನ ವಿಷಯವನ್ನು ಸಂಘಪರಿವಾರವು ಜಿಹಾದಿ ಭಯೋತ್ಪಾದಕತೆಯ ವಿರುದ್ಧ ಅಸ್ತ್ರದಂತೆ ಬಳಸುತ್ತದೆ'' ಎನ್ನುವಷ್ಟು ಅಪಾಯಕಾರಿ ಮಾತನ್ನಾಡಿದ್ದಾರೆ. ವಿಪರ್ಯಾಸವೆಂದರೆ ಕಾಮಧೇನುವನ್ನು ದೇವರಂತೆ ಪೂಜಿಸುವವರು ತಿಪ್ಪೆಗಳಲ್ಲಿನ ಕಸಕಡ್ಡಿ ತಿನ್ನುತ್ತಲೇ ಬಾಳುವ, ಕೃಶವಾದ ದೇಹ ಹೊತ್ತು ಅಲೆಯುವ, ಗೋವುಗಳ ಬಗ್ಗೆ ಯಾವುದೇ ಕಾಳಜಿ ವಹಿಸುವುದಿಲ್ಲ. ಸಾಮಾನ್ಯವಾದ ನಿದರ್ಶನ ನೀಡಬೇಕೆಂದರೆ ಯಾವುದೇ ಊರಿನ ಹೊರ ಬಡಾವಣೆಗಳ ನಿಯಂತ್ರಣ ಮೇಲ್ಜಾತಿಯವರ ಕೈಯ್ಯಲ್ಲಿದ್ದ ಪಕ್ಷದಲ್ಲಿ ಆ ಬಡಾವಣೆಯ ಸೈಟು ಮನೆಗಳ ಮಾರಾಟದಲ್ಲಿ ಮೊದಲನೆಯ ಷರತ್ತು ಅಲ್ಲಿ ಮನೆ ಕಟ್ಟುವವರು, ವಾಸಿಸುವವರು, ಮನೆಯಲ್ಲಿ ಹಸು, ಎಮ್ಮೆ ಸಾಕಬಾರದು ಎಂದಿರುತ್ತದೆ! ಗೃಹಪ್ರವೇಶದ ಸಮಯದಲ್ಲಿ ಗೋವುಗಳನ್ನು ಮನೆಯೊಳಗೆ ಕರೆತಂದರೆ ತಮ್ಮ ಮನೆಯ ಮೊಸಾಯಿಕ್ ನೆಲ ಹಾಳಾಗುವುದೆಂಬ ಭೀತಿಯಿಂದ ಬೆಳ್ಳಿಯ ಹಸುವನ್ನು ಮನೆಯೊಳಗೆ ತಂದು ತೀಟೆ ತೀರಿಸಿಕೊಳ್ಳುವವರೂ ಉಂಟು. ಆದರೂ ಅವರಿಗೆ ಗೋವುಗಳ ಬಗ್ಗೆ ಭಕ್ತಿ, ಶ್ರದ್ಧೆ!

**ಗೋಹತ್ಯಾ ನಿಷೇಧ ರಾಜಕಾರಣ**

ವಿಶ್ವದಲ್ಲಿಯೇ ಅತಿ ಹೆಚ್ಚು ಹೈನುಗಳನ್ನು ಹೊಂದಿರುವ ಹೆಗ್ಗಳಿಕೆ ಭಾರತಕ್ಕೆ ಸಲ್ಲುತ್ತದೆ. ಅವುಗಳಲ್ಲಿ ಶೇ. ೨೫ರಷ್ಟು ಗೋವುಗಳಿವೆ. ಭಾರತದಲ್ಲಿನ ಹೈನುಗಳ ಒಟ್ಟು ಸಂಖ್ಯೆ ೨೦೪.೫೮ ದಶಲಕ್ಷ. ಅದರಲ್ಲಿ ಗೋವುಗಳ ಸಂಖ್ಯೆ ೬೪.೩೬ ದಶಲಕ್ಷ, ಎಮ್ಮೆಗಳ ಸಂಖ್ಯೆ ೮೪.೪ ದಶಲಕ್ಷ. ೧೯೯೯-೨೦೦೦ದಲ್ಲಿ ೧,೬೭,೨೯೧ ಮೆಟ್ರಿಕ್ ಟನ್‌ನಷ್ಟಿದ್ದ ಗೋಮಾಂಸದ ರಫ್ತು, ೨೦೦೨ರಲ್ಲಿ ೨,೪೩,೩೫೫ ಮೆಟ್ರಿಕ್ ಟನ್‌ಗಳಷ್ಟಾಗಿದೆ. ಅಂಕಿಅಂಶಗಳ ಪ್ರಕಾರ ಭಾರತದಿಂದ ರಫ್ತಾಗುವ ಮಾಂಸದಲ್ಲಿ ಎಮ್ಮೆಯ ಮಾಂಸದ ಪ್ರಮಾಣವೇ ಹೆಚ್ಚಾಗಿರುತ್ತದೆ. ಆದರೂ ಸಂಘ ಪರಿವಾರದ ರಕ್ಷಕರು ಗೋಹತ್ಯೆಯ ಬಗ್ಗೆ ಹುಯಿಲೆಬ್ಬಿಸುತ್ತಿರುತ್ತಾರೆ. ಈ ಗೋರಕ್ಷಕರಿಗೆ ಎಮ್ಮೆಗಳ ಬಗ್ಗೆ ಅಷ್ಟಾಗಿ ಪ್ರೇಮಭಕ್ತಿ ಇರುವುದಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ

ನಾ. ದಿವಾಕರ

ಭಾರತದಲ್ಲಿನ ಹೈನುಗಳ ಸಂಖ್ಯೆಗೆ ಹೋಲಿಸಿದರೆ ಅವುಗಳಿಗೆ ಲಭ್ಯವಿರುವ ಆಹಾರ ಶೇ. ೬೯ರಷ್ಟು ಮಾತ್ರ, ಹಾಗಾಗಿಯೇ ಹಲವಾರು ಹೈನುಗಳು ಬೀದಿಗಳಲ್ಲಿ ಕಸಕಡ್ಡಿ ತಿನ್ನುತ್ತಾ ಅಲೆಯುತ್ತಿರುತ್ತವೆ. ಬರ ಪರಿಸ್ಥಿತಿಯಲ್ಲಿ ಸಾವಿರಾರು ಹೈನುಗಳು ಆಹಾರವಿಲ್ಲದೆ ಸಾಯುತ್ತವೆ. ಈ ವರ್ಷವೇ ಭೂಪಾಲ್, ದೆಹಲಿ, ಗ್ವಾಲಿಯರ್ ಮುಂತಾದ ಪ್ರದೇಶಗಳಲ್ಲಿ ಸಾವಿರಾರು ಹೈನುಗಳು ಆಹಾರವಿಲ್ಲದೆ ಸತ್ತಿವೆ. ಆದರೆ ಸಂಘಪರಿವಾರದ ಗೋರಕ್ಷಕರಿಗೆ ಇವುಗಳ ಬಗ್ಗೆ ಅಷ್ಟಾಗಿ ಕಾಳಜಿ ಇಲ್ಲವೆನಿಸುತ್ತದೆ. ಗೋರಕ್ಷಣೆಗಿಂತಲೂ ಹೆಚ್ಚಾಗಿ ಆ ನೆಪದಲ್ಲಿ ಅಲ್ಪಸಂಖ್ಯಾತರ ಭಕ್ಷಣೆಯೇ ಸಂಘ ಪರಿವಾರದ ಗುರಿಯಾಗಿದೆ ಎಂದು ಹೇಳಬಹುದು.

ಈ ದೃಷ್ಟಿಯಿಂದ ನೋಡಿದಾಗ ಭಾಜಪ-ಸಂಘ ಪರಿವಾರದ ಗೋಹತ್ಯಾ ನಿಷೇಧ ಪ್ರಣಾಳಿಕೆ ಶುದ್ಧ ರಾಜಕೀಯ ಕುತಂತ್ರ ಎಂಬ ಅಂಶ ಸ್ಪಷ್ಟವಾಗುತ್ತದೆ. ೧೯೯೬ರಲ್ಲಿ ಪ್ರಥಮ ಬಾರಿಗೆ ಅಧಿಕಾರಕ್ಕೆ ಬಂದಾಗಿನಿಂದಲೂ ಭಾಜಪ ಈ ವಿಷಯವನ್ನು ಆಗಾಗ್ಗೆ ಪ್ರಸ್ತಾಪಿಸುತ್ತಲೇ ಇದೆ. ೧೯೯೪-೯೬ರಲ್ಲಿ ಭಾಜಪದ ಕೆ. ರಾ. ರಾಣಾ, ೧೯೯೯ರಲ್ಲಿ ಭಾಜಪದ ಆದಿತ್ಯನಾಥ್, ೨೦೦೦ದಲ್ಲಿ ಭಾಜಪದವರೇ ಆದ ಕೃಷ್ಣಂರಾಜು, ಅಹ್ಲುವಾಲಿಯ ಮತ್ತು ಪ್ರಹ್ಲಾದ್ ಪಟೇಲ್ ಗೋಹತ್ಯಾ ನಿಷೇಧ ಜಾರಿಗೆ ತರುವಂತೆ ಸಂಸತ್ತಿನಲ್ಲಿ ಖಾಸಗಿ ಸದಸ್ಯರ ಮಸೂದೆ ಮಂಡಿಸಿ ಅನುಮೋದನೆ ಪಡೆಯುವಲ್ಲಿ ವಿಫಲರಾಗಿದ್ದಾರೆ. ಆದರೆ ಈ ವಿಷಯದಲ್ಲಿ ಕಾಂಗ್ರೆಸ್ ಮತ್ತಿತರ ಪಕ್ಷಗಳ ಸದಸ್ಯರು ಸ್ಪಷ್ಟ ನಿಲುವು ತಾಳುವುದಿಲ್ಲ. ಮಧ್ಯಪ್ರದೇಶ ಮುಖ್ಯಮಂತ್ರಿ ದಿಗ್ವಿಜಯ್ ಸಿಂಗ್ ರಾಷ್ಟ್ರಾದ್ಯಂತ ಗೋಹತ್ಯೆ ನಿಷೇಧಿಸಲು ಆಗ್ರಹಿಸಿರುವುದು ಒಂದು ನಿದರ್ಶನವಷ್ಟೆ.

ಹಿಂದೂಗಳು ಗೋಮಾಂಸ ತಿನ್ನುವುದಿಲ್ಲ, ಗೋಹತ್ಯೆ ಮಾಡುವುದಿಲ್ಲ, ಎಂಬ ಸಂಘ ಪರಿವಾರದ ಪ್ರತಿಪಾದನೆ ಅರ್ಥವಿಲ್ಲದ್ದು. ದಲಿತರು ಹಿಂದೂಗಳಲ್ಲವೆಂದು ಸಂಘ ಪರಿವಾರ ಒಪ್ಪಿಕೊಂಡಲ್ಲಿ ಅವರ ಈ ಪ್ರತಿಪಾದನೆಯನ್ನು ಒಪ್ಪಬಹುದು. ಏಕೆಂದರೆ ಭಾರತದಲ್ಲಿ ಮುಸ್ಲಿಂ-ಕ್ರೈಸ್ತರು ಮಾತ್ರವಲ್ಲದೆ ದಕ್ಷಿಣ ಭಾರತದಲ್ಲಿ ದಲಿತರೂ ಗೋಮಾಂಸ ತಿನ್ನುತ್ತಾರೆ. ಗೋವು ಹಿಂದೂಗಳಿಗೆ ಪೂಜ್ಯವಾದ್ದರಿಂದ ಮುಸ್ಲಿಂ-ಕ್ರೈಸ್ತರು ಗೋಮಾಂಸ ತ್ಯಜಿಸಬೇಕೆಂದು ಸಂಘ ಪರಿವಾರ ಒತ್ತಾಯಿಸುತ್ತದೆ. ಸಂಘ ಪರಿವಾರದ ಈ ಆಗ್ರಹ ಮುಖ್ಯವಾಗಿ ದಲಿತರನ್ನು ಹಿಂದೂ ಸಮಾಜದಿಂದ, ಮುಸ್ಲಿಂ-ಕ್ರೈಸ್ತರನ್ನು ಭಾರತೀಯ ಸಮಾಜದಿಂದ ದೂರವಿರಿಸುವುದೇ ಆಗಿದೆ. ವಾಸ್ತವಾಂಶವೆಂದರೆ ಕೌ ಬೆಲ್ಟ್ ಎಂದು ಹೇಳಲಾಗುವ ಉತ್ತರ ಭಾರತದ ಕೆಲವು ರಾಜ್ಯಗಳನ್ನು ಹೊರತುಪಡಿಸಿದರೆ, ಭಾರತದಲ್ಲಿ, ಅದರಲ್ಲೂ ದಕ್ಷಿಣ ಭಾರತದಲ್ಲಿ, ಗೋಮಾಂಸ ದಲಿತರ ಆಹಾರವಾಗಿದೆ. ಉತ್ತರ ಭಾರತದಲ್ಲಿ ಮೇಲ್ಜಾತಿಯವರಿಗೆ ಹೆದರಿಕೊಂಡು ದಲಿತರು ಗೋಹತ್ಯೆ ಮಾಡಲು ಹಿಂಜರಿಯುತ್ತಾರೆ. ಈಶಾನ್ಯ ರಾಜ್ಯಗಳಲ್ಲಿ, ವಿಶಿಷ್ಟವಾಗಿ ಕ್ರೈಸ್ತ ಸಮುದಾಯದಲ್ಲಿ, ಗೋಮಾಂಸ ದಿನನಿತ್ಯದ ಆಹಾರವಾಗಿದೆ. ಕಾಶ್ಮೀರದಲ್ಲಿ ಮುಸ್ಲಿಮರೇ ಬಹುಸಂಖ್ಯಾತರಾದರೂ ಅಲ್ಲಿ ಗೋಮಾಂಸವನ್ನು ಯಾರೂ ತಿನ್ನುವುದಿಲ್ಲ. ಹಾಗಾಗಿ ಗೋಮಾಂಸವನ್ನು ಸೇವಿಸುವುದು ಒಂದು ಆಹಾರ ಪದ್ಧತಿಯಾಗಿದೆಯೇ ಹೊರತು ಗೋವುಗಳ ಬಗ್ಗೆ ದ್ವೇಷ ಅಥವಾ ಪೂಜ್ಯ ಭಾವನೆ ಎಂಬುದು ಅಪ್ರಸ್ತುತವಾಗುತ್ತದೆ.

ಐತಿಹಾಸಿಕ-ಪೌರಾಣಿಕ ದೃಷ್ಟಿಯಿಂದ ನೋಡಿದರೂ ಗೋಮಾಂಸ ಭಾರತೀಯ ಸಮಾಜದಲ್ಲಿ ನಿಷಿದ್ಧವಾಗಿ ಇರಲಿಲ್ಲ. ಪುರಾಣಗಳಲ್ಲಿ, ವೇದಗಳ ಕಾಲದಲ್ಲಿ, ಋಷಿ ಮುನಿಗಳು ಯಜ್ಞಯಾಗಾದಿಗಳನ್ನು ನಡೆಸಲು ದಕ್ಷಿಣೆಯ ರೂಪದಲ್ಲಿ ಗೋವುಗಳನ್ನೇ ಪಡೆಯುತ್ತಿದ್ದುದು ಕಂಡು ಬರುತ್ತದೆ. ಬೌದ್ಧ ಧರ್ಮವು ಭಾರತದಲ್ಲಿ ಬೇರೂರುವ ಮುನ್ನ ಬ್ರಾಹ್ಮಣರು ಗೋಮಾಂಸ ಸೇವಿಸುತ್ತಿದ್ದರೆಂದು ಅನೇಕ ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಬೌದ್ಧ ಧರ್ಮ ಹೆಚ್ಚು ಪ್ರಬಲವಾಗಿ ವೈದಿಕ ಧರ್ಮಕ್ಕೆ ಹಿನ್ನಡೆಯುಂಟಾದ ಸಮಯದಲ್ಲಿ ಗೋಮಾಂಸ ಸೇವನೆಯು ನಿಂತಿರಬಹುದು. ಆದಾಗ್ಯೂ ಹಿಂದೂ ಸಮಾಜದಲ್ಲಿ ಕನಿಷ್ಠ ಶೇ. ೨೫ರಷ್ಟು ಜನ ಗೋಮಾಂಸ ಸೇವಿಸುತ್ತಾರೆ. ಈ ಸತ್ಯಾಂಶಗಳನ್ನು ಮರೆಮಾಚಿ ಸಾಮಾನ್ಯ ಜನತೆಯನ್ನು ಭಾವುಕರನ್ನಾಗಿಸುವುದು ಸರಿಯಲ್ಲ.

ಹೈನುಗಾರಿಕೆಯಲ್ಲಿ, ಗೋಪಾಲನೆಯಲ್ಲಿ, ಹಾಲು ಉತ್ಪಾದಿಸುವವರಲ್ಲಿ ಹಿಂದುಗಳೇ ಬಹುಸಂಖ್ಯಾತರಾಗಿದ್ದಾರೆ. ಗೋಮಾಂಸ ಹೆಚ್ಚಾಗಿ ರಫ್ತಾಗುತ್ತಿದ್ದಲ್ಲಿ, ಮುಸ್ಲಿಮರು ಕ್ರೈಸ್ತರು ಗೋಹತ್ಯೆ ಮಾಡುತ್ತಿದ್ದಲ್ಲಿ, ಆ ಗೋವುಗಳನ್ನು ಸರಬರಾಜು ಮಾಡುವವರು ಹಿಂದೂಗಳೇ ಆಗಿರಬೇಕಲ್ಲವೇ? ಗೋವುಗಳ ಬಗ್ಗೆ ಅಷ್ಟು ಪೂಜ್ಯ ಭಾವನೆ ಇದ್ದಲ್ಲಿ ಕೃಶವಾದ, ಹಾಲು ನೀಡದ ಮುದಿ ಗೋವುಗಳನ್ನು ಮಾರದೆ ಸಾಯುವವರೆಗೂ ಸಾಕಬಹುದಲ್ಲವೇ? ಗೋಮಾಂಸದ ರಫ್ತು ವ್ಯಾಪಾರದಲ್ಲಿ ಭಾರತ ವಿಶ್ವದಲ್ಲೆ ಪ್ರಥಮ ಸ್ಥಾನ ಹೊಂದಿದೆ. ದೇಶದಲ್ಲಿ ಗೋಮಾಂಸ ರಫ್ತು ಮಾಡುವ ಮೇಲ್ಪಂಕ್ತಿಯ ೫ ಉದ್ಯಮಿಗಳಲ್ಲಿ ಮೂವರು ಹಿಂದೂಗಳೇ ಇದ್ದಾರೆ. ಈ ಉದ್ಯಮಿಗಳು ಹೇಳುವಂತೆ ರಫ್ತಾಗುವ ಉತ್ಪನ್ನದಲ್ಲಿ ಗೋಮಾಂಸಕ್ಕಿಂತಲೂ ಎಮ್ಮೆ ಎತ್ತುಗಳ ಮಾಂಸವೇ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಗೋಮಾಂಸದ ಉತ್ಪನ್ನಗಳಿಂದ (ಬೊವೈನ್ ಉತ್ಪನ್ನಗಳಿಂದ) ಅತಿ ಹೆಚ್ಚು ಲಾಭ ಪಡೆಯುತ್ತಿರುವುದು ಹಿಂದುಗಳೇ ಎಂದು ಮುಂಬೈನ ಪ್ರಾಣಿದಯಾ ಸಂಘದ ವಕ್ತಾರರು ಹೇಳುತ್ತಾರೆ.

೧೯೬೬ರಲ್ಲಿ ಈ ವಿವಾದಕ್ಕೆ ಸಂಬಂಧಿಸಿದಂತೆ ಸಂಸತ್ತನ್ನು ಘೇರಾವ್ ಮಾಡಿದಾಗ ೮ ಜನ ಮರಣ ಹೊಂದಿದ್ದರು. ಆಗ ಸರ್ಕಾರ ಈ ವಿವಾದ ಪರಿಹರಿಸಲು ಗುಲ್ಜಾರಿಲಾಲ್ ನಂದಾ ಸಮಿತಿ ನೇಮಿಸಿತು. ೧೯೭೯ರಲ್ಲಿ ಲೋಕಸಭೆಯಲ್ಲಿ ಗೋಹತ್ಯೆ ನಿಷೇಧಿಸುವ ನಿರ್ಣಯ ಅಂಗೀಕಾರವಾಗಿತ್ತು. ನಂತರ ಜನತಾಪಕ್ಷದ ಸರ್ಕಾರ ಈ ಮಸೂದೆಯನ್ನು ಮಂಡಿಸಿತ್ತು. ೧೯೮೨ರಲ್ಲಿ ಪ್ರಧಾನಿ ಇಂದಿರಾ ಗಾಂಧಿಯವರು ಗೋಹತ್ಯೆ ನಿಷೇಧಿಸುವ ಕಾನೂನು ಜಾರಿಗೊಳಿಸಲು ಎಲ್ಲಾ ರಾಜ್ಯ ಸರ್ಕಾರಗಳಿಗೂ ಮನವಿ ಮಾಡಿದ್ದರು. ೧೯೮೫ರಲ್ಲಿ ಎಂ. ಕೆ. ಪಟೇಲ್ ರವರ ಖಾಸಗಿ ಮಸೂದೆ ಸಂಸತ್ತಿನಲ್ಲಿ ಬೆಂಬಲವಿಲ್ಲದೆ ವಿಫಲವಾಗಿತ್ತು. ೧೯೯೦ರಲ್ಲಿ ಭಾಜಪದ ಜಿ. ಎಂ. ಲೋಧಾರವರ ಮಸೂದೆ ವಸಂತ ಸಾಠೆ ಮುಂತಾದ ಕಾಂಗ್ರೆಸ್ ಸದಸ್ಯರ ಬೆಂಬಲವಿದ್ದೂ ಸೋಲನ್ನು ಅನುಭವಿಸಬೇಕಾಯಿತು. ಹೀಗೆ ಗೋಹತ್ಯಾ ವಿವಾದಕ್ಕೆ ರಾಜಕೀಯ ಲೇಪನ ನೀಡುವ ಕಾರ್ಯ ಕಳೆದ ೫೦ ವರ್ಷಗಳಿಂದಲೂ ನಡೆಯುತ್ತಲೇ ಬಂದಿದೆ. ಈ ವಿಷಯದಲ್ಲಿ ಕಾಂಗ್ರೆಸ್ ಪಕ್ಷವೂ ಕೆಲವೊಮ್ಮೆ ಭಾಜಪದೊಡನೆ ಕೈಗೂಡಿಸುವುದುಂಟು. ತಾವೇ ನಿಜವಾದ ಗೋರಕ್ಷಕರು,

## ಡಾ|| ಎ. ಸುಬ್ಬರಾವ್ ಶ್ರದ್ಧಾಂಜಲಿ



**ಕಾ**ಸರಗೋಡಿನ ಕನ್ನಡಿಗ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿದ್ದುಕೊಂಡು, ಕೇರಳದ ನಾಯನಾರ್ ಸಂಪುಟದಲ್ಲಿ ನೀರಾವರಿ ಖಾತೆಯ ಮಂತ್ರಿಯಾಗಿದ್ದರು. ೧೯೫೪-೬೪ರಲ್ಲಿ ರಾಜ್ಯಸಭಾ ಸದಸ್ಯರಾಗಿದ್ದು, ನಂಬೂದಿರಿಪಾಡರ ಮಂತ್ರಿಮಂಡಲವನ್ನು ಕೇಂದ್ರ ಸರಕಾರ ವಿಸರ್ಜಿಸಿದಾಗ ನೆಹರೂ ವಿರುದ್ಧ ಗುಡುಗಿದ ಧೀಮಂತ ವ್ಯಕ್ತಿ. ವೈದ್ಯರಾಗಿದ್ದ ಸುಬ್ಬರಾಯರು ೧೯೪೨ರ ಸ್ವಾತಂತ್ರ್ಯ ಚಳುವಳಿಯಲ್ಲಿ ವಿದ್ಯಾರ್ಥಿ ದೆಶೆಯಲ್ಲೇ ಧುಮುಕಿ, ಆಲಿಪುರದ ಜೈಲಿನಲ್ಲಿ, ಮುಂದೊಮ್ಮೆ ಬಳ್ಳಾರಿ ಜೈಲಿನಲ್ಲಿ ಸೆರೆಮನೆ ವಾಸ ಅನುಭವಿಸಿದರು. ವೃತ್ತಿಯ ಸಂದರ್ಭದಲ್ಲಿ ಬಡಜನರ ಕಷ್ಟಕಾರ್ಪಣ್ಯಗಳ ಪ್ರತ್ಯಕ್ಷ ಅನುಭವ ಪಡೆದು, ದಯಾಪೂರ್ಣ ವೈದ್ಯರಾಗಿದ್ದವರಿಗೆ ಅಮರಾವತಿಯಲ್ಲಿ ಒಕ್ಕಲೆದ್ದವರ ಪರ ನಿರಾಹಾರ ಸತ್ಯಾಗ್ರಹ ನಡೆಸಿದ್ದು ಪ್ರಥಮ ಜನಪರ ಹೋರಾಟದ ಅನುಭವ. ಕಾಸರಗೋಡಿನ ಕಿಸಾನ್ ಸಭಾ ನೇತೃತ್ವದ ಅನೇಕ ಹೋರಾಟಗಳಲ್ಲಿ ಭಾಗವಹಿಸಿ, ಸೆರೆಮನೆ ವಾಸವನ್ನು ಅನುಭವಿಸಿದ್ದರು. ಕಾಸರಗೋಡು, ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಚಳುವಳಿ, ಅನೇಕ ಕೃಷಿಕರ ಹೋರಾಟ, ಬೀಡಿ ಕೆಲಸಗಾರರ ಹೋರಾಟ ಹೀಗೆ ಹಲವು ರೀತಿಯಲ್ಲಿ ಸಮುದಾಯದ ಒಳಿತಿಗೆ ಶ್ರಮಿಸಿದ ಜನಾನುರಾಗಿಯಾಗಿದ್ದ ಸುಬ್ಬರಾಯರು ಮತ್ತೆ ಮತ್ತೆ ಶಾಸನಸಭೆಗೆ ಆರಿಸಿ ಬಂದಿದ್ದು ಆಶ್ಚರ್ಯವೇನಲ್ಲ. ಸೈದ್ಧಾಂತಿಕ ಬದ್ಧತೆ, ಪ್ರಾಮಾಣಿಕತೆ, ನಿಷ್ಕಳಂಕ – ಪಾರದರ್ಶಕ ಸಾರ್ವಜನಿಕ ಜೀವನವನ್ನು ನಡೆಸಿದ ಶ್ರೀಯುತರ ತಮ್ಮ ೮೪ನೇ ವಯಸ್ಸಿನಲ್ಲಿ ಸೆಪ್ಟೆಂಬರ್ ೧೪ರಂದು ನಿಧನರಾದರು. ''ಹೊಸತು'' ಈ ಹಿರಿಯ ಚೇತನಕ್ಕೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.




# ಯುದ್ಧೋನ್ಮಾದ

ಬಲವಿದ್ದವನು ಬದುಕುತ್ತಾನೆ ಎಂಬುದು ಹಳೆಯ ಮಾತು. ಬಲವಿದ್ದವನು ಸಾಯಿಸುತ್ತಾನೆ. ಸರ್ವಾಧಿಕಾರ ನಿಮ್ಮನ್ನು ಮೇಲ್ಮಟ್ಟಕ್ಕೆ ಕೊಂಡೊಯ್ಯುವುದರ ಜೊತೆಗೇ ನಿಮ್ಮ ನೈತಿಕ ಅರಿವನ್ನು ಪಾತಾಳಕ್ಕೆ ತಳ್ಳುತ್ತದೆ. ಎತ್ತರದಲ್ಲಿ ಕುಳಿತು ಇಬ್ಬರು ಪಾಟೀ ಸವಾಲು ಹಾಕಿ ತೊಡೆ ತಟ್ಟಿ ನಿಂತರೆ, ಕೆಳಗೆ ಏನೂ ಅರಿಯದ ಮುಗ್ಧರು ಹೊಡೆದಾಡಿ ಸಾಯುತ್ತಾರೆ.

ದೂರದವರಿಗೆ ಸತ್ತವರದ್ದು ಬರೀ ಸಂಖ್ಯೆ. ಸಾಯಿಸಿದವರಿಗೆ ಆ ಸಂಖ್ಯೆ ಹೆಚ್ಚಾದಷ್ಟೂ ಹೆಮ್ಮೆ, ತನ್ನ 'ಸಾಯಿಸುವ ಪೌರುಷ' ಹೆಚ್ಚೆಂದು. ಆದರೆ ಸತ್ತ ಒಬ್ಬೊಬ್ಬರ ಮನೆಯ ದುಃಖ, ಜೀವನ ಮೇಲಿನವರಿಗೆ ಅರ್ಥವಾಗದು. ಅಥವಾ ಅರ್ಥವಾದರೂ ಅವರು ಬೇಕೆಂದೇ ಅದನ್ನು ಮರೆಯುತ್ತಾರೆ. ಉದ್ದೇಶಪೂರ್ವಕ, ಜಾಣ ಮರೆವು.

'ಮಾರಣಹೋಮ' ಮತ್ತು 'ಹುತಾತ್ಮ' ಎಂಬವಕ್ಕೆ ಮೂಲದಲ್ಲಿ ಅಂಥ ವ್ಯತ್ಯಾಸವಿಲ್ಲ. ಎರಡೂ ಸಾವೇ. ಬೇಕಾದರೆ ರಣಹದ್ದುಗಳನ್ನು ಕೇಳಿ ನೋಡಿ. ನೀವು ಗೆದ್ದು ನಿಮ್ಮ ಬಾವುಟವ ಆ ನೆಲದಲ್ಲಿ ಹಾರಿಸಿದರೆ, ನೀವೂ ಧನ್ಯ ಆ ನೆಲವೂ ಧನ್ಯ. ಇನ್ನು ಆ ನೆಲದಲ್ಲಿ ಮರವಾಗಲೀ, ಗಿಡವಾಗಲೀ, ಹೂಗಳಾಗಲೀ ಹುಟ್ಟುವುದಿಲ್ಲ. ನಿಮ್ಮ ಮನೆಯಲ್ಲೊಂದು ಗರ್ಭದಲ್ಲಿ ಜೀವವೊಂದು ಮೊಳಕೆಯೊಡೆಯುವುದಿಲ್ಲ.

ಎಂದೂ ಮುಖ ಪರಿಚಯವಿರದ ಒಬ್ಬ ನಿಮ್ಮ ಮುಂದೆ ಗನ್ ಹಿಡಿದು ನಿಂತಿದ್ದಾನೆ. ಅಂಥದೇ ಅಥವಾ ಅದಕ್ಕಿಂತ ಶಕ್ತಿಶಾಲಿ ಗನ್ನೊಂದು ನಿಮ್ಮ ಕೈಯಲ್ಲೂ ಇದೆ. ನೀವಿಬ್ಬರೂ ಒಬ್ಬರಿಗೊಬ್ಬರು ಗುರಿ ಇಟ್ಟು ದಿಟ್ಟಿಸಿ ನೋಡಿ, ನಿಮ್ಮ ದ್ವೇಷಕ್ಕೆ ಯಾವುದಾದರೂ ಕಾರಣವಿದೆಯೇ ಎಂದು. ಪರಿಚಯವಿಲ್ಲದ, ಗೆಳೆತನವಿಲ್ಲದ, ಕನಿಷ್ಠ ದ್ವೇಷವೂ ಇಲ್ಲದ ಆ ವ್ಯಕ್ತಿಯನ್ನು ನೀವು ಸಾಯಿಸಬೇಕಿದೆ. ಇಲ್ಲದಿದ್ದರೆ ನೀವು ಸಾಯುತ್ತೀರಿ. ಅಪ್ಪಿತಪ್ಪಿಯೂ ಅವನ ಕಣ್ಣುಗಳನ್ನು ನೋಡಬೇಡಿ. ನಿಮಗೆ ಕರುಣೆ ಬಂದು ಅವನನ್ನು ಸಾಯಿಸಲಾರದೇ ಹೋದೀತು. ಅವನಿಗೊಬ್ಬ ತಾಯಿ, ಹೆಂಡತಿ ಅಥವಾ ಮಗು ಇರುವುದು ಅಕಸ್ಮಾತ್ ನಿಮ್ಮ ತಲೆಗೆ ಬಂದೀತು. ಸಹಜವಾಗಿಯೇ ನಿಮ್ಮ ಮನೆಯ ಬಂಧುಗಳೂ ನೆನಪಿಗೆ ಬಂದಾರು! ಬಂದೂಕಿನ ನಳಿಕೆಗಳನ್ನು ಸಿದ್ಧ ಮಾಡಿಕೊಳ್ಳಿ. ಯಾರ ಅದೃಷ್ಟ ಚೆನ್ನಾಗಿದೆ ನೋಡೇಬಿಡುವ. ಇಬ್ಬರೂ ಸಾಯುವ ಸಾಧ್ಯತೆಗಳೂ ಇಲ್ಲದಿಲ್ಲ. ಗುಂಡುಗಳಿಗೆ ಅಂಥ ಕರುಣೆ ಇರಲಿಕ್ಕಿಲ್ಲ.

ಈಗ ಪರಿಸ್ಥಿತಿ ಇಷ್ಟೊಂದು ಸಂಕೀರ್ಣವಾಗಿಲ್ಲ. ವಿಜ್ಞಾನದ ದೆಸೆಯಿಂದ ಜೆಟ್ ವಿಮಾನಗಳು, ಹೆಲಿಕಾಪ್ಟರುಗಳು ಬಾಂಬ್‌ಗಳನ್ನು ಬಿಸಾಕುತ್ತವೆ. ಕೆಳಗಿನ ಜನ ಇರುವೆಗಳಂತೆ, ಅವರ ಮನೆಗಳು ಅವುಗಳ ಗೂಡುಗಳಂತೆ ಕಾಣಿಸುತ್ತವೆ. ಅನವಶ್ಯಕ ಸೆಂಟಿಮೆಂಟ್‌ಗೆ ಅವಕಾಶವಿಲ್ಲ. ಎಷ್ಟು ಇರುವೆಗಳನ್ನು ಕಾರಣವಿಲ್ಲದೇ, ಅರಿವೂ ಇಲ್ಲದೆ ಸಾಯಿಸುತ್ತಿಲ್ಲವೇ?! ಅದನ್ನೇ ಬೇಕೆಂದೇ ಮಾಡಹೊರಟರೆ ಇರುವೆಗಳ ಕಣ್ಣೀರು ಅಥವಾ ಭಯ ಮೇಲೆ 'ಹಾರುತ್ತಿರುವ' ನಿಮಗೆ ಕಾಣಿಸಲಿಕ್ಕಿಲ್ಲ. ಇದೇ ವಾಹನಗಳಲ್ಲಿ ನೀವು ನಿಮ್ಮ ದೇಶದ ಜನಕ್ಕೆ ಬರಗಾಲ, ಪ್ರವಾಹದ ಸಮಯದಲ್ಲಿ ಆಹಾರದ ಚೀಲಗಳನ್ನು ಎಸೆಯುತ್ತಿದ್ದುದನ್ನು ನೀವು ಬೇಕೆಂದೇ ಮರೆತಿದ್ದೀರಿ. ಅದೇ ಕೈಗಳಲ್ಲಿ ಈಗ ಬಾಂಬ್‌ಗಳನ್ನು ಎಸೆಯುತ್ತಿದ್ದೀರಿ.

ಕ್ರಿಕೆಟ್ ಪಂದ್ಯದ ನೇರಪ್ರಸಾರ ಮತ್ತು ಯುದ್ಧದ ನೇರ ಪ್ರಸಾರವನ್ನು ನೀವು ಜೊತೆ ಜೊತೆಗೇ ನೋಡುತ್ತಿರುತ್ತೀರಿ. ನಿಮ್ಮ ನೆಚ್ಚಿನ ನಟರು ಅಥವಾ ಆಟಗಾರರು ನೀವು ಏನು ತಿನ್ನಬೇಕು, ಏನು ಕುಡಿಯಬೇಕು ಎಂದು ಫರ್ಮಾನು ನೀಡುತ್ತಿದ್ದಾರೆ. ನಿಮಗಾಗಿ ಯುದ್ಧವನ್ನು ತೋರಿಸುತ್ತಿರುವ ಚಾನಲ್‌ಗಳಲ್ಲಿ ಸತ್ತವರ - ಗಾಯಗೊಂಡವರ, ಸಾಯಿಸಿದವರ - ಗಾಯಗೊಳಿಸಿದವರ ಮುಖಗಳು ಕಾಣುತ್ತವೆ. ತಂಪು ಪಾನೀಯ ಕುಡಿಯುವ ಬಯಕೆ ನಿಮಗೆ ಒತ್ತರಿಸಿ ಬಂದು, ಕೈ ಕಾಲುಗಳಿಗೆ ಹೊಸ ಬ್ಯಾಂಡೇಜು ಸುತ್ತಿಸಿಕೊಂಡು ಅಳಿದುಳಿದ ಅಂಗಗಳಲ್ಲೇ ದೈನ್ಯವಾಗಿ ಅಳುತ್ತಿರುವ ಮೂರು ವರ್ಷದ ಮಗು ನಿಮ್ಮ ಕಣ್ಣಲ್ಲಿ ನೀರು ತರಿಸದಿದ್ದರೆ, ನಮಗೆ ನಿಮ್ಮ ಬಳಿ ಹೆಚ್ಚು ಹೊತ್ತು ನಿಲ್ಲಲು ಹೆದರಿಕೆಯಾಗುತ್ತದೆ.

**ನವೀನ್ ಹಳೇಮನೆ**
ಪ್ರಾಂಶುಪಾಲರು, ಸಿಸ್ಟಲ್ ಕಂಪ್ಯೂಟರ್ ಎಜುಕೇಶನ್, ಸಿ. ಎನ್. ಹಳ್ಳಿ, ತುಮಕೂರು-೫೭೨ ೨೧೮

---

ಹಿಂದೂಗಳ ಪ್ರತಿಪಾದಕರೆಂಬಂತೆ ಕಾಂಗ್ರೆಸ್ ಪಕ್ಷ ನರ್ತಿಸುವುದು ಸ್ಪಷ್ಟವಾಗಿ ಗೋಚರಿಸುತ್ತಿದೆ. ಎಡಪಕ್ಷಗಳನ್ನು ಹೊರತುಪಡಿಸಿ ಯಾವುದೇ ಇತರ ಪಕ್ಷಗಳೂ ಗೋಹತ್ಯಾ ನಿಷೇಧವನ್ನು ವಿರೋಧಿಸಿಲ್ಲ. ಭಾಜಪ ಶಿವಸೇನಾ ನಿಷೇಧದ ಪರವಾಗಿ ವಾದಿಸಿದರೆ, ಕಾಂಗ್ರೆಸ್ ಮತ್ತಿತರ ಪಕ್ಷಗಳು ಯಾವುದೇ ಸ್ಪಷ್ಟ ನಿಲುವು ತಾಳದೆ ರಾಜಕೀಯ ನಡೆಸುತ್ತಿವೆ. ಮಾಜಿ ಸಮಾಜವಾದಿಗಳಿಗೂ ಸಹ ಈ ವಿವಾದ ಒಂದು ನುಂಗಲಾರದ ತುತ್ತಾಗಿತ್ತು. ೧೯೬೬ರಲ್ಲಿ ಜಯಪ್ರಕಾಶ ನಾರಾಯಣ್‌ರವರು ಪ್ರಧಾನಿ ಇಂದಿರಾ ಗಾಂಧಿಯವರಿಗೆ ಬರೆದ ಪತ್ರದಲ್ಲಿ ''ಹಿಂದೂಗಳೇ ಬಹು ಸಂಖ್ಯಾತರಾಗಿರುವ ಈ ದೇಶದಲ್ಲಿ, ಸರಿಯೋ ಇಲ್ಲವೋ, ಗೋವುಗಳ ಬಗ್ಗೆ, ಗೋಹತ್ಯೆಯ ಬಗ್ಗೆ, ಭಾವನಾತ್ಮಕ ಸಂಬಂಧ ಇರುವಾಗ ಕಾನೂನುರೀತ್ಯಾ ನಿಷೇಧ ಏಕೆ ಹೇರಬಾರದು'' ಎಂದು ಪ್ರಶ್ನಿಸುತ್ತಾರೆ. ಉತ್ತರ ಭಾರತದ ರಾಜಕಾರಣದಲ್ಲಿ ಈ ವಿವಾದ ಎಷ್ಟು ಪರಿಣಾಮಕಾರಿಯಾಗಿರುತ್ತದೆ ಎಂದು ನಿರೂಪಿಸಲು ಈ ನಿದರ್ಶನವೊಂದೇ ಸಾಕು.

ಸಂವಿಧಾನದ ನಿರ್ದೇಶಕ ತತ್ವಗಳಲ್ಲಿ ಗೋಹತ್ಯಾ ನಿಷೇಧ ಕಾಯಿದೆ ಜಾರಿಗೊಳಿಸುವುದು ರಾಜ್ಯ ಸರ್ಕಾರಗಳ ಆದ್ಯತೆ ಎಂದು ಹೇಳಲಾಗಿದ್ದರೂ ಈ ವಿಷಯದಲ್ಲಿ ನಿರ್ದಿಷ್ಟವಾದ ಕಾನೂನು ಕಂಡುಬರುವುದಿಲ್ಲ. ಪಶ್ಚಿಮ ಬಂಗಾಳ, ಕೇರಳ, ಈಶಾನ್ಯ ರಾಜ್ಯಗಳಲ್ಲಿ ಯಾವುದೇ ನಿಷೇಧ ಇಲ್ಲವಾದರೆ ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಗೋಹತ್ಯೆ ಕಾನೂನುಬಾಹಿರವಾಗಿದೆ. ಭಾರತದಂತಹ ವೈವಿಧ್ಯಮಯ ಸಂಸ್ಕೃತಿಗಳ ದೇಶದಲ್ಲಿ ಗೋಹತ್ಯೆ ನಿಷೇಧ ಕಾನೂನು ಅನುಷ್ಠಾನಗೊಳಿಸುವುದು ಸುಲಭಸಾಧ್ಯವಲ್ಲ. ಪ್ರತಿಯೊಂದು ಪ್ರದೇಶದಲ್ಲೂ ಪರಿಸ್ಥಿತಿ ಭಿನ್ನವಾಗಿದ್ದು ಜನರ ಆಹಾರ ಪದ್ಧತಿಗಳು ವಿಭಿನ್ನವಾಗಿರುತ್ತವೆ. ಆದರೂ ಈ ವಿವಾದವನ್ನು ಆಗಾಗ್ಗೆ ಸೃಷ್ಟಿಸಿ, ಗಲಭೆ ಉಂಟುಮಾಡುತ್ತಿರುತ್ತಾರೆ. ಆರ್ಯ ಸಮಾಜದ ಸ್ಥಾಪನೆಯ ನಂತರ ಗೋವು ಕೇಂದ್ರಿತ ರಾಜಕೀಯ ಹೊಸ ಸ್ವರೂಪ ಪಡೆಯಿತೆಂದು ಹೇಳಬಹುದು. ೧೮೮೨ರಲ್ಲಿ ಆರ್ಯ ಸಮಾಜ ಸ್ಥಾಪಿಸಿದ ಗೋರಕ್ಷಣಾ ಸಮಿತಿಯ ನಂತರ ಅದೇ ಮಾದರಿಯ ನೂರಾರು ಸಮಿತಿಗಳು ಉದ್ಭವಿಸಿದವು. ೧೮೯೩ರಲ್ಲಿ ಬಕ್ರಿದ್ ಹಬ್ಬದ ಸಮಯದಲ್ಲಿ ಉತ್ತರ ಪ್ರದೇಶದಲ್ಲಿ ಹಿಂದೂ ಉಗ್ರವಾದಿಗಳು, ಗೋಹತ್ಯೆ ಮಾಡಿದರೆಂಬ ಆರೋಪದ ಮೇಲೆ ಅನೇಕ ಮುಸ್ಲಿಂ ಮೊಹಲ್ಲಾಗಳ ಮೇಲೆ ಆಕ್ರಮಣ ನಡೆಸಿದಾಗ ಅಪಾರ ಸಾವುನೋವುಗಳುಂಟಾಗಿತ್ತು. ೧೯೧೭ರಲ್ಲಿ ಗೋವು ದಂಗೆ ಎಂದೇ ಪ್ರಸಿದ್ಧವಾದ ದಂಗೆಯಲ್ಲಿ ಉತ್ತರ ಪ್ರದೇಶ, ಬಿಹಾರ ರಾಜ್ಯಗಳಲ್ಲಿ ೩೦ ಸಾವಿರಕ್ಕೂ ಹೆಚ್ಚು ಹಿಂದೂಗಳು ಮುಸ್ಲಿಮರ ವಿರುದ್ಧ ಆಕ್ರಮಣ ಮಾಡಿದ್ದರು. ಬ್ರಿಟಿಷರ ದಾಖಲೆಗಳ ಪ್ರಕಾರ ಈ ದಂಗೆಗಳಲ್ಲಿ ಭಾಗವಹಿಸಿದ್ದವರಲ್ಲಿ ಬಹುಪಾಲು ರಜಪೂತ-ಭೂಮಿಹಾರ್-ಬ್ರಾಹ್ಮಣರೇ ಇದ್ದರೆಂದು ಹೇಳಲಾಗುತ್ತದೆ. ಈ ದಂಗೆಗಳ ನಂತರ ಅನೇಕ ಮುಸಲ್ಮಾನರು ಜೀವ ಉಳಿಸಿಕೊಳ್ಳಲು ಗೋಹತ್ಯೆ ಮಾಡುವುದಿಲ್ಲವೆಂದು ಪ್ರಮಾಣಪತ್ರ ಬರೆದು ಕೊಡಬೇಕಾಯಿತು, ಎಂದು ಅಂದಿನ ಗೋರಖ್‌ಪುರ್‌ನ ಕಮಿಷನರ್ ಫಿರಾರ್ ದಾಖಲಿಸಿದ್ದಾರೆ. ಅಂದಿನಿಂದ ಇಂದಿನವರೆಗೂ ಈ ವಿವಾದವು ಹಲವಾರು ದಂಗೆಗಳನ್ನು ಸೃಷ್ಟಿಸಿದೆ. ಇತ್ತೀಚೆಗೆ ಮಧ್ಯಪ್ರದೇಶದಲ್ಲಿ ನಡೆದ ದಂಗೆಗಳು ಪುನರಾವರ್ತನೆಯಷ್ಟೆ. ಈ ವಿವಾದ ಕೊನೆಗೊಂಡಲ್ಲಿ ಮೌಢ್ಯ ಮೂಲದ ಅಧಿಪತ್ಯಕ್ಕೆ ಹಿನ್ನಡೆ ಉಂಟಾಗುವುದರಿಂದ ಇದನ್ನು ಜೀವಂತವಾಗಿರಿಸುವ ಸರ್ವ ಪ್ರಯತ್ನಗಳೂ ನಡೆಯುತ್ತಲೇ ಇರುತ್ತವೆ.

ನಾ. ದಿವಾಕರ
ಕೆನರಾ ಬ್ಯಾಂಕ್, ಬೆಳ್ಳೂರ್ ಅಂಚೆ
ಮೈಸೂರು-ತುಮಕೂರು ರಸ್ತೆ, ಮಂಡ್ಯ - ೫೭೧ ೪೧೮

### ವಿಶ್ವ ವೀಕ್ಷಣೆ

# ಮಿತಿಮೀರಿರುವ ಇಸ್ರೇಲಿ ಭಯೋತ್ಪಾದಕತೆ

**ಪ್ಯಾ**ಲಸ್ತೈನ್ ಅಧ್ಯಕ್ಷ ಯಾಸೆರ್ ಅರಾಫತ್ ಅನ್ನು ಪ್ಯಾಲಸ್ತೈನ್‌ನಿಂದ ಹೊರದೂಡುವ, ಇಲ್ಲವೆ ಕೊಲೆ ಗೈಯ್ಯುವ ಇಸ್ರೇಲಿ ಸರಕಾರದ ಧೋರಣೆಯನ್ನು ಪ್ರಪಂಚದ ಎಲ್ಲ ನಾಗರಿಕ ರಾಷ್ಟ್ರಗಳೂ ಖಂಡಿಸಿವೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸಭೆಯಲ್ಲಿ ಇಸ್ರೇಲಿನ ಅನಾಗರಿಕ ವರ್ತನೆಯನ್ನು ವಿರೋಧಿಸಿ, ಅರಾಫತ್‌ಗೆ ಹಾಕಿರುವ ಬೆದರಿಕೆಯನ್ನು ಹಿಂತೆಗೆದುಕೊಳ್ಳಬೇಕೆಂದು ಆಗ್ರಹಿಸುವ ನಿರ್ಣಯ ಅತ್ಯಧಿಕ ಬಹುಮತವಿದ್ದಾಗ್ಯೂ ಅಮೆರಿಕ ವೀಟೋ ಚಲಾಯಿಸಿದ ಪರಿಣಾಮವಾಗಿ ಬಿದ್ದುಹೋಯಿತು. ಅಮೆರಿಕದ ಈ ಒತ್ತಾಸೆ ಇರುವುದರಿಂದಾಗಿಯೇ ಇಸ್ರೇಲ್ ವಿಶ್ವಸಂಸ್ಥೆಯ ತೀರ್ಮಾನಗಳನ್ನು ಉಲ್ಲಂಘಿಸಿ ಪಶ್ಚಿಮ ಏಶಿಯಾದಲ್ಲಿ ಚೆಲ್ಲಾಟವಾಡುತ್ತಿದೆ. ಪ್ಯಾಲಸ್ತೈನಿಯನ್ನರ ನಾಯಕ ಅರಾಫತ್ ಕೊಲೆಗೆ ಇಸ್ರೇಲಿ ಸರಕಾರ ತನ್ನ ಗುಪ್ತದಳ ಮೊಸ್ಸಾದ್ ಮೂಲಕ ಹಲವು ಪ್ರಯತ್ನಗಳನ್ನು ನಡೆಸಿರುವುದು ರಹಸ್ಯವೇನಲ್ಲ. ಈಗ ಅದು ಅಧಿಕೃತವಾಗಿಯೇ ತನ್ನ ಉದ್ದೇಶವನ್ನು ಪ್ರಕಟಿಸಿದೆ ಅಷ್ಟೆ.

ಈಚೆಗೆ ಎರಡು ವರ್ಷದಿಂದ ಇಸ್ರೇಲ್ ಮತ್ತು ಅಮೆರಿಕ ಅರಾಫತ್‌ರೊಂದಿಗೆ ಎಲ್ಲ ವ್ಯವಹಾರಗಳನ್ನು ನಿಲ್ಲಿಸಿವೆ. ಅರಾಫತ್ ಅಧಿಕಾರ ತ್ಯಜಿಸುವಂತೆ ಅಮೆರಿಕ ಬಹಿರಂಗವಾಗಿಯೇ ಒತ್ತಾಯ ತಂದಿದೆ. ಪ್ಯಾಲಸ್ತೈನ್ ಸ್ವಯಮಾಡಳಿತೆಯಲ್ಲಿ ಅರಾಫತ್‌ರನ್ನು ದೂರವಿರಿಸಿ, ಕೈಗೊಂಬೆ ಸರಕಾರವೊಂದನ್ನು ಸ್ಥಾಪಿಸಿ, ಪ್ಯಾಲಸ್ತೈನಿಯನ್ನರಿಗೆ ತೋರಿಕೆಯ ಸ್ವಾತಂತ್ರ್ಯ ನೀಡುವುದು ಅಮೆರಿಕದ ಹಂಚಿಕೆ. ಅದಕ್ಕಾಗಿಯೇ ಅದು ಮುಂದಿನ ಎರಡು ವರ್ಷಗಳಲ್ಲಿ ಪ್ಯಾಲಸ್ತೈನಿಯನ್ನರಿಗೆ 'ಸ್ವಾತಂತ್ರ್ಯ' ದೊರಕಿಸುವ ಯೋಜನೆಯನ್ನು ರೂಪಿಸಿದೆ. ಅಮೆರಿಕದ ಈ ಯೋಜನೆಗೆ ಇಸ್ರೇಲಿ ಸರಕಾರದ ಸಹಮತವಿಲ್ಲ, ಆದರೂ ಒತ್ತಾಯಕ್ಕೆ ಮಣಿದು ಒಪ್ಪಿಕೊಂಡಿದೆ. ತನ್ನ ನೆರೆಯಲ್ಲಿ ಪ್ಯಾಲಸ್ತೈನ್ ಜನರ ಸ್ವತಂತ್ರ ನಾಡಿಗೆ ಎಂದೂ ಎಡೆಮಾಡಿಕೊಡುವುದಿಲ್ಲ ಎಂಬ ದೃಢ ನಿಲುವು ತಳೆದಿರುವ ಯೆಹೂದ್ಯವಾದಿಗಳು ಯಾವುದೇ ಒಪ್ಪಂದವನ್ನೂ ಭಗ್ನಗೊಳಿಸುತ್ತ ಬಂದಿದ್ದಾರೆ; ಭಯೋತ್ಪಾದಕತೆಯನ್ನು ಹತ್ತಿಕ್ಕುವ ನೆಪದಿಂದ ಅಮಾಯಕ ಪ್ಯಾಲಸ್ತೈನಿಯನ್ ಜನರ ಹತ್ಯಾಕಾಂಡ ನಡೆಸುತ್ತ ಬಂದಿದ್ದಾರೆ. ಇಸ್ರೇಲಿ ಟ್ಯಾಂಕುಗಳು ಪ್ಯಾಲಸ್ತೈನ್ ಪ್ರದೇಶದಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ರುದ್ರ ತಾಂಡವ ನಡೆಸಿವೆ. ಪ್ಯಾಲಸ್ತೈನ್ ಜನತೆಯ ನ್ಯಾಯವಾದ ಬೇಡಿಕೆಯನ್ನು ಹಠಮಾರಿತನದಿಂದ ಇಸ್ರೇಲಿ ಆಡಳಿತಗಾರರು ನಿರಾಕರಿಸುತ್ತಿರುವುದು ಇಡೀ ಪಶ್ಚಿಮ ಏಶಿಯಾದಲ್ಲಿ ಶಾಂತಿಯನ್ನು ಕದಡಿದೆ. ಸ್ವತಂತ್ರ ಪ್ಯಾಲಸ್ತೈನ್ ರಾಷ್ಟ್ರದ ಸ್ಥಾಪನೆಯ ವಿಚಾರದಲ್ಲಿ ಕಿಂಚಿತ್ ಪ್ರಗತಿ ಕಂಡುಬಂದರೂ ಇಸ್ರೇಲಿ ಸರಕಾರ ಭಯೋತ್ಪಾದನೆಯ ಭೂತ ಮುಂದೆಮಾಡಿ ಭಗ್ನಗೊಳಿಸುತ್ತದೆ. ಈಗ ನಡೆದಿರುವುದೂ ಅದೇ ವರಸೆ. ಜನಪ್ರಿಯ ನಾಯಕ ಅರಾಫತ್ ಅನ್ನು ಮುಗಿಸಿಬಿಟ್ಟರೆ ಪ್ಯಾಲಸ್ತೈನ್ ಜನರ ಸ್ವಾತಂತ್ರ್ಯಾಪೇಕ್ಷೆಯನ್ನೂ ಮುಗಿಸಿಬಿಡಬಹುದು ಎಂಬುದು ಇಸ್ರೇಲಿನ ಲೆಕ್ಕಾಚಾರ. ಇಸ್ರೇಲಿನ ಬೆದರಿಕೆಗೆ ಪ್ಯಾಲಸ್ತೈನಿಯನ್ನರು ತೋರಿರುವ ಪ್ರತಿಕ್ರಿಯೆ, ತಮ್ಮ ನೆಚ್ಚಿನ ನಾಯಕನ ಬಗೆಗೆ ವ್ಯಕ್ತಗೊಳಿಸಿರುವ ನಿಷ್ಠೆ ಅದನ್ನು ಸುಳ್ಳಾಗಿಸುವುದು.

ಬ್ರಿಟನ್ ಮತ್ತು ಅಮೆರಿಕಗಳ ಕಿತಾಪತಿಯಿಂದ ಯೆಹೂದಿಗಳಿಗಾಗಿ ಇಸ್ರೇಲ್ ರಾಜ್ಯ ಸ್ಥಾಪನೆಯಾದಾಗಿನಿಂದ ಪಶ್ಚಿಮ ಏಶಿಯಾದಲ್ಲಿ ಅಸ್ಥಿರತೆ ಇದೆ. ಸುಮಾರು ಒಂದೂವರೆ ಸಾವಿರ ವರ್ಷಗಳ ಹಿಂದಿನಿಂದಲೂ ಅರಬ್ಬರ ಆಡಳಿತದಲ್ಲಿದ್ದ ಪ್ಯಾಲಸ್ತೈನ್ ಈಗಿನ ಇಸ್ರೇಲ್ ಹಾಗೂ ಜೋರ್ಡಾನಿನ ಭಾಗಗಳನ್ನು ಹೊಂದಿದ ಪ್ರದೇಶ. ಯೆಹೂದ್ಯರು ಕೂಡ ಅರಬ್ಬರ ಈ ಪ್ರದೇಶದಲ್ಲಿ ವಾಸವಾಗಿದ್ದರು. ಸ್ವತಂತ್ರವಾದ ತಾಯ್ನಾಡಿಲ್ಲದ ಯೆಹೂದ್ಯರು ಸಾವಿರಾರು ವರ್ಷಗಳಿಂದ ಪ್ರಪಂಚದ ವಿವಿಧ ದೇಶಗಳಲ್ಲಿ ನೆಲೆಗೊಂಡಿದ್ದರು. ಯೆಹೂದ್ಯರಿಗೆ ಪ್ರತ್ಯೇಕ ರಾಜ್ಯ ಸ್ಥಾಪನೆಯ ವಿಚಾರ ಪ್ರಬಲವಾಗಿ ಉದ್ಭವಿಸಿದ್ದು ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ, ಅದರಲ್ಲೂ ಮೊದಲನೇ ಮಹಾಯುದ್ಧದ ನಂತರ. ಯುದ್ಧ ವಿರೋಧಿಸಿ ವಿಶ್ವಶಾಂತಿ ಕಾಪಾಡುವ ಉದ್ದೇಶದಿಂದ ಸ್ಥಾಪನೆಗೊಂಡ ಲೀಗ್ ಆಫ್ ನೇಷನ್ಸ್ ಸಂಸ್ಥೆ ವಿವಾದಿತ ಪ್ಯಾಲಸ್ತೈನ್ ಪ್ರದೇಶವನ್ನು ಬ್ರಿಟನ್ನಿನ ಆಡಳಿತಕ್ಕೆ ಒಪ್ಪಿಸಿತು. ಆಗಿನಿಂದ ವಿವಿಧ ದೇಶಗಳಲ್ಲಿ ನೆಲೆಗೊಂಡಿದ್ದ ಅನೇಕ ಯೆಹೂದ್ಯರು ಪ್ಯಾಲಸ್ತೈನ್‌ನಲ್ಲಿ ಅಧಿಕ ಸಂಖ್ಯೆಯಲ್ಲಿ ಬಂದು ನೆಲೆಸತೊಡಗಿದರು. ಬ್ರಿಟನ್ನಿನ ಕುಮ್ಮಕ್ಕಿನಿಂದ ಯೆಹೂದ್ಯರ ಈ ವಲಸೆ ಎರಡನೆ ಮಹಾಯುದ್ಧಾನಂತರವೂ ಮುಂದುವರಿಯಿತು. ಪಶ್ಚಿಮ ಏಶಿಯಾದಲ್ಲಿ ಸಾಮ್ರಾಜ್ಯಶಾಹಿ ಹಂಚಿಕೆಗಳಿಗೆ ನಿಷ್ಠೆಯಿಂದಿರುವಂಥ ಯೆಹೂದ್ಯರ ನಾಡಿನ ಸ್ಥಾಪನೆಗೆ ಬ್ರಿಟಿಷ್ ಬೆಂಬಲ ಮೊದಲಿನಿಂದಲೂ ಇತ್ತು. ಆದ್ದರಿಂದಲೇ ಬ್ರಿಟನ್ ಯೆಹೂದ್ಯರ ವಲಸೆಗೆ ಉತ್ತೇಜನ ನೀಡಿದ್ದು. ಸಮಸ್ಯೆ ಬಗೆಹರಿಸಲು ೧೯೪೭ರಲ್ಲಿ ವಿಶ್ವಸಂಸ್ಥೆಯು ಪ್ಯಾಲಸ್ತೈನ್ ಪ್ರದೇಶದಲ್ಲಿ ಯೆಹೂದ್ಯರು ಮತ್ತು ಅರಬ್ಬರಿಗಾಗಿ ಪ್ರತ್ಯೇಕ ರಾಜ್ಯಗಳನ್ನು ನಿರ್ಮಿಸಬೇಕೆಂದು ಶಿಫಾರಸು ಮಾಡಿತು. ಇದು ಅರಬ್ ರಾಷ್ಟ್ರಗಳಿಗೆ ಒಪ್ಪಿಗೆಯಾಗಲಿಲ್ಲ. ಇದನ್ನೇ ನೆಪವಾಗಿರಿಸಿಕೊಂಡು ಬ್ರಿಟನ್ ಪ್ರತ್ಯೇಕವಾದ ಎರಡು ರಾಜ್ಯಗಳನ್ನು ಸ್ಥಾಪಿಸುವುದು ಬಿಟ್ಟು ಏಕಪಕ್ಷೀಯವಾಗಿ ಯೆಹೂದ್ಯರಿಗಾಗಿ ಇಸ್ರೇಲ್ ರಾಜ್ಯವನ್ನು ನಿರ್ಮಿಸಿ ೧೯೪೮ರಲ್ಲಿ ಅಲ್ಲಿಂದ ಕಾಲ್ತೆಗೆಯಿತು. ಬ್ರಿಟನ್ನಿನ ಈ ಕುಟಿಲ ಕ್ರಮದಿಂದಾಗಿ ಇಸ್ರೇಲ್ ಮತ್ತು ಅರಬ್ ರಾಷ್ಟ್ರಗಳ ನಡುವೆ ಘರ್ಷಣೆಗಳಾದುವು. ಬ್ರಿಟನ್ ತೆರವು ಮಾಡಿದ ಈ ಪ್ರದೇಶದಲ್ಲಿ ಅಮೆರಿಕ ಪ್ರವೇಶಿಸಿ ಇಸ್ರೇಲಿಗೆ ಆಪ್ತಮಿತ್ರನಾಯಿತು. ಅಮೆರಿಕದ ಡಾಲರುಗಳು ಮತ್ತು ಶಸ್ತ್ರಾಸ್ತ್ರಗಳ ಬೆಂಬಲದಿಂದ ಇಸ್ರೇಲಿ ವಿಸ್ತರಣಾವಾದಿಗಳು ಅರಬ್ ದೇಶಗಳೊಂದಿಗೆ ಯುದ್ಧ ನಡೆಸಿ ಇನ್ನಷ್ಟು ಅರಬ್ ಪ್ರದೇಶವನ್ನೂ ಆಕ್ರಮಿಸಿಕೊಂಡರು. ಆಕ್ರಮಿತ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಮಂದಿ ಯೆಹೂದ್ಯ ವಲಸೆಗಾರರನ್ನು ನೆಲೆಗೊಳಿಸಿತು.

ಪ್ಯಾಲಸ್ತೈನ್ ಅರಬ್ಬರಿಗೆ ಸ್ವತಂತ್ರ ನಾಡಿಲ್ಲದಂತಾಗಿ ಲಕ್ಷಾಂತರ ಮಂದಿ ನಿರಾಶ್ರಿತರಾಗುವಂತಾಯಿತು. ಯಾಸೆರ್ ಅರಾಫತ್‌ರ ನೇತೃತ್ವದಲ್ಲಿ ಸ್ಥಾಪನೆಗೊಂಡ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ ಪ್ಯಾಲಸ್ತೈನ್ ಸ್ವತಂತ್ರ ನಾಡಿನ ಸ್ಥಾಪನೆಗಾಗಿ ಹೋರಾಟ ಪ್ರಾರಂಭಿಸಿತು. ಅವರ ಈ ಹೋರಾಟಕ್ಕೆ ಹೊಸದಾಗಿ ಸ್ವತಂತ್ರಗೊಂಡ ಎಲ್ಲ ದೇಶಗಳ ಬೆಂಬಲ ಲಭಿಸಿತು. ಅಂದಿನ ದಿನಗಳಲ್ಲಿ ಪ್ರಬಲವಾಗಿದ್ದ ಅಲಿಪ್ತ ರಾಷ್ಟ್ರಗಳ ಚಳುವಳಿ ಪ್ಯಾಲಸ್ತೈನ್ ಅರಬ್ಬರ ಸ್ವಾತಂತ್ರ್ಯ ಹೋರಾಟಕ್ಕೆ ಪೂರ್ಣ ಬೆಂಬಲ ನೀಡಿತಲ್ಲದೆ, ಅರಾಫತ್ ನೇತೃತ್ವದಲ್ಲಿನ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯನ್ನು ಪ್ಯಾಲಸ್ತೈನ್ ಜನತೆಯ ಏಕಮಾತ್ರ ಪ್ರಾತಿನಿಧಿಕ ಸಂಸ್ಥೆಯೆಂದು ಮಾನ್ಯಮಾಡಿ ಸದಸ್ಯತ್ವವನ್ನೂ ನೀಡಿತು. ಕಾಲಕ್ರಮೇಣ ವಿಶ್ವಸಂಸ್ಥೆಯೂ ಕೂಡ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಗೆ ಆಲೋಚನೆಯ ಮಾನ್ಯತೆ ನೀಡಿತು. ಪಶ್ಚಿಮ ಏಶಿಯಾದಲ್ಲಿ ತೈಲ ಸಂಪದ್ಯುಕ್ತ ದೇಶಗಳ ಮೇಲೆ ತನ್ನ ನಿಯಂತ್ರಣವನ್ನು ಸ್ಥಾಪಿಸಿಕೊಳ್ಳುವ ಉದ್ದೇಶ ಸಾಧನೆಗೆ ಅಮೆರಿಕ ಇಸ್ರೇಲನ್ನು ದಾಳವಾಗಿ ಉಪಯೋಗಿಸಿಕೊಂಡಿತು. ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯನ್ನು ವಿರೋಧಿಸುವ ಇಸ್ರೇಲಿನ ಹಠಮಾರಿ ಧೋರಣೆಗೆ ಪೂರ್ಣ ಬೆಂಬಲ ನೀಡಿತು.

ಇಸ್ರೇಲಿನ ದಬ್ಬಾಳಿಕೆಯನ್ನು ಎದುರಿಸಿ ಸುದೀರ್ಘ ಹೋರಾಟ ನಡೆಸಿದ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಗೆ ಕೊನೆಗೂ ಅಂತರರಾಷ್ಟ್ರೀಯ ಮನ್ನಣೆ ಲಭಿಸಿತು. ಒಂದು ದಶಕಕ್ಕೂ ಹಿಂದೆ ಅಮೆರಿಕದ ಮಧ್ಯಸ್ಥಿಕೆಯಿಂದಾಗಿ ಇಸ್ರೇಲ್ ಪ್ಯಾಲಸ್ತೈನಿಯನ್ನರಿಗೆ ಸ್ವಯಮಾಡಳಿತ ನೀಡಲು ಸಮ್ಮತಿಸಿತು. ಪ್ಯಾಲಸ್ತೈನಿಯನ್ ಪ್ರದೇಶದ ಆಡಳಿತಕ್ಕೆ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯ ನಾಯಕ ಅರಾಫತ್ ಅಧ್ಯಕ್ಷತೆಯಲ್ಲಿ ಸರಕಾರವೊಂದು ಸ್ಥಾಪನೆಯಾಯಿತು. ಈ ಸೀಮಿತ ವ್ಯವಸ್ಥೆಯನ್ನು ವಿರೋಧಿಸಿ, ಪೂರ್ಣ ಸ್ವಾತಂತ್ರ ರಾಜ್ಯ ಸ್ಥಾಪನೆಗೆ ಒತ್ತಾಯ ತರುತ್ತಿದ್ದ ಹಮಾಸ್‌ನಂಥ ಪ್ಯಾಲಸ್ತೈನಿನ ಸಂಘಟನೆಗಳು ಹೋರಾಟವನ್ನು ಮುಂದುವರಿಸಿದುವು. ಒಪ್ಪಂದವನ್ನು ಪೂರ್ಣವಾಗಿ ಜಾರಿಗೆ ತರಲು ಬಯಸದಿದ್ದ ಇಸ್ರೇಲ್ ಪಶ್ಚಿಮ ದಂಡೆಯ

ಪ್ರದೇಶದಲ್ಲಿ ನೆಲೆಗೊಂಡಿದ್ದ ಯೆಹೂದ್ಯರನ್ನು ಸ್ಥಳಾಂತರಿಸಲು ನಿರಾಕರಿಸಿತು. ಒಂದಲ್ಲ ಒಂದು ನೆಪವೊಡ್ಡಿ ಇಸ್ರೇಲ್ ಪ್ಯಾಲಸ್ತೈನಿಯನ್ನರ ಮೇಲೆ ದಬ್ಬಾಳಿಕೆ ಮುಂದುವರಿಸಿತು. ಭಯೋತ್ಪಾದನೆಯನ್ನು ನಿಗ್ರಹಿಸುವ ಹೆಸರಿನಲ್ಲಿ ಇಸ್ರೇಲಿ ಪಡೆಗಳು ಪ್ಯಾಲಸ್ತೈನ್ ಪ್ರದೇಶಗಳಲ್ಲಿ ಪ್ರವೇಶಿಸಿ ಅಮಾಯಕ ಜನರನ್ನು ಕಗ್ಗೊಲೆ ಮಾಡತೊಡಗಿತು. ಎರಡು ವರ್ಷಗಳ ಹಿಂದೆ ಪ್ಯಾಲಸ್ತೈನ್ ನಾಯಕ ಅಧ್ಯಕ್ಷ ಅರಾಫತ್ ಇರುವ ರೊಮಲ್ಲಾ ಕೇಂದ್ರವನ್ನು ಇಸ್ರೇಲಿ ಪಡೆ ಸುತ್ತುವರಿದು ದಾಳಿ ನಡೆಸಿತು. ಭಯೋತ್ಪಾದಕರನ್ನು ಉಚ್ಚಾಟಿಸುವ ಉದ್ದೇಶಿತ ಈ ದಾಳಿಯ ಹಿಂದೆ ಅರಾಫತ್‌ರ ಕೊಲೆಯ ಸಂಚೂ ಇತ್ತು. ಆಗಿನಿಂದ ಅರಾಫತ್ ಒಂದು ರೀತಿಯಲ್ಲಿ ರೊಮಲ್ಲಾದಲ್ಲಿ ಬಂಧಿತರಾಗಿದ್ದಾರೆ. ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಅಮೆರಿಕ ಪ್ಯಾಲಸ್ತೈನರಿಗೆ ಸ್ವತಂತ್ರ ನಾಡಿನ ಸ್ಥಾಪನೆಯ ಅಗತ್ಯವನ್ನು ಅಂಗೀಕರಿಸಿದರೂ ಇಸ್ರೇಲಿನ ದಬ್ಬಾಳಿಕೆಯ ವಿರುದ್ಧ, ದುರಾಕ್ರಮಣ ನೀತಿಯ ವಿರುದ್ಧ ಚಕಾರವೆತ್ತಲಿಲ್ಲ. ಬದಲಾಗಿ ಅರಾಫತ್‌ರನ್ನು ಮೂಲೆಗೊತ್ತಿ ಇಸ್ರೇಲಿಗೆ ಅನುಕೂಲವಾಗುವಂಥ ಸರಕಾರವೊಂದನ್ನು ಸ್ಥಾಪಿಸಿ ಒಪ್ಪಂದ ಮಾಡಿಸಲು ಯೋಜನೆಯೊಂದನ್ನು ತಯಾರಿಸಿತು. ಅದೇ ಅರಾಫತ್‌ರ ಕೊಲೆಗೆ ಇಸ್ರೇಲಿ ಬೆದರಿಕೆಗೆ ಮೂಲ. ಅಮೆರಿಕದ ಈ ಹೊಸ ಯೋಜನೆಯೂ ಈಗ ಮುರಿದುಬಿದ್ದ ಹಾಗೆಯೇ.

ಭಯೋತ್ಪಾದನೆ ವಿರುದ್ಧವಾಗಿ ಸಮರ ನಡೆಸುತ್ತಿರುವುದಾಗಿ ಹೇಳುತ್ತಿರುವ ಇಸ್ರೇಲ್ ನಿಜವಾದ ಭಯೋತ್ಪಾದಕ. ಪ್ರಪಂಚದ ಅತಿದೊಡ್ಡ ಭಯೋತ್ಪಾದಕ ರಾಷ್ಟ್ರ ಅಮೆರಿಕ ಸಿಐಎ ಮೂಲಕ ನಡೆಸಿರುವ ಕಗ್ಗೊಲೆಗಳನ್ನು ಮೀರಿಸಿ ಇಸ್ರೇಲಿ ಮೊಸ್ಸಾದ್ ಪ್ಯಾಲಸ್ತೈನ್‌ನಲ್ಲಿ ಭಯಂಕರ ಕೃತ್ಯಗಳನ್ನು ಎಸಗಿದೆ. ಇಂಥ ಒಂದು ಭಯೋತ್ಪಾದಕ ರಾಷ್ಟ್ರದ ಜೊತೆ ಭಾಜಪ ನೇತೃತ್ವದಲ್ಲಿರುವ ವಾಜಪೇಯಿ ಸರಕಾರ ಕೈಜೋಡಿಸ ಹೊರಟಿರುವುದು ನಿಜಕ್ಕೂ ಅವಮಾನಕರ. ಯೆಹೂದ್ಯವಾದಿಗಳ ಜೊತೆ ಹಿಂದುತ್ವವಾದಿಗಳು ಶಾಮೀಲಾಗುತ್ತಿರುವುದು ಭಾರತದ ಸೆಕ್ಯುಲರ್ ಪರಂಪರೆಗೆ ಕಳಂಕ. ಪ್ಯಾಲಸ್ತೈನಿಯನ್ನರ ಮೇಲೆ ಕ್ರೂರ ದಬ್ಬಾಳಿಕೆ ನಡೆಸಿರುವ ಇಸ್ರೇಲಿ ಪ್ರಧಾನಿ ಏರಿಯಲ್ ಶರೋನ್ ತಮ್ಮ ಭೇಟಿಯ ಕಾಲದಲ್ಲಿ ಮುತ್ಸದ್ದಿತನದ ಎಲ್ಲೆ ಮೀರಿ ಇರಾನ್‌ನ ಮೇಲೆ ಕಿಡಿಕಾರಿದ್ದು ಎಲ್ಲರಿಗೂ ತಿಳಿದಿದೆ. ಭಾರತದ ಭೇಟಿಯನ್ನು ಮೊಟಕುಗೊಳಿಸಿ ಸ್ವದೇಶಕ್ಕೆ ವಾಪಸ್ಸಾದ ಕೂಡಲೇ ಪ್ಯಾಲಸ್ತೈನ್ ನಾಯಕ ಅರಾಫತ್‌ಗೆ ಹಾಕಿರುವ ಕೊಲೆ ಬೆದರಿಕೆ ಇಸ್ರೇಲಿ ಪ್ರಧಾನಿ ಶರೋನ್ ಎಂಥ ಪಾತಕಿ ಎನ್ನುವುದನ್ನು ತೋರಿಸಿದೆ. ಇಂಥವರೊಂದಿಗೆ ಕೂಡಿಕೊಂಡು ಭಯೋತ್ಪಾದನೆ ವಿರುದ್ಧ ಹೋರಾಡುವ ವಾಜಪೇಯಿ ಸರಕಾರದ ಧೋರಣೆ ಭಾರತದ ಘನತೆಗೆ ತಕ್ಕುದಾಗಿಲ್ಲ. ಭಾರತಕ್ಕೆ ಇಸ್ರೇಲಿ ಪ್ರಧಾನಿ ಭೇಟಿಯ ಸಂದರ್ಭದಲ್ಲಿ ಅರಬ್ ರಾಷ್ಟ್ರದ ಮುತ್ಸದ್ದಿಯೊಬ್ಬ 'ಭಯೋತ್ಪಾದಕನೊಂದಿಗೆ ಸೇರಿಕೊಂಡು ಭಯೋತ್ಪಾದನೆಯನ್ನು ಎದುರಿಸುವುದು ಸಾಧುವಲ್ಲ' ಎಂದು ಹೇಳಿದ್ದು ಯಥಾರ್ಥವಾಗಿದೆ.

— ಸೀಯಾರ್ಕೆ



# ಅಡುಗೆ ಮನೆಯ ಅಧ್ಯಾತ್ಮ

ಇವುಗಳದ್ದೇ ಆಯಿತು
ಬೆಳಗಾದರೆ ಸಾಕು
ಮೂಡುವವರೆಗೂ ಬೈಗು
ಹೊತ್ತುಗೊತ್ತಿಲ್ಲದೆ ಬೀಳುವ
ಮುಸುರೆಗಳಿಗು ತಿಕ್ಕುವ
ಕೈಗಳಿಗೂ ಎಲ್ಲಿಯ ಅದೆಲ್ಲಿಯ ಸಂಬಂಧ
ಮನೆಮಂದಿ ಇದ್ದವರು
ಹೋದವರು ಎಂದೆಣಿಸುವ ಬಂಧ
ನವೆದಂತೆ ಬೆರಳುಗಳು
ತಟ್ಟೆ ಲೋಟ ಬಟ್ಟಲು
ಹೊಳಪೇರಿಸಿ ನಗು ಸೂಸುವ
ಬೆಡಗಿನ ಬಿನ್ನಾಣಕ್ಕೆ ಇಲ್ಲ ಬಾಯಿ
ಮಾತಿಲ್ಲವೆಂದಲ್ಲ ಅಪರೂಪಕ್ಕೆ
ಆಡುವುದುಂಟು 'ನೀನು ನೀರಿನಂತೆ'
ಯಾರೊಳಗೆ ತುಂಬಿದರೂ
ಅದೇ ಆಕಾರ ಚಿತ್ತ ಸಾಕಾರ
ಎಂಜಲ ರುಚಿ ಹತ್ತಿಸಿಕೊಂಡ
ತಂಬಿಗೆ ತಟ್ಟೆ ಲೋಟ ಕೊಡಪಾನಗಳೊಳಗೆ
ಎಲ್ಲಿದ್ದರೂ ನೀರು ನಿರ್ವಿಕಾರ.

ತುಂಬಿದ್ದಲ್ಲಿ ಹುಡುಕಿದರೆ
ಹುದುಗಿಹುದೆ ಸದ್ದು
ಅಡುಗೆ ಮನೆಯ ತುಂಬಾ ಖಾಲಿ
ತಟ್ಟೆ ಲೋಟ ಬಟ್ಟಲುಗಳ
ಶಬ್ದಗಳೇ ಶ್ರೋತ್ರದೆಂಜಲು
ರುಚಿ ನಾಲಿಗೆಯೆಂಜಲು
ಪರಿಮಳವೇ ಮೂಗಿನೆಂಜಲು
ಮುಟ್ಟಿದರೆ ಚರ್ಮದೆಂಜಲು
ಕಾಣುವುದೆಲ್ಲ ಕಣ್ಣೆಂಜಲು
ನಾನೂ ಇವುಗಳೋ ಅರಿವಿನೆಂಜಲು
ಮುಸುರೆಯೊಳಗೂ ಮಿಡಿದ ತತ್ತ್ವ
ಅಡುಗೆ ಮನೆಯ ಅಧ್ಯಾತ್ಮ
ಎಂಜಲೊಳಗದ್ದಿ ಮೂಡುವ ಮರ್ಮ
ದಿನಬಳಕೆಯ ತಟ್ಟೆ ಲೋಟಕ್ಕೂ
ನೇರಸೆರೆ ಬೆರಳಿನ ಹಂಗು
ಎಲ್ಲೆಲ್ಲೂ ಶುದ್ಧ ಎಂಜಲರಂಗು

ಕವಿತಾ ರೈ, ಬಿ. ಆರ್.
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ವಿಭಾಗ
ಮಂಗಳಗಂಗೋತ್ರಿ, ಕೊಣಾಜೆ

# ಕೇರಳದ ರಾಜಕೀಯ ಮತ್ತು ಸಾಂಸ್ಕೃತಿಕ ವಿದ್ಯಮಾನಗಳು ತೀರಾ ನಿರಾಶಾದಾಯಕವಲ್ಲ



– ಪಿ. ಕೆ. ವಾಸುದೇವನ್ ನಾಯರ್

**ಜಿ. ಆರ್. (ಹೊಸತು)** : ಸಂಗಾತಿ ವಾಸುದೇವನ್ ನಾಯರ್ ಅವರೇ, ನೀವು ಕೇರಳದಿಂದ ಬಂದಿದ್ದೀರಿ. ಅಲ್ಲಿ ಕೆಲವು ತಿಂಗಳ ಹಿಂದೆಯಷ್ಟೆ ನಡೆದ ಮಾರಾಡ್ ಹತ್ಯೆಗಳ ಘಟನೆಯಿಂದ ಮಾತು ಪ್ರಾರಂಭಿಸೋಣ. ಪ್ರಾರ್ಥನಾ ಮಂದಿರಗಳಲ್ಲಿ ಆಯುಧಗಳನ್ನು ಸಂಗ್ರಹಿಸಿಡಲಾಗಿತ್ತು ಎಂದು ಭಾವಿಸೋಣವೆ? ಈಗ ಘಟನೆಯ ನಂತರ ರಾಜಕೀಯ ಕೋಮುವಾದೀಕರಣ ಇನ್ನು ಮುಂದೆ ರೂಢಿಗತವಾಗುತ್ತದೆ ಎನ್ನಬಹುದೆ? ಈಗ ಅಲ್ಪ ಸಂಖ್ಯಾತರು ಆಯುಧಗಳನ್ನು ಸಂಗ್ರಹಿಸಿಟ್ಟಿದ್ದುದು ಬೆಳಕಿಗೆ ಬಂದಿರುವುದರಿಂದ, ಆರೆಸ್ಸೆಸ್ ಮತ್ತು ಬಿಜೆಪಿಗಳನ್ನಷ್ಟೆ ಆಪಾದಿಸಿದರೆ ಸಾಲದಲ್ಲವೆ? ಈ ಸಂದರ್ಭದಲ್ಲಿ ನಿಮ್ಮ ಕಾರ್ಯಾಚರಣೆ ಯಾವ ನಿಟ್ಟಿನಲ್ಲಿ?

**ಪಿ.ಕೆ.ವಿ. :** ರಾಜಕೀಯವಾಗಿ, ಸಾಮಾಜಿಕವಾಗಿ ಕೇರಳದ ಪರಂಪರೆಯನ್ನು ಗಣನೆಗೆ ತೆಗೆದುಕೊಂಡರೆ, ಇಂಥ ಘಟನೆ ಹಿಂದೆ ನಡೆದಿರಲಿಲ್ಲ. ಇನ್ನಿತರ ಕಡೆಗಳಲ್ಲಿರು ವಂತೆಯೇ ಕೋಮುವಾದಿ ಪಕ್ಷಗಳು, ಮೂಲಭೂತ ವಾದಿ ಸಂಘಟನೆಗಳು ಕೇರಳದಲ್ಲಿಯೂ ಸಂಘಟಿತ ವಾಗಿದ್ದರೂ ಒಟ್ಟಾರೆ ಸಮಾಜದ ಮೇಲೆ ಅವುಗಳ ಪ್ರಭಾವ ಹೆಚ್ಚಾಗಿರಲಿಲ್ಲ.

**ಜಿಆರ್ :** ಈ ಘಟನೆಯ ನಂತರವೂ ಹಾಗೆ ಭಾವಿಸಬಹುದೇ?

**ಪಿಕೆವಿ :** ಮತಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ಪ್ರಭಾವವನ್ನು ಅಂದಾಜು ಮಾಡಿರುವು ದಿಲ್ಲ. ಕಳೆದ ಚುನಾವಣೆಯಲ್ಲಿ ಇವುಗಳ ಪ್ರಭಾವ ಶೇ. ೬ರಿಂದ ೭ರಷ್ಟು ಎಂಬುದು ತಿಳಿದುಬಂತು. ಸ್ವತಃ ಬಲವಾಗಿಲ್ಲದ ಅವು ಚುನಾವಣೆಯ ಮೇಲೆ ನೇರ ಪ್ರಭಾವ ಬೀರಲಾಗದಿದ್ದರೂ, ಪರೋಕ್ಷವಾಗಿ ಕೆಲವು ವ್ಯಕ್ತಿಗಳನ್ನೂ, ಪಕ್ಷಗಳನ್ನೂ ಬೆಂಬಲಿಸುತ್ತ ಬಂದಿದ್ದವು. ಒಂದೇಕಡೆ ಕೇಂದ್ರೀಕೃತವಾಗಿಲ್ಲದ ಅವು ಬೇರೆ ಬೇರೆ ಪಕ್ಷಗಳಲ್ಲಿ ಸೇರಿಕೊಂಡು ಚಟುವಟಿಕೆ ನಡೆಸು ತ್ತವೆ. ಹೇಗಾದರೂ ಎಡಪಕ್ಷಗಳನ್ನು ಸೋಲಿಸುವುದು ಅವುಗಳ ಮುಖ್ಯ ಗುರಿ. ಕಳೆದ ಚುನಾವಣೆಯಲ್ಲಿ ಯುಡಿಎಫ್ (ಯುನೈಟೆಡ್ ಡೆಮಾಕ್ರಾಟಿಕ್ ಫ್ರಂಟ್) ಈ ಎಲ್ಲಾ ತೀವ್ರ ಮೂಲಭೂತವಾದಿ ಶಕ್ತಿಗಳ ಬೆಂಬಲವನ್ನು ಧಾರಾಳವಾಗಿ ಬಳಸಿಕೊಂಡಿತು. ಇದರಲ್ಲಿ ಆರೆಸ್ಸೆಸ್‌ನದು ಮುಖ್ಯ ಪಾತ್ರ. ಈಗ ಮಾರಾಡ್ ಘಟನೆಯ ನಂತರ ಈ ಶಕ್ತಿಗಳ ಪ್ರಭಾವವನ್ನು ಅಂದಾಜು ಮಾಡಬೇಕಾಗಿದೆ.

ಕೇರಳದಲ್ಲಿ ಶೇ. ೨೦ರಷ್ಟು ಮುಸ್ಲಿಮರು, ಶೇ. ೨೦ರಷ್ಟು ಕ್ರೈಸ್ತರು. ಹೀಗೆ ಕೇರಳದಲ್ಲಿ ಶೇ. ೪೦ರಷ್ಟು ಜನರು ಅಲ್ಪಸಂಖ್ಯಾತರು. ಮುಸ್ಲಿಮರಲ್ಲಿ ಬಹುಪಾಲು ಇಂಡಿಯನ್ ಮುಸ್ಲಿಂ ಲೀಗ್ ಪ್ರಭಾವಕ್ಕೊಳಗಾದವರು. ಈ ಪಕ್ಷ ಮೂಲಭೂತವಾದಿ ಧೋರಣೆಗಳನ್ನು ಅನುಸರಿಸು ವಂಥದ್ದಲ್ಲ. ಬಾಬರಿ ಮಸೀದಿ ಧ್ವಂಸವಾದ ಸಂದರ್ಭದಲ್ಲಿ ಇಡೀ ಮುಸ್ಲಿಂ ಸಮುದಾಯ ವ್ಯಗ್ರಗೊಂಡಿದ್ದಾಗ ಮುಸ್ಲಿಂ ಲೀಗ್ ಅವರನ್ನು ಸಮಾಧಾನಗೊಳಿಸುವ ಮಾರ್ಗ ಅನುಸರಿಸಿತು. ಈಗ ಮಾರಾಡ್ ಘಟನೆಯ ಸಂದರ್ಭದಲ್ಲಿಯೂ ಅದು ಈ ಧೋರಣೆಯನ್ನು ಬಿಟ್ಟು ಕೊಟ್ಟಿಲ್ಲ. ಮಾರಾಡಿನಲ್ಲಿ ಹಲ್ಲೆಗೊಳಗಾದ ಅರೆಯ ಸಮುದಾಯ ಮತ್ತು ಹಲ್ಲೆ ನಡೆಸಿದ ಮುಸ್ಲಿಮರು ಮೀನುಗಾರಿಕೆಯಿಂದ ಜೀವನ ನಡೆಸುವವರು. ಸ್ವಲ್ಪ ಕಾಲದಿಂದಲೇ ಅಲ್ಲಿ ಸಂಘರ್ಷದ ಪರಿಸ್ಥಿತಿ ಇತ್ತು. ಕಳೆದ ವರ್ಷ ಅದು ತೀವ್ರಗೊಂಡು, ಹಿಂದು ಮೀನುಗಾರರು ನಡೆಸಿದ ಹಲ್ಲೆಯಲ್ಲಿ ಮೂರು ಮಂದಿ ಮುಸ್ಲಿಂ ಮೀನುಗಾರರು ಹತರಾದರು. ಈ ವರ್ಷ ಹಿಂದಿನ ಘಟನೆಗೆ ಪ್ರತೀಕಾರ ರೂಪದಲ್ಲಿ ಘರ್ಷಣೆ ನಡೆಯಿತು. ಇದರಲ್ಲಿ ಒಂಬತ್ತು ಮಂದಿ ಅರೆಯ ಮೀನುಗಾರರು ಸತ್ತರು.

ಅಲ್ಲಿ ಕಳೆದ ಹತ್ತು ವರ್ಷಗಳಿಂದ ನ್ಯಾಷನಲ್ ಡೆಮಾಕ್ರಾಟಿಕ್ ಫ್ರಂಟ್ (ಎನ್‌ಡಿಎಫ್) ಎಂಬ ಪಕ್ಷ ಚಟುವಟಿಕೆ ನಡೆಸುತ್ತ ಬರುತ್ತಿದೆ. ಜಾತ್ಯತೀತವೆಂದು ಕರೆದುಕೊಳ್ಳುವ ಮುಸ್ಲಿಮರ ಪಕ್ಷವಾದ ಇದು ಅನುಸರಿಸುವ ಮಾರ್ಗ ಕುತಂತ್ರದ್ದು. ಆರೆಸ್ಸೆಸ್‌ಗಿಂತಲೂ ಉಗ್ರ ಮೂಲಭೂತವಾದಿ ವಿಚಾರಗಳನ್ನೂ ಪ್ರತಿಪಾದಿಸುವ ಪಕ್ಷ ಅದು. ಹೊರಗಿನಿಂದಲೂ ಧನಸಹಾಯ ಪಡೆಯುತ್ತದೆ. ಇದರ ಚಟುವಟಿಕೆಯ ಕಾರಣ ತೀರಾ ತೊಡಕಿನ ಪರಿಸ್ಥಿತಿ ಎದುರಿಸುತ್ತಿರುವುದಾಗಿ ಮುಸ್ಲಿಂ ಲೀಗ್ ನಾಯಕರೇ ಹೇಳುತ್ತಾರೆ. ನಮ್ಮ ಪಕ್ಷದ ಕೆಲವು ಕಾರ್ಯಕರ್ತರೂ ಅದರತ್ತ ಆಕರ್ಷಿತರಾದದ್ದುಂಟು. ಇದು ಮುಸ್ಲಿಂ ಲೀಗಿನ ಕಾರ್ಯಕರ್ತರನ್ನೂ ಹತ್ಯೆ ಮಾಡಿದೆ. ಇದರಿಂದ ಮುಸ್ಲಿಮರ ವಿರುದ್ಧ ಮುಸ್ಲಿಮರು ಎಂಬ ಪರಿಸ್ಥಿತಿ ಉಂಟಾಗಿದೆ. ಉದಾರವಾದಿ ವಿಚಾರದ ಒಬ್ಬ ಮೌಲ್ವಿಯನ್ನು ಸಹ ಈ ಮಂದಿ ಹತ್ಯೆ ಮಾಡಿದರು. ಮೌಲ್ವಿಯನ್ನು ಕೊಂದವರು ಮುಸ್ಲಿಂ ಮೂಲಭೂತವಾದಿಗಳು. ಹತ್ತು ವರ್ಷಗಳ ನಂತರ ಈಗಷ್ಟೆ ಈ ಪ್ರಕರಣವನ್ನು ಸಿಬಿಐಗೆ ವಹಿಸಲಾಗಿದೆ.

ಇಂಥದ್ದೇ ಮತ್ತೊಂದು ಸಂಘಟನೆ ಪಿಡಿಪಿ. ಇದೀಗ ಕೊಯಂಬತ್ತೂರು ಬಾಂಬ್ ಪ್ರಕರಣದಲ್ಲಿ ಜೈಲಿನಲ್ಲಿರುವ ಮದನಿ ಇದರ ನೇತಾರ. ಇದು ಸಹ ಮುಸ್ಲಿಂ ಲೀಗಿಗೆ ಸವಾಲಾಗಿ ಹುಟ್ಟಿ ಕೊಂಡದ್ದು. ಎಲ್ಲ ಸಂದರ್ಭಗಳಲ್ಲಿ ಲೀಗ್ ಒಂದು ರೀತಿಯ ವಿವೇಚನೆಯ ಮಾರ್ಗ ಅನುಸರಿಸುತ್ತ ಬಂದಿದೆ. ಎನ್‌ಡಿಎಫ್ ಇತರ ಪಕ್ಷಗಳ ಮೂಲಕ ಚುರುಕಿನಿಂದ ಕೆಲಸ ಮಾಡುತ್ತದೆ. ಮಾರಾಡ್ ಘಟನೆಯಲ್ಲಿ ಅನೇಕ ಮುಸ್ಲಿಂ ಲೀಗ್ ಕಾರ್ಯಕರ್ತರನ್ನು ಬಂಧಿಸ ಲಾಗಿದೆ. ಆದರೆ ಲೀಗ್ ಇದರಲ್ಲಿ ತಮ್ಮ ಪಕ್ಷದ ಪಾತ್ರ ಏನೂ ಇಲ್ಲವೆನ್ನುತ್ತಿದೆ. ಮಾತ್ರವಲ್ಲದೆ ಘಟನೆಯನ್ನು ಖಂಡಿಸಿದೆ. ಎನ್‌ಡಿಎಫ್‌ನತ್ತ ಆಕರ್ಷಿತರಾಗಿದ್ದ ಕೆಲವು ಮಾರ್ಕ್ಸ್‌ವಾದಿ ಪಕ್ಷದ ಕಾರ್ಯಕರ್ತರು ಸಹ ಮಾರಾಡ್ ಪ್ರಕರಣದಲ್ಲಿ ಭಾಗವಹಿಸಿರುವುದಾಗಿ ಬೆಳಕಿಗೆ ಬಂದಿದೆ. ಈ ಪ್ರಕರಣದಲ್ಲಿಯೂ ಮುಸ್ಲಿಂ ಲೀಗ್ ವಿವೇಚನೆಯಿಂದ ವರ್ತಿಸಿತು.

> ಭಾರತ ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಐದು ದಶಕಗಳ ಕಾಲ ದುಡಿದಿರುವ ಶ್ರೀ ಪಿ. ಕೆ. ವಾಸುದೇವನ್ ನಾಯರ್ ಕೆಲಕಾಲ ಕೇರಳದ ಮುಖ್ಯಮಂತ್ರಿಗಳಾಗಿದ್ದರು. ಜನಪರ ಹೋರಾಟಗಳಲ್ಲಿ ಅಪ್ರತಿಮ ಭಾಗವಹಿಸುವಿಕೆಗೆ ಅವರು ಹೆಸರಾದವರು. ಈಚೆಗೆ ಬೆಂಗಳೂರಿಗೆ ಬಂದಿದ್ದಾಗ ಅವರನ್ನು 'ಹೊಸತು' ಸಂದರ್ಶಿಸಿತು. ಸಂದರ್ಶನದಲ್ಲಿ ಭಾಗವಹಿಸಿದವರು ಜಿ. ರಾಮಕೃಷ್ಣ, ಸೀಯಾರ್ಕೆ, ಕೆ. ಎಲ್. ಗೋಪಾಲಕೃಷ್ಣ ರಾವ್ ಮತ್ತು ಆರ್. ಎಸ್. ರಾಜಾರಾಮ್. ಸಂದರ್ಶನವನ್ನು ದಾಖಲಿಸಿರುವವರು ಶ್ರೀ ಕೆ. ಪಿ. ಸ್ವಾಮಿ.

ಅದು ಆಡಳಿತದಲ್ಲಿ ಭಾಗಿಯಾಗಿರುವುದರಿಂದ ಉಗ್ರವಾದಿ ನಿಲುವನ್ನು ಅನುಸರಿಸಲು ಸಾಧ್ಯವಿಲ್ಲವಷ್ಟೆ. ಕೇರಳದಲ್ಲಿ ಹಿಂದುಳಿದವರ ಪಟ್ಟಿಯಲ್ಲಿರುವ ಮುಸ್ಲಿಂ ಸಮುದಾಯ ಅನೇಕ ವರ್ಷಗಳಿಂದ ಮೀಸಲಾತಿ ಸವಲತ್ತು ಗಳಿಸುತ್ತ ಬಂದಿದೆ. ಹಿಂದೆ ಅದು ಬಡಜನರ ಸಮುದಾಯ ಎಂದು ಪರಿಗಣಿತವಾಗಿತ್ತು. ಈಗ ಆರ್ಥಿಕವಾಗಿ ಬಲಿಷ್ಠವಾದ ಸಮುದಾಯವಾಗಿದೆ. ಬಲವಾದ ಮಧ್ಯಮ ವರ್ಗ, ಬೂರ್ಷ್ವಾ ವರ್ಗ ರೂಪುಗೊಂಡಿದೆ. ಇದೆಲ್ಲ ಮುಸ್ಲಿಂ ಲೀಗಿನ ಪಾಲಿಗೆ ಒಂದು ಬಗೆಯ ತೊಡಕಾಗಿ ಪರಿಣಮಿಸಿದೆ.

ಬೇರೆ ಕಡೆ ಉಗ್ರವಾದಿಗಳು ಬಳಸುವಂಥ ಆಧುನಿಕ ಆಯುಧಗಳು ಮಾರಾಡ್ ಪ್ರಕರಣದಲ್ಲಿ ಬಳಕೆಯಾಗಿಲ್ಲ. ಇಲ್ಲಿ ಸ್ಥಳೀಯವಾಗಿ ತಯಾರಾದ ಕತ್ತಿ, ಚಾಕು, ಚೂರಿಗಳು ಬಳಕೆಯಾಗಿವೆ. ಒಂಬತ್ತು ಜನರ ಹತ್ಯೆಯಲ್ಲಿ ಪ್ರಧಾನ ಆಯುಧವಾಗಿ ಕತ್ತಿಯನ್ನು ಬಳಸಲಾಗಿದೆ. ಇಂಥ ಆಯುಧಗಳು ಇತರ ಸ್ಥಳಗಳಲ್ಲೂ ಪತ್ತೆಯಾಗಿವೆ – ಹೆಚ್ಚು ಪ್ರಮಾಣದಲ್ಲಲ್ಲ. ಆದರೆ ಈ ಸಂಘಟನೆಯನ್ನು ನಿಭಾಯಿಸಬಹುದು. ಕೈಮೀರಿ ಹೋಗುವ ಸಂಭವವಿಲ್ಲ. ಸರಕಾರ ಪರಿಣಾಮಕಾರಿ ಕ್ರಮ ಕೈಗೊಳ್ಳದಿರಲೂ ಕಾರಣವಿದೆ. ಕಳೆದ ಚುನಾವಣೆಯ ಸಂದರ್ಭದಲ್ಲಿ ಈ ಎನ್‌ಡಿಎಫ್ ಮುಸ್ಲಿಂ ಲೀಗ್ ಏಜೆನ್ಸಿಯ ಮೂಲಕ, ಎಡಪಕ್ಷಗಳ ವಿರುದ್ಧ ಸಾಧ್ಯವಿದ್ದ ಎಲ್ಲ ಅಣಿಗಳನ್ನೂ ಸಜ್ಜು ಗೊಳಿಸಿತ್ತು. ಆವರೆಗೆ ಯುಡಿಎಫ್‌ಗೆ ವಿರೋಧವಾಗಿದ್ದ ಪಿಡಿಪಿ, ರಾಜಕೀಯ ಪಕ್ಷವಾಗಿ ಕಳೆದ ಚುನಾವಣೆಯಲ್ಲಿ ಯುಡಿಎಫ್‌ಗೆ ಬೆಂಬಲ ನೀಡಿತ್ತು. ಇದಕ್ಕೂ ಕಾರಣವಿದೆ. ಜೈಲಿನಲ್ಲಿದ್ದ ಮದನಿಯನ್ನು ಬಿಡುಗಡೆಗೊಳಿಸುವುದಕ್ಕೆ ಪ್ರತಿಫಲವಾಗಿ ನೀಡಿದ ಬೆಂಬಲ ಇದು. ಬಿಡುಗಡೆ ಕುರಿತು ಮುಖ್ಯಮಂತ್ರಿ ಅಂತೋಣಿ ಹಾಗೂ ಕಾಂಗ್ರೆಸ್ ನೇತಾರರಿಂದ ಸಹ ಆಶ್ವಾಸನೆ ದೊರಕಿತ್ತಂತೆ. ಆಗ ಪಿಡಿಪಿ, ಎನ್‌ಡಿಎಫ್ ಮತ್ತು ಆರೆಸ್ಸೆಸ್ – ಇವೆಲ್ಲವೂ ಕಾಂಗ್ರೆಸ್ಸಿಗೇ ಬೆಂಬಲ ನೀಡಿದ್ದವು. ಎನ್‌ಎಸ್‌ಎಸ್ (ನಾಯರ್ಸ್ ಸರ್ವೀಸ್ ಸೊಸೈಟಿ) ತಟಸ್ಥವಾಗಿ ಉಳಿಯಿತು. ಎಸ್‌ಎನ್‌ಡಿಪಿ (ಶ್ರೀ ನಾರಾಯಣ ಗುರು ಧರ್ಮ ಪರಿಪಾಲನ) – ಯುಡಿಎಫ್‌ಗೆ ಪರೋಕ್ಷ ಬೆಂಬಲ ನೀಡಿತು. ಇನ್ನು ಕ್ರೈಸ್ತರ ಚರ್ಚ್ ಅಂತೂ ಸದಾ ಕಾಂಗ್ರೆಸ್ಸಿಗೆ ಬೆಂಬಲ ನೀಡುತ್ತ ಬಂದಿದೆ. ಇಂಥ ಸಂದರ್ಭದಲ್ಲಿ ಸರ್ಕಾರಕ್ಕೆ ಏನಾದರೂ ಸಮಸ್ಯೆ ಎದುರಾದಾಗ ಮೇಲಿನ ಯಾವುದೇ ಸಮುದಾಯಕ್ಕೆ ಬಾಧಕವಾಗುವಂಥ ಕ್ರಮ ಕೈಗೊಳ್ಳಲು ಸಾಧ್ಯವಾಗುವುದಿಲ್ಲ. ಎರಡನೇ ಮಾರಾಡ್ ಪ್ರಕರಣ ಮೊದಲನೆಯದಕ್ಕೆ ಪ್ರತೀಕಾರ ಕ್ರಮವಾಗಿತ್ತು ಎಂದೆನಲ್ಲ. ಅಂತೋಣಿ ಸರಕಾರ ಇಡೀ ಒಂದು ವರ್ಷ ನಿಷ್ಕ್ರಿಯವಾಯಿತು. ಆಪಾದಿತರನ್ನು ಬಂಧಿಸಿ ಅವರ ಮೇಲೆ ಕ್ರಮ ಜರುಗಿಸಲಿಲ್ಲ. ತಪ್ಪು ಮಾಡಿದವರಿಗೆ ಸಕಾಲದಲ್ಲಿ ಶಿಕ್ಷೆ ವಿಧಿಸಿದ್ದ ಪಕ್ಷದಲ್ಲಿ ಇಂದಿನ ಪ್ರತೀಕಾರ ಪ್ರಕರಣ ಜರುಗುತ್ತಿರಲಿಲ್ಲ.



ಜಿ. ರಾಮಕೃಷ್ಣ, ಪಿ. ಕೆ. ವಾಸುದೇವನ್ ನಾಯರ್, ಸಿ. ಆರ್. ಕೃಷ್ಣರಾವ್, ಆರ್. ಎಸ್. ರಾಜಾರಾಮ್

**ಜಿಆರ್** : ಸಂತ್ರಸ್ತರಿಗೆ ಪುನರ್ವಸತಿ ಕಲ್ಪಿಸಲು ಪ್ರಯತ್ನಗಳು ನಡೆದುವೆ ?

**ಪಿಕೆವಿ** : ಈ ಸಂದರ್ಭದಲ್ಲಿಯೂ ಮುಸ್ಲಿಂ ಲೀಗ್ ಎಚ್ಚರಿಕೆಯಿಂದಲೇ ವರ್ತಿಸಿತು ಎಂದು ಹೇಳಬಲ್ಲೆ. ಮುಸ್ಲಿಂ ಲೀಗ್ ಕಾಂಗ್ರೆಸ್ಸಿನ ಒಳಜಗಳಗಳ ವಿರುದ್ಧ ಸರ್ಕಾರಕ್ಕೆ ರಕ್ಷೆಯಾಗಿ ನಿಂತಿರುವ ಎರಡನೇ ದೊಡ್ಡ ಪಕ್ಷ. ಆದರೆ ಸರಕಾರದ ನಿಧಾನ ಪ್ರಕ್ರಿಯೆಯನ್ನು ಪ್ರತಿಭಟಿಸಿ, ಸಚಿವ ಸಂಪುಟದ ಸದಸ್ಯರಾದ ಮುಸ್ಲಿಂ ಲೀಗಿನ ಕುಂಞಾಲಿ ಕುಟ್ಟಿಯವರು, ಅಂತೋಣಿಯವರ ಮೇಲೆ ಆಪಾದನೆ ಹೊರಿಸಿ ಬಹಿರಂಗ ಹೇಳಿಕೆ ನೀಡಿದರು. ಸಂತ್ರಸ್ತ ಮಾರಾಡು ವಾಸಿಗಳಿಗೆ ಜುಲೈ ೧೫ರೊಳಗೆ ಪುನರ್ವಸತಿ ಕಲ್ಪಿಸಿಕೊಡುವಂತೆ ಒತ್ತಾಯದ ದನಿಯಲ್ಲಿ ಹೇಳಿಕೆ ನೀಡಿದರು. ಅದಕ್ಕೆ ಪ್ರತಿಕ್ರಿಯೆಯಾಗಿ ಅಂತೋಣಿಯವರು ತೊಗಾಡಿಯಾ ಭಾಷೆಯಲ್ಲಿ ಮಾತನಾಡಲು ಯಾರಿಗೂ ಅವಕಾಶ ನೀಡುವುದಿಲ್ಲ ಎಂದು ಎಚ್ಚರಿಕೆ ನೀಡಿದರು.

ಅಂತೋಣಿ ಒಳ್ಳೆಯ ವ್ಯಕ್ತಿ, ಹೋರಾಟಗಾರ, ಸೋನಿಯಾ ಗಾಂಧಿಯವರ ವಿಶ್ವಾಸಕ್ಕೆ ಪಾತ್ರರಾದವರು. ಆದರೆ ಕೋಮುವಾದದ ಪ್ರಶ್ನೆ ಬಂದಾಗ, ಆರ್ಥಿಕ ವಿಷಯಗಳ ಬಗ್ಗೆ ಸಹ ಅವರ ನಿಲುವು ಅಪಾಯಕಾರಿಯಾದದ್ದು. ಮಾರಾಡು ಪ್ರಕರಣದ ನಂತರ ಸಚಿವ ಸಂಪುಟದ ಸದಸ್ಯರು, ಇತರ ನಾಯಕರು ಅಲ್ಲಿಗೆ ಭೇಟಿ ನೀಡಿದ್ದರಷ್ಟೆ. ಆದರೆ ಮುಸ್ಲಿಂ ನಾಯಕರು ಮಾತ್ರ ಅಲ್ಲಿಗೆ ಭೇಟಿ ನೀಡಬಾರದೆಂಬ ಆರೆಸ್ಸೆಸ್ ಒತ್ತಡಕ್ಕೆ ಅಂತೋಣಿ ಮಣಿದರು. ಆಗ ಕುಂಞಾಲಿ ಕುಟ್ಟಿಯವರು – ಮೊದಲ ಹೆಜ್ಜೆಯೇ ತಪ್ಪು ಹೆಜ್ಜೆ ಎಂದರು. ಆರೆಸ್ಸೆಸ್ ಸಂಬಂಧದಲ್ಲಿ ಅಂತೋಣಿಯವರು ರಾಜಿ ಮನೋಭಾವ ತಳೆದರು.

**ಜಿಆರ್** : ಅಂತೋಣಿಯವರ ಈ ನಿಲುವಿನ ಹಿನ್ನೆಲೆಯಲ್ಲಿ ಎಡಪಕ್ಷಗಳ ಪಾತ್ರವೇನು ?

**ಪಿಕೆವಿ** : ಕೋಮುವಾದಿಗಳನ್ನು ತೃಪ್ತಿಪಡಿಸುವಂಥ ಅಂತೋಣಿಯವರ ನಿಲುವನ್ನು ನಾವು ವಿರೋಧಿಸಿದ್ದೇವೆ. ಸೂಕ್ತಕ್ರಮ ಕೈಗೊಳ್ಳುವ ಅವರ ಆಶ್ವಾಸನೆಗಳು ಪರಿಣಾಮಕಾರಿಯಾಗಿಲ್ಲ. ಪ್ರತೀಕಾರದ ಭಯದಿಂದ ಮನೆಮಠ ತೊರೆದುಹೋದ ಐದುನೂರಕ್ಕೂ ಹೆಚ್ಚು ಮಂದಿ ಮಾರಾಡು ವಾಸಿಗಳು ನಿರಾಶ್ರಿತರಂತೆ ಶಿಬಿರಗಳಲ್ಲಿದ್ದಾರೆ. ದಂಗೆಕೋರರು ಪೊಲೀಸರ ಎದುರಿನಲ್ಲಿಯೇ ಅವರ ಮನೆಗಳನ್ನು ಲೂಟಿ ಮಾಡಿದ್ದಾರೆ. ಅವರಿಗೆ ಏನೇನೂ ಉಳಿದಿಲ್ಲ. ಆಗ ಮುಸ್ಲಿಮರ ಕೆರಳಿದ ಭಾವನೆಗಳನ್ನು ಶಮನ ಮಾಡುವ ರೀತಿಯಲ್ಲಿ ಅಂತೋಣಿಯವರು ಮಲಪ್ಪುರದಲ್ಲಿರುವ ಮುಸ್ಲಿಂ ಧಾರ್ಮಿಕ ನಾಯಕರಲ್ಲಿಗೆ ಓಡಿದರು. ಅದು ಒಂದು ರೀತಿಯಲ್ಲಿ ಮುಸ್ಲಿಮರನ್ನು ತೃಪ್ತಿ ಪಡಿಸುವ ಪ್ರಯತ್ನ. ಅದೇ ವೇಳೆ, ತೊಗಾಡಿಯಾನ ಅರಚಾಟಗಳ ಬಗ್ಗೆ ಚಕಾರವೆತ್ತಲಿಲ್ಲ. ಆತ ಕನ್ಯಾಕುಮಾರಿಯಿಂದ ಪೊಲೀಸರ ರಕ್ಷಣೆಯಲ್ಲಿ ಬಂದ. ಕೋಮುಭಾವನೆಗಳನ್ನು ಕೆರಳಿಸುವಂಥ ಉದ್ರೇಕಕಾರಿ ಭಾಷಣ ಮಾಡಿದ. ಆ ಉದ್ರೇಕದ ಭಾಷಣವನ್ನು ಆಕ್ಷೇಪಿಸದ ಸರಕಾರ, ಆತನ ಮೇಲೆ ಧ್ವನಿವರ್ಧಕ ಬಳಸಿದ ಸಣ್ಣ ಪ್ರಕರಣ ದಾಖಲಿಸಿಕೊಂಡು ನಗೆಪಾಟಲಿಗೀಡಾಯಿತು.

**ಜಿಆರ್** : ಫಾದರ್ ಸ್ಟೇನ್ಸ್ ಹತ್ಯೆಗೆ ಸಂಬಂಧಿಸಿದಂತೆ ಅಂತೋಣಿಯವರು ಯಾವ ರೀತಿಯ ಪ್ರತಿಕ್ರಿಯೆ ತೋರಿಸಿದರು ?

**ಪಿಕೆವಿ** : ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಬಾಬರಿ ಮಸೀದಿ ಧ್ವಂಸದ ಸಂದರ್ಭದಲ್ಲಿ ಸಹ, ಅಲ್ಪಸಂಖ್ಯಾತರು ಬಹುಸಂಖ್ಯಾತರ ಭಾವನೆಗಳನ್ನು ಅರ್ಥ ಮಾಡಿಕೊಂಡು ಸಹಬಾಳ್ವೆ ನಡೆಸಬೇಕು ಎಂಬ ಧಾಟಿಯಲ್ಲಿ ಅಂತೋಣಿ ಪ್ರತಿಕ್ರಿಯೆ ತೋರಿಸಿದ್ದರು. ಹೀಗೆ, ಮೂಲಭೂತವಾದಿಗಳ ಯಾವುದೇ ದೌರ್ಜನ್ಯಗಳ ಬಗ್ಗೆ ಅಂತೋಣಿಯವರ ಪ್ರತಿಕ್ರಿಯೆ ತೀರಾ ಮೃದುವಾದುದಾಗಿತ್ತು.

ಕೇರಳದಲ್ಲಿ ಮತ್ತೊಂದು ದುಷ್ಟ ಪ್ರಕರಣ ನಡೆದಿದೆ. ಇಡುಕ್ಕಿ ಅಣೆಕಟ್ಟೆ ಕಟ್ಟಿದ ಸಂದರ್ಭದಲ್ಲಿ ಅದರ ಹಿನ್ನೀರು ಪ್ರದೇಶದಲ್ಲಿದ್ದ ಒಂದು ದೇವಾಲಯ ಮುಳುಗಡೆಯಾಯಿತು. ಆಗ ವಿದ್ಯುಚ್ಛಕ್ತಿ ಇಲಾಖೆಯವರು ತಮ್ಮ ವೆಚ್ಚದಲ್ಲಿ ಆ ದೇವಾಲಯವನ್ನು ಬೇರೆಡೆಗೆ ಸ್ಥಳಾಂತರಿಸಿ ಪೂಜೆ ಪುನಸ್ಕಾರಕ್ಕೆ ಅವಕಾಶ ಮಾಡಿಕೊಟ್ಟರು. ಅಂದಿನಿಂದ ಜನರು ಅಲ್ಲಿಯೇ ಪೂಜೆ ಮಾಡುತ್ತ ಬಂದಿದ್ದಾರೆ. ಈ ಬೇಸಿಗೆಯಲ್ಲಿ ಅಣೆಕಟ್ಟೆಯಲ್ಲಿ ನೀರು ಕಡಿಮೆಯಾದಾಗ ವಿಹಿಂಪದವರು ಆ ಹಳೆಯ ಜಾಗದಲ್ಲಿ ಒಂದು ದೇವಾಲಯ ನಿರ್ಮಿಸಿದರು. ಇದಕ್ಕೆಲ್ಲ ಹೇಗೆ ಅವಕಾಶವಾಯಿತು ಎಂದು ಕೇಳಿದರೆ, ಅಂತೋಣಿಯವರು ಆಪಾದನೆಯನ್ನು ಬೇರೆಯವರ ತಲೆಯ ಮೇಲೆ ಹೊರಿಸುತ್ತಾರೆ. ಮಳೆ ಬಂದು ಅಣೆಕಟ್ಟೆ ತುಂಬಿದಾಗ ಆ ದೇವಾಲಯ ಮತ್ತೆ ಮುಳುಗಡೆಯಾಗುತ್ತದೆ. ಆಗ ವಿಹಿಂಪದವರು ಏನಾದರೂ ದೇವಾಲಯ ಮುಳುಗಡೆಯಾಗಲು ಬಿಡೆವು ಎಂದು ಒತ್ತಾಯ ತರಬಹುದು ಅಥವಾ ನೀರು ಅಷ್ಟರವರೆಗೆ ತುಂಬಿದ ನಂತರ ಅಣೆಕಟ್ಟೆಯ ತೂಬುಗಳನ್ನು ತೆರೆಯಬೇಕೆಂದು ಪಟ್ಟು ಹಿಡಿಯಬಹುದು. ಅಂಥ ಪರಿಸ್ಥಿತಿ ಉಂಟಾದರೆ ಅಣೆಕಟ್ಟೆಯಲ್ಲಿ ಶೇ. ೩೫ರಷ್ಟು ನೀರಿನ ಕೊರತೆಯಾಗುತ್ತದೆ ಎಂಬುದು ಇಲಾಖೆಯವರ ಅಭಿಪ್ರಾಯ. ಹೀಗೆ ಅಂತೋಣಿಯವರು ಮೊದಲಿನಿಂದಲೂ ಮೂಲಭೂತವಾದಿಗಳನ್ನು ತೃಪ್ತಿಪಡಿಸುವ ನಿಲುವನ್ನೇ ಅನುಸರಿಸುತ್ತಿದ್ದಾರೆ.

**ಜಿಆರ್** : ಮೂಲಭೂತವಾದಿಗಳನ್ನು ತೃಪ್ತಿಪಡಿಸುವ ಇಂಥ ನಿಲುವಿನಿಂದ ಎಡಪಕ್ಷಗಳಿಗೆ ತೊಡಕಾಗಬಹುದೆ ?

**ಪಿಕೆವಿ** : ಹಾಗೆಂದು ನಾನು ಭಾವಿಸುವುದಿಲ್ಲ. ಕೇರಳದಲ್ಲಿ ಸಂಘಪರಿವಾರ ಅಷ್ಟು ಬಲವಾಗಿಲ್ಲ. ಆದರೆ, ಕೇರಳದಲ್ಲಿ ಎರಡು ಪ್ರಬಲ ಸಮುದಾಯಗಳಾಗಿರುವ ಎನ್‌ಎಸ್‌ಎಸ್ ಮತ್ತು ಎಸ್‌ಎನ್‌ಡಿಪಿಯ ಪ್ರಭಾವ ಪರಿಸ್ಥಿತಿಯನ್ನು ಸ್ವಲ್ಪ ಏರುಪೇರಾಗಿಸಬಹುದು. ಬಿಜೆಪಿ

ಸಮುದಾಯಗಳ ಬೆಂಬಲ ಗಳಿಸಲು ಪ್ರಯತ್ನಿಸಿದೆ. ಸಫಲವಾಗಲಿಲ್ಲ. ಆದರೆ ಚಾತುರ್ವರ್ಣ್ಯ ವ್ಯವಸ್ಥೆಯ ವಿರುದ್ಧ ಹೋರಾಡಿದ ಎಸ್‌ಎನ್‌ಡಿಪಿಯ ಅಧ್ಯಕ್ಷರು ವರಮಾನ ತೆರಿಗೆಯ ಪ್ರಕರಣದಲ್ಲಿ ಸಿಕ್ಕಿಕೊಂಡಿದ್ದು, ಅದರಿಂದ ಪಾರಾಗಲು ಬಿಜೆಪಿಗೆ ಬೆಂಬಲ ಸೂಚಿಸುವ ತಂತ್ರ ಅನುಸರಿಸಬಹುದು. ಅನುಭವದಿಂದ ಹೇಳುವುದಾದರೆ, ಎಲ್‌ಡಿಎಫ್ ಅಧಿಕಾರದಲ್ಲಿರುವಾಗ ಕೋಮು ಶಕ್ತಿಗಳು ತಲೆ ಎತ್ತುವುದಿಲ್ಲ. ಯುಡಿಎಫ್ ಅಧಿಕಾರಕ್ಕೆ ಬಂದ ಕೂಡಲೇ ಬಿರುಸಿನ ಚಟುವಟಿಕೆ ನಡೆಸುತ್ತವೆ. ಕೋಮುವಾದಿ ಶಕ್ತಿಗಳು ಸಣ್ಣಪುಟ್ಟ ಕಿರುಕುಳ ಉಂಟುಮಾಡಬಹುದಲ್ಲದೆ, ಸಂಘಪರಿವಾರ ಎಡಶಕ್ತಿಗಳನ್ನು ಎದುರಿಸುವಷ್ಟು ಬಲ ಗಳಿಸಲಾರದು.

**ಜಿಆರ್** : ರಾಜಕೀಯದಿಂದ ಸಾಂಸ್ಕೃತಿಕ ವಿಷಯಗಳಿಗೆ ಬರೋಣ. ಕೇರಳದ ಜನಜೀವನವನ್ನು ರೂಪಿಸುವಲ್ಲಿ ಸಾಹಿತ್ಯ ಮತ್ತು ರಂಗಭೂಮಿ ಮಹತ್ವದ ಪಾತ್ರ ವಹಿಸಿದುದನ್ನು ಬಲ್ಲೆವು. ಇಂದಿನ ಪರಿಸ್ಥಿತಿ ಹೇಗಿದೆ ?

**ಪಿಕೆವಿ** : ಪ್ರಗತಿಶೀಲ ಲೇಖಕರ ಸಂಘ ಮತ್ತು ಕೆ.ಪಿ.ಎ.ಸಿ. (ಕೇರಳ ಪೀಪಲ್ಸ್ ಆರ್ಟ್ಸ್ ಕ್ಲಬ್) ಮಹತ್ವದ ಪಾತ್ರ ವಹಿಸಿದುವು. ಕಾಲಕ್ಕೆ ತಕ್ಕಂತೆ ಈ ಕ್ಷೇತ್ರಗಳಲ್ಲೂ ಬದಲಾವಣೆಗಳಾಗಿವೆ. ಅನೇಕ ಲೇಖಕರು, ಕವಿಗಳು ಪಕ್ಷದ ಸದಸ್ಯರಾಗಿದ್ದರು. ಇತರ ಅನೇಕ ಲೇಖಕರು ಎಡಪಂಥದ ವಿಚಾರಗಳೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದರು. ಕೆಪಿಎಸಿ ಪ್ರಾರಂಭಿಸಿದ ರಂಗಭೂಮಿ ಚಳುವಳಿ ಸಹ ಮಹತ್ವದ್ದೆ. ಅದು ಕಳೆದ ಐವತ್ತು ವರ್ಷಗಳಿಂದ ಕಾರ್ಯಪ್ರವೃತ್ತವಾಗಿದೆ. ಹಲವು ಅದ್ಭುತ ಜನಪರ ನಾಟಕಗಳನ್ನು ಪ್ರದರ್ಶಿಸಿದೆ. ಈಗಲೂ ಚಟುವಟಿಕೆ ನಡೆಸುತ್ತಿದೆ. ಆಗಿನ ಕೇರಳದ ಎಲ್ಲ ರಂಗಮಂಚಗಳು ಎಡಒಲವಿನವಾಗಿದ್ದವು. ಈಗ ಅಂಥ ಚಳವಳಿ ಇಳಿಮುಖವಾಗಿದೆ. ಜೊತೆಗೆ ಜನರ ಅಭಿರುಚಿಯೂ ಬದಲಾಗಿದೆ. ಕೆಪಿಎಸಿ ಈಗಲೂ ವರ್ಷಕ್ಕೊಂದಾದರೂ ಹೊಸ ನಾಟಕ ಪ್ರದರ್ಶಿಸುತ್ತದೆ. ಅದು ಪ್ರದರ್ಶಿಸಿದ ಕನಿಯಾಪುರಂ ರಾಮಚಂದ್ರನ್ ರವರ 'ಭಗವಾನ್ ಕಾಲಂ ಮಾರುನ್ನು' – ಎಂಬ ನಾಟಕ ವಿಹೆಚ್‌ಪಿಯವರ ಸೋಗಲಾಡಿತನಕ್ಕೆ ಹಿಡಿದ ಕನ್ನಡಿಯಂತಿದ್ದು ಅವರನ್ನು ಕೆರಳಿಸಿದ್ದುಂಟು. ಅವರು ನಾಟಕ ನಡೆಯಲು ಬಿಡದೆ ಅಡ್ಡಿಪಡಿಸಿದಾಗ, ನಮ್ಮೊಂದಿಗೆ ಸಿಪಿಎಂ ಸಂಗಾತಿಗಳೂ ಸೇರಿ ಅವರನ್ನು ಎದುರಿಸಿ ಹಿಮ್ಮೆಟ್ಟಿಸಿದ್ದುಂಟು. ಈ ಪ್ರಕರಣ ಎರಡು ಕಮ್ಯುನಿಸ್ಟ್ ಪಕ್ಷಗಳನ್ನೂ ಒಂದುಗೂಡಿಸಿತು !

'ಕಥಾಪ್ರಸಂಗ' ಎಂಬ ಮಾಧ್ಯಮವೂ ಜನಪ್ರಿಯವಾಗಿದೆ. ವಿದ್ಯಾರ್ಥಿ ಚಳುವಳಿಯಿಂದ ಬಂದ ಸಂಗಾತಿ ಸಾಂಬಶಿವನ್ ಸಮಕಾಲೀನ ವಿಷಯಗಳನ್ನು ಕಥಾ ಪ್ರಸಂಗದ ಮೂಲಕ ಬಿತ್ತರಿಸುತ್ತ ಸಾವಿರಾರು ಪ್ರೇಕ್ಷಕರನ್ನು ಆಕರ್ಷಿಸುತ್ತಾರೆ. ಸಂತೆಗಳಲ್ಲಿ, ಜಾತ್ರೆಗಳಲ್ಲಿ ಸಾಮಾನ್ಯ ಜನರ ಮಧ್ಯೆ ನಡೆಯುವ ಕಥಾಪ್ರಸಂಗವು ಹಾಡು, ಸಂಭಾಷಣೆ, ಹಾಸ್ಯ ಇತ್ಯಾದಿ ಎಲ್ಲವನ್ನೂ ಒಳಗೊಂಡಿರುತ್ತದೆ. ಒಬ್ಬನೇ ವ್ಯಕ್ತಿ ಇದನ್ನು ಅಭಿನಯಿಸುತ್ತಾನೆ. ಈಗ ಸದಾನಂದ ಈ ಕ್ಷೇತ್ರದಲ್ಲಿ ಮುಂದುವರಿದಿದ್ದಾರೆ. ಅಭಿರುಚಿಯ ಬದಲಾವಣೆ ಚಲನಚಿತ್ರರಂಗಕ್ಕೂ ಅನ್ವಯಿಸುತ್ತದೆ. ಈಗ ಕೈರಳಿ ಚಾನೆಲ್‌ನಿಂದಾಗಿ ಸುದ್ದಿ ಪ್ರಸಾರದಲ್ಲಿ ಸ್ವಲ್ಪ ಬದಲಾವಣೆ ಉಂಟಾಗಿದೆ.

ಕೇರಳದ ಅತ್ಯಂತ ಖ್ಯಾತ ಪ್ರಕಾಶಕರು ಈಗ ಪುಸ್ತಕ ಮಾರಾಟ ಇಳಿಮುಖವಾಗಿದೆ ಎನ್ನುತ್ತಾರೆ. ಹಿಂದಿನ ಸಾಹಿತ್ಯ ಪ್ರಗತಿಶೀಲ, ರಾಷ್ಟ್ರೀಯವಾದ ಮುಂತಾದ ವಿಚಾರಗಳನ್ನು ಒಳಗೊಂಡಿರುತ್ತಿತ್ತು. ಒಟ್ಟಾರೆ ಸಾಹಿತ್ಯ ಎಡಪಂಥೀಯ ವಿಚಾರಧಾರೆಯಿಂದ ಪ್ರಭಾವಿತವಾಗಿತ್ತು. ಕಾವ್ಯದಲ್ಲಿ ಮಾತ್ರ ಹಳೆಯ ಸತ್ವ ಉಳಿದುಕೊಂಡಿದೆ.

**ಜಿಆರ್** : ಮತಾಂತರದ ವಿಷಯಕ್ಕೆ ಬರೋಣ. ಧಾರ್ಮಿಕ ಮತಾಂತರದ ವಿಷಯದಲ್ಲಿ ಕೇರಳದ ಅನುಭವ ಏನು ?

**ಪಿಕೆವಿ** : ವಿಹೆಚ್‌ಪಿಯಂಥ ಸಂಘಟನೆಗಳು ಈ ವಿಷಯವನ್ನು ಉತ್ಪ್ರೇಕ್ಷೆ ಮಾಡಿ ಅದರಿಂದ ಸ್ವಲ್ಪಮಟ್ಟಿನ ಯಶಸ್ಸು ಗಳಿಸಿದರೂ ಹೆಚ್ಚಿನ ಹಾನಿಯೇನೂ ಉಂಟಾಗಲಿಲ್ಲ. ಬಲಾತ್ಕಾರ ಮತಾಂತರವೇನೂ ನಡೆದಿಲ್ಲ. ಹೆಚ್ಚು ಸಂಖ್ಯೆಯಲ್ಲಿ ಮತಾಂತರ ನಡೆದಿದ್ದರೆ ಅದು ಸ್ವಾತಂತ್ರ್ಯಕ್ಕೆ ಮುಂಚೆ ಎನ್ನಬಹುದು. ಅದಕ್ಕೆ ಮುಖ್ಯಕಾರಣ ಹಿಂದುಗಳಲ್ಲಿಯ ಜಾತಿ ಭೇದ.

**ಜಿಆರ್** : ಕೃಷಿ ಭೂಮಿಯ ಪ್ರಮಾಣ ತಗ್ಗುತ್ತಿದೆಯೆಂದು ಕೇಳಿದ್ದೇವೆ. ಇದಕ್ಕೆ ಕಾರಣವೇನು ?

**ಪಿಕೆವಿ** : ಕ್ರಮೇಣ ಭತ್ತದ ಬೆಲೆ ಇಳಿಯುತ್ತ ಬಂದ ಕಾರಣ ರೈತರು ನಗದು ಬೆಳೆಗಳ ಕಡೆ ಹೊರಳುವಂತಾಯಿತು. ಸರಕಾರ ಭತ್ತಕ್ಕೆ ಯುಕ್ತ ಬೆಲೆ ನೀಡಿ ಖರೀದಿ ಮಾಡುವಲ್ಲಿ ವಿಫಲವಾಯಿತು. ಪಾಲಘಾಟ್ ಮತ್ತು ಕುಟ್ಟನಾಡು ಭತ್ತ ಹೆಚ್ಚು ಬೆಳೆಯುವ ಪ್ರದೇಶಗಳಾಗಿದ್ದು, ಸರಕಾರದ ವಿಫಲತೆಯಿಂದ ರೈತರು ಬೇರೆ ಮಾರ್ಗಗಳನ್ನು ಅರಸುವಂತಾಯಿತು. ರಬ್ಬರ್ ಕೃಷಿಗೆ ಹೆಚ್ಚಿನ ಮಾನ್ಯತೆ ದೊರಕಿತು. ಇದು ಸಹ ಒಮ್ಮೆಲೇ ಬೆಲೆ ಇಳಿತದಿಂದ ತೊಡಕಿಗೆ ಸಿಕ್ಕುವಂತಾಯಿತು. ನುಸಿಯ ಕಾಟದಿಂದ ಕೇರಳದ ಪರಂಪರೆಯ ಬೆಳೆಯಾದ ತೆಂಗು ಸಹ ರೈತರ ಬವಣೆಗೆ ಮತ್ತೊಂದು ಕಾರಣವಾಯಿತು. ಕೃಷಿ ವಿಶ್ವವಿದ್ಯಾಲಯಗಳು ಬರಿಯ ಉಪದೇಶ ನೀಡುತ್ತ ಹೋದುವಲ್ಲದೆ ತಮ್ಮ ಸಂಶೋಧನೆಗಳ ಮೂಲಕ ರೈತರ ಸಹಾಯಕ್ಕೆ ಬರಲಿಲ್ಲ. ಅಲ್ಲದೆ ತೆಂಗು ಬೆಳೆಯುವ ಇತರ ದೇಶಗಳಲ್ಲಿ ಉತ್ಪಾದನೆ ಹೆಚ್ಚಿದ್ದು, ನಮ್ಮ ಉತ್ಪಾದನೆ ತಗ್ಗಿದುದೂ ರೈತರ ಕಷ್ಟ ಹೆಚ್ಚುವುದಕ್ಕೆ ಕಾರಣವಾಯಿತು. ಜಾಗತೀಕರಣ, ಉದಾರೀಕರಣದ ಪರಿಣಾಮವಾಗಿ ಕೃಷಿಕರ ನಗದು ಬೆಳೆಗಳಿಂದ ಬರುತ್ತಿದ್ದ ಆದಾಯ ಇಳಿಮುಖವಾಯಿತು. ಒಮ್ಮೆ ಟನ್ನಿಗೆ ೨೦ ಸಾವಿರ ದೊರಕುತ್ತಿದ್ದು ಮೆಣಸಿನ ಬೆಲೆ ಈಗ ೭ ಸಾವಿರಕ್ಕೆ ಇಳಿದಿದೆ. ಅದೇ ಪರಿಸ್ಥಿತಿ ಕಾಫಿಗೂ ಉಂಟಾಯಿತು. ನಗದು ಬೆಳೆಗಳನ್ನು ನಂಬಿದವರಿಗೆ ಹಾನಿ ಉಂಟಾಯಿತು. ಈಗ ಕೇಂದ್ರ ಸರಕಾರ ಇವರ ನೆರವಿಗೆ ಬರಬೇಕಾಗಿದೆ.

ಅಲ್ಲದೆ ಕೃಷಿ ಭೂಮಿಯ ಪ್ರಮಾಣ ತಗ್ಗಲು ಮತ್ತೊಂದು ಕಾರಣವಿದೆ. ಗಲ್ಫ್ ದೇಶಗಳಲ್ಲಿ ಹಣ ಸಂಪಾದನೆ ಮಾಡಿದ ಕೇರಳಿಗರು ಸಣ್ಣ ಮನೆಗಳಲ್ಲಿ ವಾಸಿಸಲು ಇಚ್ಛೆಸುವುದಿಲ್ಲ. ದೊಡ್ಡ ಮನೆಯ ಸುತ್ತಲೂ ಕೌಂಪೌಂಡ್ ಅನ್ನು ಅಪೇಕ್ಷಿಸುತ್ತಾರೆ. ಹೀಗೆ ಕೃಷಿ ಯೋಗ್ಯವಾದ ಭೂಮಿ ಬೇರೆ ಉಪಯೋಗಕ್ಕೆ ಬಳಸಲಾಗುತ್ತಿದೆ. ಆರ್ಥಿಕತೆಯ ಮೇಲೆ ಇದರ ಪ್ರಭಾವ ಗಣನೀಯವಾಗಿದೆ. ಇದರ ಬಗ್ಗೆ ಕೇರಳ ಎಚ್ಚೆತ್ತು ಕೊಳ್ಳುವ ಅಗತ್ಯವಿದೆ. ■

## ಯೋಗಪ್ರವೇಶ



ಹೊಸತು ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಡಾ॥ ಜಿ. ರಾಮಕೃಷ್ಣ ಅವರ 'ಯೋಗಪ್ರವೇಶ' ವಿಸ್ತರಿತ ಪುಸ್ತಕ ರೂಪದಲ್ಲಿ ಹಲವು ಅಪೂರ್ವ ಚಿತ್ರಗಳ ಸಹಿತ.

ಬೆಂಗಳೂರಿನ ಕನ್ನಡ ಭವನದ ನಯನ ಸಭಾಂಗಣದಲ್ಲಿ ತಾ॥ ೧೯-೧೦-೦೩ ಭಾನುವಾರ ಬೆಳಿಗ್ಗೆ ೧೦ ಕ್ಕೆ ಬಿಡುಗಡೆ. ಸರ್ವರಿಗೂ ಸ್ವಾಗತ.




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನ ಕಾರ್ಯಕ್ರಮದ ಮುಂದುವರಿಕೆಯಾಗಿ, ದಿನಾಂಕ ೨೫-೮-೦೩ರಂದು ಬೆಂಗಳೂರಿನ ಬೌರಿಂಗ್ ಆಸ್ಪತ್ರೆಯಲ್ಲಿ ಅಧೀಕ್ಷಕರಾದ ಡಾ॥ ಪಿ. ಎಂ. ಶೆಟ್ಟಿ ಅವರು ಪುಸ್ತಕ ಪ್ರದರ್ಶನ ಉದ್ಘಾಟಿಸಿದರು.

# ಪರಿಸರ ಧ್ವಂಸ

ಡಾ|| [illegible]ನಾಥ್ ಬಿ. ಪಿ.



**ಭೂ**ತಾಯಿ ನಮಗೆ ಏನೆಲ್ಲಾ ಕೊಟ್ಟಿಲ್ಲ? ಇರುವುದಕ್ಕೆ ಜಾಗ, ಕುಡಿಯಲು ನೀರು, ಸೇವಿಸಲು ಗಾಳಿ, ಕಣ್ಣಿಗೆ ಬೆಳಕು ಇತ್ಯಾದಿ. ಪ್ರಕೃತಿ ಈ ಭೂಮಿ ತಾಯಿಯ ಅಭಿವ್ಯಕ್ತಿಯಾಗಿ ಸಕಲ ಜೀವರಾಶಿಯ ಜೀವನಾನುಭವವಾಗಿದೆ. ಈ ಪ್ರಕೃತಿಯ ಆಳದಲ್ಲಿ ಆನಂದ ಅಷ್ಟೇ ಅಲ್ಲ, ಆಳವಾದ ಅನುಭವವಿದೆ. ಆಳವಾಗಿ ನೋಡಿದಷ್ಟೂ ಜೀವನದುದ್ದಕ್ಕು ಅದೆಷ್ಟೋ ಸಮಸ್ಯೆಗಳಿಗೆ ಪರಿಹಾರ ಸಿಗುತ್ತದೆ. ಅಂತಹ ಪ್ರಕೃತಿಯ ಸಮತೋಲನ ವಿಷಮಿಸುತ್ತಿರುವುದು ವಿಷಾದದ ಸಂಗತಿ. ಮಾನವ ನಾಗರಿಕತೆ ಬೆಳೆದಷ್ಟೂ ಆ ಬೆಳವಣಿಗೆಗೆ ಕಾರಣವಾದ ಪ್ರಕೃತಿಯೇ ಅವನತಿಗೀಡಾಗುತ್ತಿದೆ. ಬೆಳೆ ನೀಡಿದ ನೆಲ ಬಟ್ಟಬಯಲಾಗಿದೆ. ನಮ್ಮ ಸುತ್ತಮುತ್ತಲಿನ ಆಗುಹೋಗುಗಳನ್ನು ಗಮನಿಸುತ್ತಾ ಹೋದಂತೆ ಈ ಅನುಭವ ಭಾಸವಾಗುತ್ತದೆ.

ನಾಗರಿಕತೆ, ತ್ವರಿತವಾಗಿ ಬೆಳೆಯುತ್ತಿರುವ ನಗರಗಳನ್ನು ನೋಡುವಾಗ ಆ ಬೆಳವಣಿಗೆಗೆ ಅನುಸಾರವಾಗಿ ನಗರದ, ನಗರ ಹೊರವಲಯದ ಎಷ್ಟೋ ರಸ್ತೆಗಳನ್ನು ಹಿರಿದಾಗಿಸುವಾಗ ಅದೆಷ್ಟೋ ದಶಮಾನಗಳು ಕಂಡ ಹೆಮ್ಮರಗಳು ಬುಡ ಮೇಲಾಗುತ್ತಿವೆ. ಧೂಳು ಹೊಗೆಗಳ ನುಂಗಿಯೂ ನೆರಳೀವ ಮರಗಳು ಕ್ಷಣಮಾತ್ರದಲ್ಲಿ ರುಂಡಮುಂಡ ಬೇರಾಗಿ ಬೀಳುವುದನ್ನು ನೋಡುವಾಗ ಮೈ ನಡುಗುತ್ತದೆ. ಅದೆಂತಹ ಕೈ ಚಳಕ ಕ್ರೇನಿನದು ! ಆ ಮರವನ್ನಾಧರಿಸಿದ ಅದೆಷ್ಟು ಜೀವಸಂಕುಲಗಳು ನೆಲೆ ಇಲ್ಲದಾಗಿವೆ ! ಮರಿಗಳಿಗೆ ಕಾಳನ್ನುಣ್ಣಿಸಲು ಕಾಳನ್ನರಸಿ ಸಂಜೆ ಗೂಡು ಸೇರಲು ಹಾತೊರೆವ ಹಕ್ಕಿಗಳು ಗೂಡು, ಮೊಟ್ಟೆ, ಮರಿಗಳ ಕಳೆದುಕೊಂಡು ಚೀತ್ಕರಿಸುತ್ತವೆ. ಮರಿ ಮಕ್ಕಳ ಜೀವಾವಶೇಷವನ್ನು ಮುರಿದ ರೆಂಬೆ ಕೊಂಬೆಗಳಡಿ ಹುಡುಹುಡುಕುವ ಅವುಗಳ ಆ ಚೀತ್ಕಾರ ಹೃದಯ ವಿದ್ರಾವಕ. ಮುಂಜಾನೆ ಕೇಳುತ್ತಿದ್ದ ಕೋಗಿಲೆಯ ಕೂಗು ಇಂದು ಕೇಳುತ್ತಿಲ್ಲ. ಕಾಂಕ್ರೀಟ್ ಕಾಡಿಗೆ ಹೊಂದಿಕೊಂಡುಳಿದ ಗುಬ್ಬಿ-ಕಾಗೆಗಳಷ್ಟೇ ನಮ್ಮ ಪ್ರಕೃತಿಯ ಪಕ್ಷಿವರ್ಗ. ಎತ್ತರದ ಕಟ್ಟಡಗಳಿಗೆ ಜೋತುಬಿದ್ದ ಜೇನುಗಳು ಕೂಡ ಹೆದರಿಕೆಯ ಜೀವನ ನಡೆಸುತ್ತವೇನೋ ? ರಂಗನತಿಟ್ಟು ಮುಂತಾದ ಪಕ್ಷಿ ಧಾಮಗಳಲ್ಲಿ ನಮ್ಮ ಪ್ರಕೃತಿ ಪ್ರೇಮವ ಅರಸುತ್ತಾ, ಮೆರೆಸುತ್ತಾ ದೂರದಲ್ಲೆಲ್ಲೋ ಕಂಡೂ ಕಾಣದ ಪಕ್ಷಿಗಳನ್ನು ಕಂಡೆವೆಂದು ಭ್ರಮಿಸಿ ಕಾಫಿ ತಿಂಡಿ ತಿಂದು ವಾಪಾಸಾಗುತ್ತೇವೆ. ನಮ್ಮ ಮನೆಗಳ ಭಿತ್ತಿಗಳ ಮೇಲೆ ಚಿತ್ರಗಳ ಬರೆದು ಮೆರೆಸುವ ಪ್ರಕೃತಿ ಪ್ರೇಮ ನಮ್ಮದು. ಹಾಗೂ ಹೀಗೂ ಮರಗಳಿಲ್ಲದೇ ಸಣ್ಣ ಪುಟ್ಟ ಪೊದೆಗಳಲ್ಲಾದರೂ ಜೀವಿಸುವ ಹಕ್ಕಿಗಳಿಗೂ ಬದುಕುವ ಸ್ವಾತಂತ್ರ್ಯ ಇಲ್ಲವಾಯ್ತೇ ? ಆ ಪಕ್ಷಿಗಳನ್ನು ಹಿಡಿದು ಪಂಜರದಲ್ಲಿಟ್ಟು ಉರಿ ಬಿಸಿಲಲ್ಲಿ ಮಾರುತ್ತೇವಲ್ಲ! ಮಾರುವವರು ಕೆಲವರಾದರೆ ಅದನ್ನು ಕೊಳ್ಳುವ ಪಕ್ಷಿ ಪ್ರೇಮಿಗಳು ಹಲವರು. ಹಾಗೆ ಹಿಡಿದ ಪಕ್ಷಿಗಳನೇಕವು ಕಾಳು-ನೀರು ಸಿಗದೆ ಮಾರುವ ಮೊದಲೇ ಅಸುನೀಗುತ್ತವೆಂಬ ಸತ್ಯ ಅದೆಷ್ಟು ನಿಷ್ಠುರ !

ಪಕ್ಷಿಗಳ ಕತೆ ಹೀಗಾದರೆ, ಜಲಚರ ಜೀವಿಗಳ ಕತೆಯೂ ಕರುಣಾಜನಕ. ಕೈಗಾರಿಕೀಕರಣದ ತ್ಯಾಜ್ಯ ಕಲ್ಮಶಗಳಿಂದ ಕಲುಷಿತವಾದ ನೀರಿನಲ್ಲಿ ಅವು ಬದುಕುವುದಾದರೂ ಹೇಗೆ ? ಲಾಲ್‌ಬಾಗ್‌ನ ಚಿಕ್ಕ ಸರೋವರದಲ್ಲಿ ಮೀನುಗಳು ಸರ್ವತ್ರ ಸತ್ತ ಪ್ರಕರಣಗಳು ಅದೆಷ್ಟು. ಬನ್ನೇರುಘಟ್ಟದ ಪ್ರವೇಶದ್ವಾರದಲ್ಲಿ ಬರೆಯಲಾಗಿದೆ – 'ಪ್ರಪಂಚದ ಅತಿ ಕ್ರೂರ ಪ್ರಾಣಿಯನ್ನು ನೋಡಲು ಈ ಬಾಗಿಲನ್ನು ತೆರೆಯಿರಿ' ಎಂದು. ತೆರೆದರೆ ಕಾಣುವುದು ನಮ್ಮದೇ ಮುಖ, ಕನ್ನಡಿಯಲ್ಲಿ. ಇದು ಕಟುವಾದರೂ ಸತ್ಯ.

ನಗರಗಳ ಪಾಡು ಹೀಗಾದರೆ ಹಳ್ಳಿಗಳ ಕಥೆ ಇನ್ನೇನು ? ಭಾಷಣ ಮಾಡುವಾಗ 'ಭಾರತ ಹಳ್ಳಿಗಳ ದೇಶ', 'ಹಳ್ಳಿಗಳು ನಿಸರ್ಗ ಸಿರಿಯ ತವರೂರು' ಇತ್ಯಾದಿಯಾಗಿ ಆರಂಭಗೊಳ್ಳುವುದು ಸಹಜ ತಾನೆ ? ಅಲ್ಲಿ ಆಗುತ್ತಿರುವುದಾದರೂ ಏನು ? ಹೊಲ ತೋಟಗಳಿಗಾಗಿ ಕಾಡು ಕಡಿದು ನೆಲಸಮ ಮಾಡುವ ಕಾಲವೊಂದಿತ್ತು. ಬೆಳೆಯಾದರೂ ಬೆಳೆಯುತ್ತಿತ್ತು. ಆದರೀಗ ಹೊಲ ಗದ್ದೆಗಳು ಕ್ಷೀಣಿಸುತ್ತಾ ಬಂದು ಅಣಬೆಗಳಂತೆ ಮನೆಗಳು ತಲೆ ಎತ್ತಿ ನಿಂತಿವೆ. ಮನೆ ಕಟ್ಟಲು ಮರಗಳು ಉರುಳುವುದಷ್ಟೇ ಅಲ್ಲ, ಅಳಿದುಳಿದವು ಉರುವಲಾಗಿ ಸುಟ್ಟು ಭಸ್ಮವಾಗುತ್ತಿವೆ.

ಹಳ್ಳಿ-ಪಟ್ಟಣಗಳ ಇನ್ನೊಂದು ಪಿಡುಗು ಈ ಪ್ಲಾಸ್ಟಿಕ್; ಹೋದ ಹೋದೆಡೆ, ಪಾರ್ಕ್, ಪ್ರೇಕ್ಷಣೀಯ ಸ್ಥಳ ಎಲ್ಲೆಡೆ, ವಿವಿಧ ಬಣ್ಣಗಳಿಂದ ತೂರಾಡುತ್ತ ತನ್ನದೇ ಪ್ರಪಂಚ ಸೃಷ್ಟಿಸುವ ಪೆಡಂಭೂತ – ಈ ಜೀರ್ಣವಾಗದ ಪ್ಲಾಸ್ಟಿಕ್. ತಾತ ಮುತ್ತಾತರು ಬಳಸುತ್ತಿದ್ದ ಬಟ್ಟೆ ಚೀಲಗಳು ನಮಗೆ ಸರಿಬರುವುದಿಲ್ಲ. ವಿವಿಧ ಚಿತ್ರತಾರೆಗಳ ಮುದ್ರಿಸಿದ ಪ್ಲಾಸ್ಟಿಕ್ ಚೀಲಗಳೇ ಬೇಕು. ಕೈಬೀಸಿಕೊಂಡು ತರಕಾರಿ, ಕಾಳು, ಕಡ್ಡಿ ತರಲು ಹೋಗುವುದೇ ನಮ್ಮ ಅಭ್ಯಾಸ. ಪ್ಲಾಸ್ಟಿಕ್ ಹ್ಯಾಂಡ್‌ಬ್ಯಾಗ್‌ಗಳಲ್ಲಿ ತುಂಬಿಸಿಕೊಡುವುದು ವರ್ತಕರಿಗೆ ಅನಿವಾರ್ಯ. ಇದು ವಿಷವೃತ್ತ. ನಮ್ಮದೇ ಚೀಲಗಳನ್ನು ಕೊಂಡೊಯ್ದರೆ ಅಷ್ಟಾದರೂ ಪ್ಲಾಸ್ಟಿಕ್ ಬಳಕೆ ತಪ್ಪೀತು, ಹಾವಳಿ ನಿಂತೀತು.

ನಾಗರಿಕತೆ ಬೆಳೆದಂತೆ ಅವಶ್ಯಕತೆಗಳೂ ಹೆಚ್ಚುತ್ತಿವೆ ನಿಜ; ವಾಸಕ್ಕೆ ಮನೆಗಳು ಬೇಕು, ರಸ್ತೆಗಳು ಬೇಕು, ನೀರು-ವಿದ್ಯುತ್ ಪೂರೈಕೆಗೆ ಅಣೆಕಟ್ಟುಗಳು ಬೇಕು. ಅಂತಹ ಅಣೆಕಟ್ಟುಗಳಿಂದ ಅದೆಷ್ಟು ವಿಶಾಲ ಕಾಡುಗಳು, ಅದನ್ನವಲಂಬಿಸಿದ ಸಕಲ ಪ್ರಾಣಿ ಪಕ್ಷಿಗಳೂ ಜಲ ಸಮಾಧಿಯಾಗುತ್ತವೆ ! ಗೇರುಸೊಪ್ಪದ ಇತ್ತೀಚಿನ ಜಲ ವಿದ್ಯುತ್ ಯೋಜನೆಯಲ್ಲಿ ೬೦೦ಕ್ಕೂ ಮಿಗಿಲಾದ ಹೆಕ್ಟೇರ್ ವಿಸ್ತೀರ್ಣದ ಕಾಡು ಇಲ್ಲವಾಯ್ತು. ಎಚ್ಚೆತ್ತ ನಾವು ಅಭಯಾರಣ್ಯಗಳನ್ನೂ, ರಾಷ್ಟ್ರೀಯ ಉದ್ಯಾನಗಳನ್ನೂ ನಿರ್ಮಿಸಿ ಪ್ರಾಣಿಪಕ್ಷಿಗಳ ಹಿಡಿದಿಡುತ್ತೇವೆ ನಿಜ. ಆದರೆ ಅವು ಸಹಜತೆ ಕಳೆದುಕೊಂಡ, ಕೊಟ್ಟ ಕೂಳುಂಡು ಜೀವಿಸುವ ಅಸಹಾಯಕ ಶೋಪೀಸ್‌ಗಳಷ್ಟೆ. ನಮ್ಮನ್ನವಲಂಬಿಸಿದ ಅವು ನಮ್ಮ ಬೇಜವಾಬ್ದಾರಿ ನಡತೆಗೆ ಬಲಿಯಾಗುತ್ತವೆ – ಒರಿಸ್ಸಾದಲ್ಲಾದ ಹುಲಿಗಳ ಮಾರಣಹೋಮದಂತೆ. ಅವುಗಳ ಅಸಹಾಯಕತೆ ಉದ್ರೇಕವಾಗಿ ಪರಿಣಮಿಸಿದ ಎಷ್ಟೋ ಘಟನೆಗಳು ಆ ಮೂಕ ವೇದನೆಗೆ ಸಾಕ್ಷಿ. ಆನೆಗಳು ಬನ್ನೇರುಘಟ್ಟದ ಬಳಿ ಹೊಲ ನುಗ್ಗಿ ಹಾಳುಗೆಡಹುವ, ಹುಲಿ ಪ್ರೇಕ್ಷಕರ ಮೇಲೆ ಹಲ್ಲೆ ನಡೆಸಿ ಸಾಯಿಸಿದ ಘಟನೆಗಳು ಆಗಾಗ್ಗೆ ಕೇಳಿಬರುತ್ತವಲ್ಲವೆ ? ಆದರೆ ಈಗ ಅಷ್ಟಾದರೂ ಕಾಣಸಿಗುತ್ತವೆ ಪ್ರಾಣಿ ಪಕ್ಷಿಗಳು. ಮುಂದೆ ಮುಂದೆ ನಮ್ಮ ಮರಿಮಕ್ಕಳ ಕಾಲಕ್ಕೆ ಪ್ರಾಣಿ ಪಕ್ಷಿಗಳಲ್ಲದೆ, ಜಾತಿ ಮರಗಳನ್ನೂ ಚಿತ್ರಗಳಲ್ಲಿ ತೋರಿಸಬೇಕಾದೀತು ! ಕಬ್ಬನ್ ಪಾರ್ಕ್‌ನಲ್ಲಿ ಪ್ರದರ್ಶನಕ್ಕಿಟ್ಟು, ಫಲಕಗಳಲ್ಲಿ ಬರೆದು ತೂಗುಬಿಟ್ಟಂತೆ – 'ದಶಮಾನಗಳ ಹಿಂದಿನ ಮರದ ಪಳೆಯುಳಿಕೆ' ಮಾತ್ರ ಉಳಿದೀತು. ಅಥವಾ ಜಪಾನ್ ಮಾದರಿಯ 'ಕುಬ್ಜ ಮರಗಳು' – (ಬೋನ್‌ಸಾಯ್) ಅಸ್ತಿತ್ವಕ್ಕೆ ಬಂದಾವು.

೪೧ನೇ ಪುಟಕ್ಕೆ




# ಬಗ್ಗೆ ಜಾಗರೂಕರಾಗೋಣ

ಇತ್ತೀಚೆಗೆ ಏಡ್ಸ್ ಎಂಬ ಕಾಯಿಲೆಯ ವಿಷಯ ಬಹಳಷ್ಟು ಪ್ರಚಾರ ಪಡೆಯುತ್ತಿದೆ. ಡಿಸೆಂಬರ್ ತಿಂಗಳ ಮೊದಲನೇ ದಿನವನ್ನು 'ಏಡ್ಸ್ ತಡೆಗಟ್ಟುವ ದಿನ'ವಾಗಿ ಆಚರಿಸುತ್ತಾರೆ. ಒಂದು ವಿಶೇಷ ಆಕಾರದ ಕೆಂಪು ಪಟ್ಟಿಯು ಈ ಪ್ರಚಾರದ ಸಂಕೇತವಾಗಿದೆ.

ಏಡ್ಸ್ ಎಂದರೆ ಏನು ? ಇದು ಯಾವ ರೀತಿಯ ಕಾಯಿಲೆ ? ನಮಗೆ ಯಾವ ತರದ ಕಷ್ಟವನ್ನು ಉಂಟು ಮಾಡುತ್ತದೆ ? ಏಡ್ಸ್ ಎಂಬ ಪದದ ಪೂರ್ಣ ರೂಪ ಹೀಗಿದೆ : ಅಕ್ವಾಯರ್ಡ್ ಇಮ್ಯುನೊ ಡಿಫಿಸಿಯನ್ಸಿ ಸಿಂಡ್ರೋಮ್.

ನಮ್ಮ ಶರೀರಕ್ಕೆ ರೋಗಗಳನ್ನುಂಟುಮಾಡುವ ಕೀಟಾಣುಗಳೊಡನೆ ಹೋರಾಡಿ ರೋಗವನ್ನು ತಡೆಯುವ ಶಕ್ತಿ ಇರುತ್ತದೆ. ಏಡ್ಸ್ ಎಂಬ ವ್ಯಾಧಿ ಈ ಶಕ್ತಿಯನ್ನು ಸಂಪೂರ್ಣವಾಗಿ ನಾಶ ಮಾಡುತ್ತದೆ. ರೋಗ ಉಂಟುಮಾಡುವ ಕೀಟಾಣುಗಳು ನಮ್ಮ ಶರೀರವನ್ನು ಪ್ರವೇಶಿಸಿದಾಗ ನಮ್ಮ ಶರೀರ ಒಂದು ವಿಶೇಷ ತರದ ಅಣುಗಳನ್ನು ಸಿದ್ಧಪಡಿಸುತ್ತದೆ. ಇವನ್ನು 'ಆ್ಯಂಟಿಬಾಡೀಸ್' ಅನ್ನುತ್ತಾರೆ. ಏಡ್ಸ್ ಕಾಯಿಲೆಯು ಆ್ಯಂಟಿಬಾಡೀಸ್‌ನ್ನು ತಯಾರಿಸುವ ರಕ್ತಕಣಗಳನ್ನು ಸಂಪೂರ್ಣವಾಗಿ ನಾಶಪಡಿಸುತ್ತದೆ. ಇದರ ಪರಿಣಾಮವಾಗಿ ನಮ್ಮ ಶರೀರದಲ್ಲಿ ಯಾವ ರೋಗವನ್ನೂ ತಡೆಯುವ ಶಕ್ತಿ ಇರುವುದಿಲ್ಲ. ಆದುದರಿಂದ ಏಡ್ಸ್ ಪೀಡಿತ ವ್ಯಕ್ತಿ ಎಲ್ಲಾ ತರದ ರೋಗ ರುಜಿನಗಳಿಗೆ ಬಲಿಯಾಗುತ್ತಾನೆ. ಕಾಯಿಲೆ ಬಂದಾಗ ಅದನ್ನು ತಡೆಗಟ್ಟಲು ಆತನ ಶರೀರದಲ್ಲಿ ಯಾವ ರೀತಿಯ ಸಾಮರ್ಥ್ಯವೂ ಇರುವುದಿಲ್ಲ. ಏಡ್ಸ್ ಪೀಡಿತ ರೋಗಿಗೆ ಕ್ಷಯ, ಕ್ಯಾನ್ಸರ್, ಹರ್ಪೀಸ್, ಎಲುಬಿನ ಮಜ್ಜೆ (ಬೋನ್ ಮ್ಯಾರೋ) ಮತ್ತು ಮೆದುಳಿನ ಮೇಲೆ ಆಘಾತ ಮಾಡುವ ಕಾಯಿಲೆಗಳು - ಮುಂತಾದವು ಉಂಟಾಗುತ್ತವೆ.

**ಏಡ್ಸ್ ಹೇಗೆ ಉತ್ಪನ್ನವಾಗುತ್ತದೆ ?**

ಏಡ್ಸನ್ನು ಉಂಟುಮಾಡುವುದು ಒಂದು ವಿಶೇಷ ತರದ ಜೀವಾಣು (ವೈರಸ್). ಈ ಜೀವಾಣುವಿನ ಹೆಸರು, ಹ್ಯೂಮನ್ ಇಮ್ಯುನೋವೈರಸ್ (ಎಚ್.ಐ.ವಿ). ಈ ವೈರಸ್ ನಮ್ಮ ಶರೀರದ ಟಿ ಸೆಲ್ಸ್ ಎಂಬ ರಕ್ತ ಕಣಗಳ ಮೇಲೆ ದಾಳಿ ಮಾಡಿ ಅವನ್ನು ನಾಶ ಪಡಿಸುತ್ತದೆ. ಈ ಟಿ ಸೆಲ್ಸ್ ನಮ್ಮ ಶರೀರದ ರಕ್ಷಣೆ ಪಡೆಯ ಯೋಧರಂತೆ. ಎಚ್.ಐ.ವಿ. ವೈರಸ್ ನಮ್ಮ ಶರೀರದ ಈ ಯೋಧರನ್ನೇ ಕೊಂದು ಹಾಕಿ ನಮ್ಮ ರಕ್ಷಣ ಪ್ರಣಾಲಿಯನ್ನು ಪೂರ್ಣವಾಗಿ ನಾಶ



ಪಡಿಸುತ್ತದೆ. ಈ ಎಚ್.ಐ.ವಿ. ವೈರಸ್ ಹೆಚ್ಚಾಗಿ ರಕ್ತ, ವೀರ್ಯ ಮತ್ತು ಯೋನಿಯಲ್ಲಿ ವಿಸರ್ಜಿಸಲ್ಪಡುವ (ವೈಜನಲ್ ಸೆಕ್ರೀಶನ್ಸ್) ದ್ರವಗಳಿಂದ ಒಬ್ಬನಿಂದ ಇನ್ನೊಬ್ಬ ವ್ಯಕ್ತಿಯ ಶರೀರದಲ್ಲಿ ಪ್ರವೇಶ ಮಾಡುತ್ತದೆ. ಏಡ್ಸ್‌ನ ಪ್ರಸಾರ ಹೆಚ್ಚಾಗಿ ಲೈಂಗಿಕ ಸಂಬಂಧದಿಂದಲೇ ಹರಡುವುದು ಈ ಕಾರಣದಿಂದಲೇ. ಎಂಜಲು, ಕಣ್ಣೀರು ಮತ್ತು ಮೂತ್ರದಲ್ಲಿಯೂ ಈ ವೈರಸ್‌ಗಳು ಇರುತ್ತವೆ. ಆದರೆ ಈ ದ್ರವಗಳ ಮುಖಾಂತರ ಅದು ಹಬ್ಬುವುದಿಲ್ಲ.

ಎಚ್.ಐ.ವಿ. ವೈರಸ್ ಒಬ್ಬ ವ್ಯಕ್ತಿಯ ಶರೀರದಲ್ಲಿ ಇದೆ ಎಂಬುದಕ್ಕೆ ಯಾವ ತರಹದ ಬಾಹ್ಯ ಲಕ್ಷಣಗಳೂ ತೋರಿಬರುವುದಿಲ್ಲ. ಈ ವೈರಸ್ ಒಂದು ಶರೀರದಲ್ಲಿ ಪ್ರವೇಶ ಮಾಡಿದ ಕೆಲವು ವರ್ಷಗಳವರೆಗೂ ಇದರ ಪ್ರಭಾವ ಗೊತ್ತಾಗುವುದಿಲ್ಲ. ಎಚ್.ಐ.ವಿ. ವೈರಸ್ ಇದೆಯೋ ಇಲ್ಲವೋ ಎಂಬುದನ್ನು ತಿಳಿಯಬೇಕಾದರೆ ರಕ್ತದ ಪರೀಕ್ಷೆ ಅಗತ್ಯ. ಈ ಪರೀಕ್ಷೆಗೆ ಎಲೀಸಾ ಟೆಸ್ಟ್ ಎಂದು ಹೇಳುತ್ತಾರೆ.

ಏಡ್ಸ್ ರೋಗದ ಬಗ್ಗೆ ತಿಳುವಳಿಕೆ ಬಂದದ್ದು ಇತ್ತೀಚೆಗೆ. ೧೯೮೧ರಲ್ಲಿ ಅಮೆರಿಕಾ ದೇಶದಲ್ಲಿ ಕೆಲವರು ಏಡ್ಸ್ ಕಾಯಿಲೆಯಿಂದ ಮೃತಪಟ್ಟರೆಂದು ಇತ್ತೀಚೆಗೆ ತಿಳಿದುಬಂತು. ಕೆಲವೇ ವರ್ಷಗಳಲ್ಲಿ ಈ ರೋಗ ಒಂದು ಸಾಂಕ್ರಾಮಿಕ ರೋಗವಾಗಿ ಹಬ್ಬಿದೆ.

ಇದಕ್ಕೆ ಕಾರಣಗಳೆಂದರೆ

೧. ಅಂತರರಾಷ್ಟ್ರೀಯ ಪ್ರಯಾಣ/ಸಂಚಾರದಲ್ಲಿ ಬಹಳಷ್ಟು ಹೆಚ್ಚುವರಿ.
೨. ಚಿಕಿತ್ಸಾ ಕ್ರಮಗಳಲ್ಲಿ ರಕ್ತದಾನದ ಜನಪ್ರಿಯತೆ ಮತ್ತು ಅಗತ್ಯತೆ.
೩. ನಾರ್ಕೋಟಿಕ್‌ಗಳ ಸೇವನೆಯಲ್ಲಿ ಹೆಚ್ಚುವಳಿ (ಹೆಚ್ಚಾಗಿ ಈ ತರದ ಪದಾರ್ಥಗಳನ್ನು – ಉದಾಹರಣೆಗೆ ಹೆರಾಯಿನ್ ಎಂಬ ಪದಾರ್ಥ – ಸೂಜಿಯ ಮೂಲಕ ರಕ್ತ ನಾಡಿಗಳಲ್ಲಿ ಸೇರಿಸುವ ವಿಧಾನ ದಿಂದಲೇ ಸೇವಿಸಲಾಗುತ್ತದೆ).

**ಸಿ. ಮಾರ್ಟಿಸ್**

ರಕ್ತದಾನ ಒಂದು ವಿಧದಲ್ಲಿ ಬಹಳ ಪ್ರಯೋಜನ ಕಾರಿಯಾಗಿದ್ದು ಪ್ರಾಣ ಉಳಿಸುವಲ್ಲಿ ಸಹಾಯಕವಾಗಿದೆ. ಆದರೆ ರಕ್ತದ ಪರೀಕ್ಷೆಯನ್ನು ತಕ್ಕ ರೀತಿಯಲ್ಲಿ ಮಾಡದೆ ಅಥವಾ ಸರಿಯಾಗಿ ಸ್ಟೆರಿಲೈಸ್ ಮಾಡದೆ ಸೂಜಿಗಳನ್ನು ರಕ್ತದಾನದ ಕ್ರಿಯೆಯಲ್ಲಿ ಉಪಯೋಗಿಸುವುದರಿಂದ ಏಡ್ಸ್ ಹಬ್ಬಲು ಅವಕಾಶವಿದೆ. ನಮ್ಮ ದೇಶದಲ್ಲಿ ಹಣ ಕೊಟ್ಟು ರಕ್ತವನ್ನು ಪಡೆಯುವ ಪದ್ಧತಿ ಇತ್ತು. ಇದರಿಂದ ಎಲ್ಲಾ ತರಹದ ಜನರು, ಆರೋಗ್ಯವಂತರೂ, ರೋಗಿಗಳೂ - ರಕ್ತದಾನ ಮಾಡುತ್ತಿದ್ದರು.

ಹೆರಾಯಿನ್ ಮತ್ತು ಇತರ ನಾರ್ಕೋಟಿಕ್ ದ್ರವಗಳನ್ನು ಸೂಜಿಗಳ ಮುಖಾಂತರವೇ ಸೇವಿಸುವುದರಿಂದ ಏಡ್ಸ್ ಹಬ್ಬಲು ಈ ಡ್ರಗ್ಸ್ ಅಭ್ಯಾಸ ಸಾಕಷ್ಟು ಮಟ್ಟಿಗೆ ಕಾರಣವಾಗಿದೆ.

ಆದರೆ ಏಡ್ಸ್ ಹಬ್ಬಲು ಎಲ್ಲಕ್ಕಿಂತಲೂ ಮುಖ್ಯ ಕಾರಣ ಲೈಂಗಿಕ ಸಂಬಂಧ, (ಸೆಕ್ಸುಯಲ್ ಕಾಂಟ್ಯಾಕ್ಟ್). ಇದಕ್ಕೆ ಕಾರಣ ಏನು ? ಎಚ್.ಐ.ವಿ. ವೈರಸ್ ಹೆಚ್ಚಾಗಿ ಇರುವುದು ವೀರ್ಯದಲ್ಲಿ.

ಏಡ್ಸ್‌ನಿಂದ ಪೀಡಿತರಾಗಿರುವ ಸ್ತ್ರೀಯರು ಗರ್ಭವತಿಯರಾದರೆ ಗರ್ಭಕೋಶದಲ್ಲಿ ಬೆಳೆಯುವ ಶಿಶುವಿಗೂ ಏಡ್ಸ್ ತಗಲುವ ಸಂಭವವಿದೆ. ಮಗು ಹುಟ್ಟುವಾಗ ನಾಭಿಯ ನಾಳವನ್ನು ಕತ್ತರಿಸುವಾಗ ತಾಯಿಯ ರಕ್ತದಿಂದ ಮಗುವಿನ ರಕ್ತಕ್ಕೆ ಎಚ್.ಐ.ವಿ. ವೈರಸ್ ಹೋಗುವ ಸಂಭವವಿದೆ. ಆದುದರಿಂದ ಗರ್ಭವತಿ ಸ್ತ್ರೀಯರನ್ನು ಎಚ್.ಐ.ವಿ. ಪರೀಕ್ಷೆಗೆ ಒಳಪಡಿಸಿದರೆ ಮಗುವನ್ನು ಏಡ್ಸ್‌ನಿಂದ ರಕ್ಷಿಸಲು ಸ್ವಲ್ಪ



ಮಟ್ಟಿಗಾದರೂ ಸಾಧ್ಯವಿದೆ. (ಸ್ವಾಭಾವಿಕ ಪ್ರಸೂತಿಯ ಬದಲಾಗಿ ಸಿಜೇರಿಯನ್ ಕ್ರಿಯೆ ಮಾಡುವುದರಿಂದ).

ಎಚ್.ಐ.ವಿ. ಸೋಂಕು ತಗುಲಿದಾಗ ಕೂಡಲೇ ಯಾವ ತರಹದ ಬಾಹ್ಯ ಲಕ್ಷಣಗಳೂ ಕಂಡು ಬರುವುದಿಲ್ಲ. ಹೆಚ್ಚಾಗಿ ಇಂತಹ ವ್ಯಕ್ತಿಗಳು ೮-೧೦ ವರ್ಷಗಳವರೆಗೂ ಆರೋಗ್ಯವಂತರಾಗಿರುವಂತೆ ಕಂಡುಬರುತ್ತದೆ. ಆದರೆ ಇಂತಹ ಸ್ಥಿತಿಯಲ್ಲಿ ಅವರ

ಶರೀರದ ವೈರಸ್ ಬೇರೆಯವರ ಶರೀರಕ್ಕೆ ಸೇರುವ ಸಾಧ್ಯತೆ ಇದೆ. ಸಾಧಾರಣ ೮-೧೦ ವರ್ಷಗಳ ನಂತರ ಏಡ್ಸ್ ವೈರಸ್ ತಲೆದೋರಲು ಪ್ರಾರಂಭಿಸುತ್ತದೆ. ಆರಂಭದಲ್ಲಿ ರೋಗಿಗೆ ದಣಿವು, ಜ್ವರ, ರಾತ್ರಿಯಲ್ಲಿ ಬೆವರು ಸುರಿಯುವುದು ಹೆಚ್ಚು, ಚಳಿ ಮತ್ತು ತೂಕದಲ್ಲಿ ಕಡಿಮೆಯಾಗುವುದು ಈ ಲಕ್ಷಣಗಳು ಕಂಡು ಬರುತ್ತವೆ. ಮುಂದಿನ ಹಂತದಲ್ಲಿ ಶರೀರದ ರಕ್ಷಣೆ ಶಕ್ತಿಯು ಕುಂಠಿತವಾಗಿ ಇತರೆ ಕಾಯಿಲೆಗಳು ತಲೆದೋರುತ್ತವೆ. ಇವುಗಳಲ್ಲಿ ಸಾಮಾನ್ಯವಾಗಿ ಚರ್ಮರೋಗ, ಉಸಿರಾಡಲು ಕಷ್ಟವಾಗುವುದು, ಕಂಪನ ಮತ್ತು ಮಾನಸಿಕ ಸಂತುಲವನ್ನು ಕಳೆದುಕೊಳ್ಳುವುದು ಇವು ಸಾಮಾನ್ಯ.

ಏಡ್ಸನ್ನು ಗುಣಪಡಿಸುವ ಔಷಧಿಯನ್ನು ಈವರೆಗೂ ವಿಜ್ಞಾನಿಗಳು ಕಂಡುಹಿಡಿಯಲು ಸಾಧ್ಯವಾಗಿಲ್ಲ. ಆದರೆ ಜನರು ಈ ಕಾಯಿಲೆಯ ಬಗ್ಗೆ ಜಾಗರೂಕರಾಗುತ್ತಿದ್ದಾರೆ. ಏಡ್ಸ್ ರೋಗಿಗಳ ಆರೈಕೆಯ ವಿಷಯದಲ್ಲಿ ಹೆಚ್ಚು ಗಮನ ಕೊಡುತ್ತಿದ್ದಾರೆ. ಏಡ್ಸನ್ನು ಪೂರ್ಣವಾಗಿ ಗುಣಪಡಿಸಲು ಸಾಧ್ಯವಿಲ್ಲವಾದರೂ ಎಚ್.ಐ.ವಿ. ವೈರಸ್‌ನ್ನು ನಿಯಂತ್ರಣದಲ್ಲಿಟ್ಟು ಅದನ್ನು ಹೆಚ್ಚಾಗಿ ಹರಡದಂತೆ ನಿಯಂತ್ರಿಸುವ ಔಷಧಿಗಳು ಈಗ ಲಭ್ಯ. ಆದುದರಿಂದ ಎಚ್.ಐ.ವಿ. ಟೆಸ್ಟ್ ಮಾಡಿಸಿ ವೈರಸ್ ಮನೆಮಾಡಿದೆ ಎಂದು ತಿಳಿದುಬಂದರೆ ವೈರಸ್ಸಿನ ದುಷ್ಪರಿಣಾಮವನ್ನು ಹತೋಟಿಯಲ್ಲಿಡಲು ಪ್ರಯತ್ನಿಸಬಹುದಾಗಿದೆ. ಆದರೆ ವೈರಸನ್ನು ಹತೋಟಿಯಲ್ಲಿಡುವಂತಹ ಈ ಔಷಧಿಗಳು ಬಹಳ ಬೆಲೆಯುಳ್ಳವಾಗಿದ್ದು ಬಡ ಜನರು ಇವನ್ನು ಕೊಂಡುಕೊಳ್ಳುವುದು ಸಾಧ್ಯವಿಲ್ಲ. ಮಾತ್ರವಲ್ಲ, ಈ ಔಷಧಿಗಳಿಂದ ಇನ್ನಿತರ ಸಮಸ್ಯೆಗಳೂ (ಸೈಡ್ ಇಫೆಕ್ಟ್ಸ್) ಉಂಟಾಗುವ ಸಂಭವವಿದೆ.

ಏಡ್ಸ್ ಪೀಡಿತ ಜನರ ಸಂಖ್ಯೆಯ ಪ್ರಮಾಣದಲ್ಲಿ ನಮ್ಮ ದೇಶ ವಿಶ್ವದಲ್ಲಿ ಎರಡನೆಯ ಸ್ಥಾನದಲ್ಲಿದೆ. ಮೊದಲನೆಯ ಸ್ಥಾನ ಆಫ್ರಿಕಾ. ಭಾರತದಲ್ಲಿ ಸಾಧಾರಣ ೩೦-೫೦ ಲಕ್ಷ ಜನರು ಏಡ್ಸ್‌ಗೆ ಈಗಾಗಲೇ ಬಲಿಯಾಗಿದ್ದಾರೆ. ಒಂದು ದಿನದಲ್ಲಿ ಸರಾಸರಿ ೩೫೦೦ ಜನರಿಗೆ ಈ ಸೋಂಕು ತಗಲುತ್ತಿದೆಯಂತೆ. ಮಾತ್ರವಲ್ಲ, ಪ್ರತೀ ಎರಡು ವರ್ಷಗಳಲ್ಲಿ ಈ ಸಂಖ್ಯೆ ಇಮ್ಮಡಿ ಯಾಗುತ್ತಿದೆ. ಮಹಾರಾಷ್ಟ್ರ ಮತ್ತು ಆಂಧ್ರದಲ್ಲಿ ಶೇ. ೨ರಷ್ಟು ಜನ ಏಡ್ಸ್‌ಗೆ ಬಲಿಯಾಗಿದ್ದಾರೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಇದು ಶೇ. ೧ರಷ್ಟಿದೆ. ಮುಂಬಯಿ, ಹೈದರಾಬಾದ್, ಕೊಲ್ಹಾಪುರ, ಪುಣೆ ಮತ್ತು ಕೊಹಿಮಾ ನಗರಗಳಲ್ಲಿ ಏಡ್ಸ್ ಹೆಚ್ಚಾಗಿ ಹಬ್ಬಿದೆ.

ಏಡ್ಸ್ ಕಾಯಿಲೆಗೆ ಸುಲಭವಾಗಿ ಬಲಿಯಾಗುವವರು ವೇಶ್ಯೆಯರು. ಸಲಿಂಗ ಕಾಮುಕರು (ಹೋಮೋ ಸೆಕ್ಸುಯಲ್) ಮತ್ತು ಪದೇ ಪದೇ ರಕ್ತದಾನ ಅವಶ್ಯಕತೆ ಉಳ್ಳವರು. ಆದರೆ ಇತ್ತೀಚೆಗೆ ಈ ಸೋಂಕು ಸಾಮಾನ್ಯ ಜನರಲ್ಲೂ ಹಬ್ಬುತ್ತಿರುವುದು ತುಂಬಾ ವಿಷಾದಕರವಾದ ಬೆಳವಣಿಗೆ.

ಬಹುವಾಗಿ, ಏಡ್ಸ್ ಹಬ್ಬುವುದು ಲೈಂಗಿಕ ಸಂಬಂಧದಿಂದ ಮತ್ತು ರಕ್ತ ಕೊಡಲು ಉಪಯೋಗಿಸುವ ಸೂಜಿಗಳಿಂದ. ಏಡ್ಸ್ ಬರೇ ಸ್ಪರ್ಶದಿಂದ ಒಬ್ಬರಿಂದ ಇನ್ನೊಬ್ಬರಿಗೆ ಹರಡುವುದಿಲ್ಲ. ಹೀಗಾಗಿ ಏಡ್ಸ್ ಇರುವ ರೋಗಿಯನ್ನು ಮುಟ್ಟುವುದರಿಂದ ಮಾತ್ರಕ್ಕೆ ನಮಗೆ ಏಡ್ಸ್ ಬರಲಾರದು. ಆದುದರಿಂದ ಏಡ್ಸ್ ರೋಗಿಗಳನ್ನು ದೂರ ಮಾಡಿ ಅವರನ್ನು ಕಡೆಗಣಿಸುವುದು ಸರಿಯಲ್ಲ. ಏಡ್ಸ್ ಇರುವವರೊಡನೆ ಒಂದೇ ಮನೆಯಲ್ಲಿ ವಾಸವಾಗಿ ಬಟ್ಟೆ, ಬರೆ ಪಾತ್ರೆ ಮುಂತಾದವುಗಳನ್ನು ಅವರೊಂದಿಗೆ ಉಪಯೋಗಿಸುವುದರಿಂದ ನಮಗೆ ಯಾವ ತರಹದ ಸೋಂಕು ತಗುಲಲಾರದು. ಆದರೆ, ಲೈಂಗಿಕ ಸಂಬಂಧದಲ್ಲಿ ಮತ್ತು ರಕ್ತದಾನದ ವಿಷಯದಲ್ಲಿ ಹೆಚ್ಚು ಜಾಗರೂಕರಾಗಿರಬೇಕಷ್ಟೆ. ಏಡ್ಸ್ ರೋಗಿಗಳ ಗಾಯಗಳನ್ನು ಅಥವಾ ರಕ್ತವನ್ನು ಬರಿಗೈಯಲ್ಲಿ ಮುಟ್ಟಬಾರದು. ಕೈ ಚೀಲಗಳನ್ನು (ಗ್ಲೌಸ್) ಧರಿಸಿಯೇ ಮುಟ್ಟಬೇಕು.

ಏಡ್ಸನ್ನು ಪೂರ್ಣವಾಗಿ ಗುಣಪಡಿಸಲು ಸಾಧ್ಯವಿಲ್ಲದ ಕಾರಣ ಈ ರೋಗವನ್ನು ತಡೆಗಟ್ಟುವ ವಿಷಯದಲ್ಲಿ ನಾವು ಹೆಚ್ಚು ಗಮನಕೊಡಬೇಕಾಗಿದೆ. ಈ ವಿಷಯದಲ್ಲಿ ಕೆಲವು ಸಲಹೆಗಳನ್ನು ಮುಂದಿಡಲಾಗಿದೆ :

೧. ಒಬ್ಬರಿಗಿಂತಲೂ ಹೆಚ್ಚು ಜನರೊಡನೆ (ಮಲ್ಟಿಪಲ್ ಪಾರ್ಟನರ್) ಲೈಂಗಿಕ ಸಂಬಂಧ ಇಟ್ಟುಕೊಳ್ಳದಿರುವುದು.
೨. ಏಡ್ಸ್ ರೋಗಿಗಳೊಡನೆ ಲೈಂಗಿಕ ಸಂಬಂಧ ಇಟ್ಟುಕೊಳ್ಳದಿರುವುದು.
೩. ಕಾಂಡೋಮನ್ನು ತಪ್ಪದೆ ಉಪಯೋಗಿಸುವುದು.
೪. ರಕ್ತದಾನದ ಕ್ರಿಯೆಯಲ್ಲಿ ಸ್ಟೆರಿಲೈಸ್ ಮಾಡಿದ ಸೂಜಿಗಳನ್ನು ಮಾತ್ರ ಉಪಯೋಗಿಸುವುದು (ಡಿಸ್ಪೋಸಬಲ್).
೫. ಏಡ್ಸ್ ರೋಗಿಗಳ ಗಾಯ ಅಥವಾ ರಕ್ತವನ್ನು ಬರಿಗೈಯಲ್ಲಿ ಮುಟ್ಟದೆ ಕೈ ಚೀಲ ಧರಿಸಿಯೇ ಚಿಕಿತ್ಸೆ ಮಾಡುವುದು.
೬. ರಕ್ತದಾನ ಮಾಡುವವರ ರಕ್ತವನ್ನು ಎಚ್.ಐ.ವಿ. ಪರೀಕ್ಷೆಗೆ ಒಳಪಡಿಸುವುದು.
೭. ಗರ್ಭಿಣಿಯರಾದ ಸ್ತ್ರೀಯರನ್ನು ಎಚ್.ಐ.ವಿ. ಪರೀಕ್ಷೆಗೆ ಒಳಪಡಿಸಿ ರೋಗದ ಕುರುಹು ಕಂಡುಬಂದಲ್ಲಿ ಶಿಶುವನ್ನಾದರೂ ಕಾಯಿಲೆಯಿಂದ ರಕ್ಷಿಸಲು ಪ್ರಯತ್ನ ಮಾಡುವುದು.

ಭಾರತ ಸರಕಾರ ಏಡ್ಸ್ ತಡೆಗಟ್ಟುವ ನಿಟ್ಟಿನಲ್ಲಿ ನ್ಯಾಷನಲ್ ಏಡ್ಸ್ ಕಂಟ್ರೋಲ್ ಆರ್ಗನೈಸೇಷನ್ (ನ್ಯಾಕೋ) ಎಂಬ ಸಂಸ್ಥೆಯನ್ನು ಸ್ಥಾಪಿಸಿದೆ. ಏಡ್ಸ್ ವಿಷಯವನ್ನು ಕುರಿತ ತಿಳುವಳಿಕೆ ಮತ್ತು ಪ್ರಚಾರ ಮಾಡಿ ಜನತೆಗೆ ಶಿಕ್ಷಣ ನೀಡುವುದು ಈ ಸಂಸ್ಥೆಯ ಧ್ಯೇಯ. ಆದರೆ ಏಡ್ಸ್ ಹಬ್ಬುತ್ತಿರುವ ವೇಗವನ್ನು ಗಮನಿಸಿದಾಗ ಸರ್ಕಾರದ ಕಾರ್ಯಕ್ರಮ ಏನೂ ಸಾಲದು. ಇನ್ನೂ ಹೆಚ್ಚಿನ ಪ್ರಯತ್ನಗಳನ್ನು ನಡೆಸಬೇಕು ಎಂದೆನಿಸುತ್ತದೆ.

ಜನಸಾಮಾನ್ಯರಲ್ಲೂ ಏಡ್ಸ್‌ನ ವಿಷಯ ಜ್ಞಾನ ಮತ್ತು ಜಾಗರೂಕತೆ ಬೆಳೆಯುತ್ತಿದೆ. ಹಲವಾರು ಸರ್ಕಾರೇತರ ಸಂಘಸಂಸ್ಥೆಗಳು (ಎನ್.ಜಿ.ಒ) ಜನರಿಗೆ ಏಡ್ಸ್ ಬಗ್ಗೆ ತಿಳುವಳಿಕೆ ನೀಡುತ್ತಿದ್ದಾರೆ. ಏಡ್ಸ್ ರೋಗಿಗಳ ಆರೈಕೆಗಾಗಿ ಚಿಕಿತ್ಸಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ.

ಸಿ. ಮಾರ್ಟಿನ್
ಮನೆ ನಂಬರ್ ೮೦, ಸೆಕ್ಟರ್ ೧೧, 'ಬಿ' ಮೈನ್
ಜೀವನ ಭೀಮಾನಗರ, ಬೆಂಗಳೂರು - ೭೫



ಏಡ್ಸ್ ರೋಗಿಯ ಗಾಯವನ್ನು ಬರಿಗೈಯಲ್ಲಿ ಮುಟ್ಟಬಾರದು

## ಪರಸ್ಪರ



ಭೂಮಿಗೆ ಬೇಕು ಆಕಾಶದ ಸಖ್ಯ
ತಿರುಗುವ ಗೋಲ
ಭೂಮಿಗೆ
ಆಕಾಶದ ನೆರಳು
ನೆರಳು ಬೆಳಕಾದರೆ
ಚಿರಂತನ ಜೀವಧಾರೆ – ಇಲ್ಲಾ
ಗುಡುಗು ಸಿಡಿಲು ಆರ್ಭಟ,
ಅಗ್ನಿಸ್ಫೋಟ,
ಭೂಕಂಪನ.

ಆಕಾಶಕ್ಕೆ
ಯಾಕೆ ?
?
ಇಲ್ಲದ ಕೋಪ;
ಕೊನೆಯಿರದ
ಜೀವಂತ ನೆರಳು.
ಆಕಾಶಕ್ಕೂ ಬೇಕು ನೆಲದ ಸಂಪರ್ಕ.

ಎಂ. ಆರ್. ಭಗವತಿ
೮ಸಿ-೧೫, 'ಗುರುರಕ್ಷಾ', ೫ನೇ ಮುಖ್ಯರಸ್ತೆ, ೮ನೇ ತಿರುವು
ಶ್ರೀನಿಧಿ ಬಡಾವಣೆ, ಕೋಣನಕುಂಟೆ, ಬೆಂಗಳೂರು-೬೨



**ಅಸ್ಪೃಶ್ಯರು** (ಒಂದು ಪರಿಶೀಲನೆ)

*ಎಂ. ವೆಂಕಟಸ್ವಾಮಿ*

**ಪುಟ :** ೧೬೦ **ಬೆಲೆ :** ರೂ. ೭೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

*ಮನುಷ್ಯ-ಮನುಷ್ಯರ ನಡುವೆ ಮೇಲು ಕೀಳು ಎಂಬ ಭೇದ ಭಾವ ಬೆಳೆಯುತ್ತ ಅಸಂಖ್ಯ ಜಾತಿ-ಉಪಜಾತಿಗಳಾಗಿ ಬೆಳೆದು ಒಂದು ವರ್ಗ ಇನ್ನೊಂದನ್ನು ಅಸ್ಪೃಶ್ಯವೆಂದು ಪರಿಗಣಿಸುವಷ್ಟು ಅತಿರೇಕಕ್ಕೂ ಹೋಯಿತು. ಮನುಷ್ಯರ ಮಧ್ಯೆ ಇಂಥ ಭಾವನೆಗಳಿಗೆ ಮೂಲ ಏನಿರಬಹುದು ? ಇಂದು ಜಾಗತಿಕ ಮಟ್ಟದಲ್ಲಿ ಬೆಳೆದು ನಿಂತ ಜನಾಂಗೀಯ ದ್ವೇಷಕ್ಕೆ ಎಂಥ ಹಿನ್ನೆಲೆ ಇರಬಹುದು ? ಈ ಪುಸ್ತಕದಲ್ಲಿ ಭಾರತದಲ್ಲಿನ ಜಾತಿಪದ್ಧತಿ, ಅಸ್ಪೃಶ್ಯತೆ, ಹಿಂದೂ ಧರ್ಮದ ಚಾತುರ್ವರ್ಣ್ಯ ಸಮಾಜದ ಅಮಾನವೀಯ ಕೃತ್ಯಗಳನ್ನೊಳಗೊಂಡಂತೆ ವಿಚಾರಪೂರಿತ ಲೇಖನಗಳಿವೆ.*



**ಭಾಷಾ ಸಂಗಮ** (ಅಭಿನಂದನ ಗ್ರಂಥ)

*ಸಂ. ಡಾ॥ ಬಸವರಾಜ ಪೊಲೀಸ ಪಾಟೀಲ*

**ಪುಟ :** ೯೯೨ **ಬೆಲೆ :** ರೂ. ೪೫೦

**ಡಾ॥ ಸಂಗಮೇಶ ಸವದತ್ತಿಮಠ** ಅಭಿನಂದನ ಸಮಿತಿ, ಗುಲಬರ್ಗಾ - ೫೮೫ ೧೦೬

*ಕನ್ನಡ ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ ಡಾ॥ ಸಂಗಮೇಶ ಸವದತ್ತಿಮಠ ಶ್ರೇಷ್ಠ ವಿದ್ವಾಂಸರೆಂದು ಈ ಬೃಹತ್ ಗ್ರಂಥ ಲೇಖನಗಳ ಮೂಲಕ ತಿಳಿಸುತ್ತದೆ. ಅವರ ಷಷ್ಠ್ಯಬ್ಧಿ ಸಮಾರಂಭದಂದು ಅಭಿಮಾನಿಗಳು ಅವರಿಗೆ ಅರ್ಪಿಸಿದ ವಿಶೇಷ ಅಭಿನಂದನ ಗ್ರಂಥವಿದು. ನೂರಾರು ಸಾಹಿತಿಗಳು ಅವರ ವ್ಯಕ್ತಿತ್ವದ ಬಗ್ಗೆ ಮತ್ತು ಆ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಇತರ ಮಹನೀಯರ ಬಗ್ಗೆಯೂ ಮಾಹಿತಿ ನೀಡಿದ್ದಾರೆ. ಏಳು ಅಧ್ಯಾಯಗಳಲ್ಲಿನ ವಿದ್ವತ್ಪೂರ್ಣ ಬರಹಗಳು ಭಾಷಾ ವಿಜ್ಞಾನದ ವಿದ್ಯಾರ್ಥಿಗಳಿಗೆ ತುಂಬ ಅನುಕೂಲ.*



**ಶಾಮಿಯಾನ** (ಕವಿತೆಗಳು)

*ಡಾ॥ ಸೈಯದ್ ಝಮೀರುಲ್ಲಾ ಷರೀಫ್*

**ಪುಟ :** ೫೬ **ಬೆಲೆ :** ರೂ. ೧೫

**ಕಾವ್ಯಶ್ರೀ ಪ್ರಕಾಶನ,** 'ಷರೀಫ್', ಕೆ.ಎಸ್.ಆರ್.ಟಿ.ಸಿ. ಬಸ್‌ಸ್ಟ್ಯಾಂಡ್ ಮುಂಭಾಗ, ಭಟ್ಕಳ - ೫೮೧ ೩೨೦

*ದೊಡ್ಡದಾದ ಕತ್ತರಿಯೊಂದು ಕತ್ತರಿಸುತ್ತಾ ಹೋದರೇನಂತೆ ? ಚಿಕ್ಕ ಸೂಜಿಯೊಂದು ಅದನ್ನು ಹೊಲಿಯಲಾರದೆ ? ಖಂಡಿತ ಸಾಧ್ಯವಿದೆ. ಆದರೆ ಅದಕ್ಕೆ ದಾರ ಹಾಗೂ ಹೊಲಿಯುವ ಮನಸ್ಸುಳ್ಳ ಮನುಷ್ಯನೊಬ್ಬನ ಅವಶ್ಯಕತೆಯಿದೆ. ಅಂಥ ಹರಿದು ಚಿಂದಿಯಾದ ಮನಸ್ಸುಗಳನ್ನು ಹೊಲಿಯಬಲ್ಲ ಮಾನವ ಪ್ರೇಮಿಯೊಬ್ಬನನ್ನು ಕವಿ ಹುಡುಕುತ್ತಿದ್ದಾರೆ. ಆತ್ಮೀಯ ಸಂಬಂಧಗಳು ಕೊಂಡು ತರುವಂಥವುಗಳಲ್ಲ. ಅನಾಗರಿಕ ಮನಸ್ಸುಗಳನ್ನು ಎಚ್ಚರಿಸಿ ಅಲ್ಲಿ ಮಾನವೀಯ ಸಂಬಂಧಗಳನ್ನು ನೆಲೆಗೊಳಿಸಲು ಸದಾ ಪ್ರಯತ್ನಿಸುವ ಮನಸ್ಸೊಂದು ಇಲ್ಲಿ ಕಾಣುತ್ತದೆ.*



**ಕಲ್ಲು ಖಣಿಯಾಗು, ಕರಿಕೀ ಬೇರಾಗು** (ಕಾದಂಬರಿ)

*ದಮಯಂತಿ ನರೇಗಲ್ಲ*

**ಪುಟ :** ೧೮೬ **ಬೆಲೆ :** ರೂ. ೭೦

**ಮಹಿಳಾ ಸಾಹಿತ್ಯಿಕಾ,** ನವನಗರ, ಹುಬ್ಬಳ್ಳಿ - ೫೮೦ ೦೨೫

*ಒಬ್ಬ ಬರಹಗಾರ್ತಿಯ ಬದುಕನ್ನು ಆಧಾರವಾಗಿಟ್ಟುಕೊಂಡು ಸ್ವಾತಂತ್ರ್ಯೋತ್ತರ ಕಾಲದ ಸಾಮಾಜಿಕ ವಸ್ತುವನ್ನುಳ್ಳ ಈ ಕಾದಂಬರಿ ಸುತ್ತಲಿನ ಬದುಕಿನ ವಿವಿಧ ಮುಖಗಳನ್ನು ಬಿಂಬಿಸುತ್ತದೆ. ತುಂಬಿದ ಮನೆಯಲ್ಲಿ ಹಲವು ಹತ್ತು ವಿಧದ ಕೌಟುಂಬಿಕ ಸಂಬಂಧಗಳೊಡನೆ ಮುಖಾಮುಖಿಯಾದಾಗ ಅನುಭವಗಳು ಹೊರಲಾರದಷ್ಟು ಸಿಗುತ್ತವೆ. ಕಾದಂಬರಿಯುದ್ದಕ್ಕೂ ಸಮಾಜವು ಇಂಥ ಅಸಹನೀಯ ಸ್ಥಿತಿಯಿಂದ ಪರಿವರ್ತನೆಯಾಗಬೇಕೆಂಬ ಉತ್ಕಟ ಬಯಕೆಯೊಂದು ಹರಿತವಾಗಿ ಪ್ರತಿಪಾದಿಸಲ್ಪಟ್ಟಿದೆ. ಹೆಣ್ಣು ಏಕಕಾಲಕ್ಕೆ ಎಲ್ಲ ಪಾತ್ರಗಳನ್ನೂ ನಿಭಾಯಿಸುವ ಚಿತ್ರಣ.*

ಒಳ್ಳೆಯ ಓದು



**ಹೆಣ್ಣೇ, ನಿನ್ನ ಆರೋಗ್ಯ ಕಾಪಾಡಿಕೋ...**

*ಡಾ॥ ಲೀಲಾವತಿ ದೇವದಾಸ್*

**ಪುಟ :** ೧೧೨ **ಬೆಲೆ :** ರೂ. ೫೦

**ಚಂದನ ಪಬ್ಲಿಷರ್ಸ್ & ಡಿಸ್ಟ್ರಿಬ್ಯೂಟರ್ಸ್,** ೭೩೬, ಡಾ॥ ರಾಜಕುಮಾರ್ ರಸ್ತೆ, ೬ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

*ಪ್ರಸೂತಿ ಹಾಗೂ ಸ್ತ್ರೀ ರೋಗ ತಜ್ಞೆ ಡಾ॥ ಲೀಲಾವತಿ ದೇವದಾಸ್ ವೈದ್ಯ ಸಾಹಿತಿಯೂ ಆಗಿರುವುದು ಹೆಣ್ಣುಮಕ್ಕಳ ಸೌಭಾಗ್ಯವೆನ್ನಬೇಕು. ಮಹಿಳೆಯರು ತಮ್ಮ ದೇಹದ ಬಗ್ಗೆ ತಳೆದಿರಬಹುದಾದ ನಿರ್ಲಕ್ಷ್ಯ ಹಾಗೂ ತಪ್ಪು ತಿಳುವಳಿಕೆಯನ್ನು ಸರಿಪಡಿಸುವಲ್ಲಿ ಲೇಖನಗಳು ಬಹಳಷ್ಟು ಸಹಾಯ ಮಾಡುತ್ತವೆ. ಮನೆಯ ಒಳಗೂ ಹೊರಗೂ ದುಡಿಯ ಬೇಕಾದ ಒಬ್ಬ ಹೆಣ್ಣು ಎದುರಿಸಬೇಕಾದ ಎಲ್ಲ ವಿಚಾರಗಳನ್ನು ಮುಂದಿಟ್ಟುಕೊಂಡು ಸೊಗಸಾದ ಶೈಲಿಯಲ್ಲಿ ಪರಿಪೂರ್ಣವಾದ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.*



**ಶೂದ್ರ ಪ್ರಜ್ಞೆ** (ವೈಚಾರಿಕ ಪ್ರಬಂಧ)

*ಎ. ಆರ್. ನಾರಾಯಣಘಟ್ಟ*

**ಪುಟ :** ೮೦ **ಬೆಲೆ :** ರೂ. ೨೫

**ಕಾವ್ಯಕುಂಜ,** ೨೫, ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು - ೫೬೦ ೦೦೪

*ವರ್ಣ ವ್ಯವಸ್ಥೆಯ ಧಾರ್ಮಿಕ ಕಟ್ಟುಪಾಡುಗಳಿಂದ ಕಂಗೆಟ್ಟು ಅವಮಾನದ ಹೀನಾಯ ಬದುಕನ್ನು ಬಾಳಿದ ಶೂದ್ರವರ್ಗ ಹೊಸ ಪ್ರಜ್ಞೆಯೊಂದಿಗೆ ಎಚ್ಚೆತ್ತುಕೊಳ್ಳಬೇಕೆಂದು ಇಲ್ಲಿ ಕರೆ ನೀಡಲಾಗಿದೆ. ಮನುಷ್ಯ ಹೆಚ್ಚು ಹೆಚ್ಚು ನಾಗರಿಕನಾಗುತ್ತಿದ್ದಂತೆ ಒಂದು ಕಾಲದ ಮೌಲ್ಯಗಳು ನಶಿಸಿ ಹೊಸಹೊಸ ವಿಚಾರಗಳು ತೆರೆದುಕೊಳ್ಳುತ್ತವೆ. ಪ್ರತಿಭೆಗೆ ಪುರಸ್ಕಾರ ಖಂಡಿತ ಬೇಕು. ಆದರೂ ಈ ಪುಸ್ತಕದಲ್ಲಿ ಶೂದ್ರ ಶೋಷಣೆಗೆ ಮನುಧರ್ಮ ಶಾಸ್ತ್ರವೊಂದನ್ನೇ ನೇರ ಗುರಿಯಾಗಿಸಿ, ಪ್ರತೀಕಾರದ ರೂಪದಲ್ಲಿ ಹೋರಾಟವನ್ನು ಧ್ವನಿಸಿರುವುದು ಓದುಗನಿಗೆ ಗೋಚರಿಸದಿರದು.*



**ಒಳ ಹೊರಗು** (ವಿಮರ್ಶಾ ಲೇಖನಗಳು)

*ಸುಬ್ರಾಯ ಚೊಕ್ಕಾಡಿ*

**ಪುಟ :** ೧೨೪ **ಬೆಲೆ :** ರೂ. ೬೦

**ಇಂಚರ ಪ್ರಕಾಶನ,** ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

*ಇವು ನವ್ಯ ಸಾಹಿತ್ಯದ ಕೆಲವೊಂದು ಕೃತಿಗಳ ವಿಮರ್ಶಾತ್ಮಕ ಬರಹಗಳು. ಲೇಖಕನ ಅಂತರಂಗದ ಪ್ರಜ್ಞೆಯಾಗಿದ್ದು ನೀರಿನ ಒಳ ಹರಿವಿನಂತಿರುವ ಬರವಣಿಗೆ ಕೃತಿ ರೂಪದಲ್ಲಿ ಹೊರಬಂದಾಗ ಅದು ಹೇಗಿರಬಹುದೆಂಬ ಕುತೂಹಲ ಓದುಗನಿಗಿರುವುದು ಸ್ವಾಭಾವಿಕ. ಆ ಒಳಹೂರಣವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುವುದೂ ಸತ್ಯವೇ. ಚೊಕ್ಕಾಡಿಯವರು ಇಲ್ಲಿ ತನ್ನ ಸ್ವಸಾಹಿತ್ಯವನ್ನೂ ಸ್ವವಿಮರ್ಶೆಗೊಳಪಡಿಸುತ್ತ ಇತರ ಕೆಲವು ಸಾಹಿತಿಗಳ ಕೃತಿಗಳನ್ನೂ ವಿಶ್ಲೇಷಿಸಿದ್ದಾರೆ. ಒಬ್ಬರ ಸಾಹಿತ್ಯಿಕ ಗುಣಗಳನ್ನು ಇನ್ನೊಬ್ಬರ ಸಾಹಿತ್ಯದೊಂದಿಗೆ ತುಲನೆಮಾಡಿರುವುದು ಇಲ್ಲಿನ ವೈಶಿಷ್ಟ್ಯ.*



**ಪರದೆಯ ಹಿಂದೆ** (ಒಂದು ಭವಿಷ್ಯದ್ವಿಡಂಬನ)

*ಡಿ.ವಿ.ಕೆ. ಮೂರ್ತಿ*

**ಪುಟ :** ೧೦೮ **ಬೆಲೆ :** ರೂ. ೨೫

**ಡಿ.ವಿ.ಕೆ. ಮೂರ್ತಿ,** ಕೃಷ್ಣಮೂರ್ತಿಪುರಂ, ಮೈಸೂರು-೪

*ಇದೊಂದು ತೀಕ್ಷ್ಣ ವಿಡಂಬನೆಯ, ಸಮಾಜದ ಅಸ್ವಸ್ಥತೆಗೆ ಔಷಧಿಯಂತಿರುವ ಬರವಣಿಗೆ. ನೇರವಾಗಿ ಹೆಸರಿಸದ ಅತಿ ಸ್ವಾತಂತ್ರ್ಯದ ಸವಿಯನ್ನು ಉಣ್ಣುತ್ತಿರುವ ರಾಷ್ಟ್ರವೊಂದನ್ನು ಹಿನ್ನೆಲೆಯಾಗಿಟ್ಟು ನಮ್ಮ ದೇಶಕ್ಕೂ ಸ್ವಾತಂತ್ರ್ಯ ಬಂದಾಗ ಭವಿಷ್ಯತ್ತಿನ ಸಂಭವನೀಯ ದುರಂತವನ್ನು ಊಹಿಸಿ ಬರೆದ ಪುಸ್ತಕ. ಸತ್ಯದ ಮುಖಕ್ಕೆ ಪರದೆಯೊಂದು ಇಳಿಬಿದ್ದಾಗ ಸರಿಸಿ ನೋಡುವ ವ್ಯವಧಾನವಿಲ್ಲದೆ ಅಮಾಯಕನೊಬ್ಬ ಅಪರಾಧಿಯಾಗುವ ಸಂದರ್ಭದ ನಿರೂಪಣೆ. ವ್ಯಕ್ತಿಗಳು ಮತ್ತು ಉತ್ತಮ ನಡೆವಳಿಕೆಗಳು ಪರಸ್ಪರ ದೂರ ಸರಿಯುತ್ತಿರುವ ಅಂಶವನ್ನು ಚಿತ್ರಿಸಲಾಗಿದೆ.*

**– ಇಂದಿರಾ ಕುಮಾರಿ**

# ಸಿಬ್ಬಲು ಗುಡ್ಡೆಯ ಹೊಳೆಯಲಿ ಮೀಯುತ

"ತೀರ್ಥಹಳ್ಳಿಯಿಂದ ಸುಮಾರು ಎರಡೂವರೆ ಮೈಲಿ ದೂರದಲ್ಲಿ ಮೇಳಿಗೆ ಎಂಬ ಹಳ್ಳಿ. ಅಲ್ಲಿಂದ ಒಂದೂವರೆ ಮೈಲಿ ಕಾಡಿನ ಕಾಲುದಾರಿಯಲ್ಲಿ ನಡೆದು ಹೋದರೆ ಸಿಬ್ಬಲು ಗುಡ್ಡೆ ಸಿಕ್ಕುತ್ತದೆ. ಈ ಸ್ಥಳ ಹಳ್ಳಿಯೂ ಅಲ್ಲ, ಊರೂ ಅಲ್ಲ. ಅಲ್ಲಿ ಇರುವುದೊಂದೇ ಕಟ್ಟಡ: ಗುಡಿಸಲಿನಂತೆ ತೋರುವ ಗಣೇಶನ ಗುಡಿ. ಅಲ್ಲಿಯೇ ಗುಡಿಯ ಅರ್ಚಕ. ಬೇರೆ ಮನೆಗಳಿಲ್ಲ, ಜನವಿಲ್ಲ.

"ಗುಡಿಯ ಹಿಂದೆ ನಿಬಿಡ ನಿರ್ಜನಾರಣ್ಯಗಳ ನಡುವೆ ಹರಿಯುವ ತುಂಗೆ, ಆಚೆ ದಡದಲ್ಲಿ ತುಸು ಹಳದಿ ಬಣ್ಣದ ಬಿಳಿಯ ಮಳಲ ರಾಶಿ, ಅದರಂಚಿನಲ್ಲಿ ಹಚ್ಚ ಹಸುರಿನ ವನಪಂಕ್ತಿ, ಗುಡಿಯ ಹಿಂಭಾಗದ ನೀರಿನಲ್ಲಿ ನಿರ್ಭೀತಿಯಿಂದ ಚಲಿಸುವ ದೊಡ್ಡ ದೊಡ್ಡ ಮೀನು. ಈ ದೇವರ ಮೀನುಗಳನ್ನು ಯಾರೂ ಹಿಡಿಯುವುದಿಲ್ಲ. ಅವು ವಿಘ್ನೇಶನ ರಕ್ಷೆಯಲ್ಲಿ ಬೆಳೆದು ವಿಹರಿಸುತ್ತಿವೆ."

– ಈ ಲಘು ಟಿಪ್ಪಣಿ ಕುವೆಂಪು ಬರೆದಿರುವ 'ಸಿಬ್ಬಲು ಗುಡ್ಡೆ' (೨೯.೪.೧೯೩೬) ಎಂಬ ಕವನಕ್ಕೆ ಸೇರಿದ್ದು, ಇಲ್ಲಿ ಯಥಾವತ್ತಾಗಿ ಉಲ್ಲೇಖಿಸಲಾಗಿದೆ. ಮಲೆನಾಡಿನ ಹಳ್ಳಿಗಾಡುಗಳಲ್ಲಿ, ವನ್ಯ ತಾಣಗಳಲ್ಲಿ ಗೆಳೆಯರಾದ ಬಿಳುಮನೆ ರಾಮದಾಸ್ ಜೊತೆಯಲ್ಲಿ, ವಿವಿಧ ಋತುಮಾನಗಳಲ್ಲಿ ಅಲೆದಾಡಿರುವ ನನಗೆ 'ಸಿಬ್ಬಲುಗುಡ್ಡೆ' – ಬರಿಯ ಶಬ್ದವಲ್ಲ; ಪ್ರತ್ಯಕ್ಷ ಬಿಂಬವಾಗಿದೆ. ೧೯೩೬ರಲ್ಲಿ ಕುವೆಂಪು ವರ್ಣಿಸಿರುವುದಕ್ಕೂ, ನಾನು ಕಂಡಿರುವುದಕ್ಕೂ ವ್ಯತ್ಯಾಸವೇನೆಂದರೆ, ಕಾಲುದಾರಿಗೆ ಬದಲು ಡಾಂಬರಿನ ರಸ್ತೆ, ಗುಡಿಸಲಿನಂತೆ ತೋರುವ ಗುಡಿಗೆ ಬದಲು ಭವ್ಯವಾದ ಸ್ಥಾವರ ದೇವಾಲಯ, ಕಾಡುಗಳನ್ನು ಕಡಿದು ಬೆಳೆಸಿರುವ ಏಕರೂಪಾತ್ಮಕ ನೆಡುತೋಪುಗಳು ಮತ್ತು ಖಾಸಗಿ ತೋಟಗಳು. ನಿಸರ್ಗ ನಿರ್ಮಿತ ವನ್ಯ ತಾಣವೊಂದರ ವಿನಾಶಕ್ಕೆ ಇದಕ್ಕಿಂತ ಬೇರೆ ಮುನ್ನುಡಿ ಬೇಕೆ? ವಸ್ತುಸ್ಥಿತಿ ಹೀಗಿದ್ದರೂ ಸಿಬ್ಬಲುಗುಡ್ಡೆ – ಇಂದಿಗೂ ತನ್ನ ಆಕರ್ಷಣೆಯನ್ನುಳಿಸಿಕೊಂಡಿದೆ.

ನಾನು ಮಲೆನಾಡಿಗೆ ಹೋದಾಗಲೆಲ್ಲ ಸಿಬ್ಬಲು ಗುಡ್ಡೆಗೆ ಹೋಗುವ ಪರಿಪಾಠವಿಟ್ಟುಕೊಂಡಿದ್ದೇನೆ. ಮಳೆಗಾಲದಲ್ಲಿ ಇಕ್ಕೆಲದ ದಡಗಳೆರಡನ್ನು ಮುಳುಗಿಸಿ ಮೈದುಂಬಿ ಹರಿಯುವ ರಾಗರಂಜಿತ ತುಂಗಾನದಿ, ಬೇಸಿಗೆಯಲ್ಲಿ ದಡಬಿಟ್ಟು ಅಡಗುತ್ತಾ, ನೀರಲ್ಲಿ ಮುಳುಗಿದಾನೆಗಳನ್ನು ಹೋಲುವ ಕಗ್ಗಪ್ಪು ಬಂಡೆಗಳನ್ನು ಕಾಣಿಸುತ್ತಾ ತಿಳಿಯಾಗುತ್ತದೆ. ಮಳೆಗಾಲದ ಹೊಸ ನೀರಿನ ಕೆಂಬಣ್ಣದಲ್ಲಿ ಸ್ಪಷ್ಟವಾಗಿ ಕಾಣದ ಮೀನುಗಳನ್ನು ಸಮೃದ್ಧವಾಗಿ ಮತ್ತು ಸುಸ್ಪಷ್ಟವಾಗಿ ಕಾಣಬೇಕೆಂದರೆ, ಕೆಂಪಳಿದು ನೀರು ತಿಳಿಯಾಗುವುದನ್ನು ಕಾಯಬೇಕಾಗುತ್ತದೆ. ಆಗ ಮೊದಲ ಬಾರಿ ಸಿಬ್ಬಲು ಗುಡ್ಡೆಗೆ ಬಂದಾಗ, ದೇವಸ್ಥಾನದ ಅರ್ಚಕರಿಗೆ ದುಡ್ಡುಕೊಟ್ಟು ಒಂದು ತಟ್ಟೆ ಅಕ್ಕಿಯನ್ನು ಪಡೆದುಕೊಂಡು, ಮೆಟ್ಟಿಲುಗಳ ಮೇಲೆ ಹರಿಯುತ್ತಿರುವ ನೀರಿಗೆ ಹಾಕಿದೊಡನೆ ಅದನ್ನು ಗುಳುಂ ಮಾಡಲು ಧಾವಿಸುವ ಮತ್ಸ್ಯರಾಶಿಯನ್ನು ನೋಡಿಯೇ ಆನಂದಿಸಬೇಕು. ತಮ್ಮ ಧಾವಂತ ಮತ್ತು ಈಜಾಟಗಳಿಂದ ನೀರನ್ನು ಅಲ್ಲೋಲ ಕಲ್ಲೋಲಗೊಳಿಸುತ್ತಾ, ಪ್ರತಿಯೊಂದು ಮತ್ತೊಂದರ ಬೆನ್ನೇರಿ ಮೀನುಗಳೆ ಮೀನ ಸವಾರಿ ಮಾಡುತ್ತಾ, ಹಕ್ಕಿಗಳಂತೆ ಬಾಯಿ ತೆರೆದು ವಯ್ಯಾರವಾಗಿ ಮುಳುಗುತ್ತಿರುವ ಅಕ್ಕಿಯನ್ನು ಜಳಕ್ಕನೆ ನುಂಗಿ ಪಳಕ್ಕನೆ ಮಾಯವಾಗುವ, ಮತ್ತೆ ಹಿಂದಿನಿಂದ ಬಂದು ಮೇಲೆ ಮುಗಿಬೀಳುವ ಆ ದೃಶ್ಯವನ್ನು ಯಾರೊಬ್ಬರೂ ಮರೆಯಲಾರರು.

ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆಯಿಂದ 'ಮತ್ಸ್ಯಧಾಮ'ವೆಂದು ಗುರುತಿಸಲ್ಪಟ್ಟಿರುವ ಈ ವನ್ಯ ತಾಣ ಈ ದೇವರ ಮೀನುಗಳಿಂದಾಗಿಯೇ ಪ್ರಸಿದ್ಧವಾಗಿದೆ. ಅಕ್ಕಿಯೂಟಕ್ಕಾಗಿ ಧಾವಿಸುವ ಮೀನುಗಳ ಸಾಮೂಹಿಕ ಈಜಾಟ, ಹಾರಾಟ, ನುಗ್ಗಾಟ, ಏರಾಟಗಳು ಹೇಗಿರುತ್ತವೆಯೆಂದರೆ, ಮೆಟ್ಟಲುಗಳಿಗೆ ಅಂಟಿಕೊಂಡಂತೆ ದಡದೆತ್ತರದಲ್ಲಿರುವ ದೇವಸ್ಥಾನ ಮತ್ತು ಅರ್ಚಕರ ಮನೆಗಳಿಗೆ ಆ ಎಲ್ಲ ಮೀನುಗಳ ಕಲ್ಲೋಲರವ ಒಗ್ಗೂಡಿ, ಬೃಹತ್ ತಿಮಿಂಗಿಲವೊಂದು ಜಲವನ್ನು ಒಂದೇ ಸಮನೆ ಅಪ್ಪಳಿಸುತ್ತಿರುವಂತೆ ಕೇಳಿಸುತ್ತದೆ. ಇಲ್ಲಿನ ಮತ್ಸ್ಯ ರಾಶಿಯನ್ನು ಕಣ್ಣುಗಳಲ್ಲೇ ಚಪ್ಪರಿಸಿಕೊಂಡು ನೋಡಿದವರೊಮ್ಮೆ ಇರುಳಿನಲ್ಲಿ ಬಲೆ ಬೀಸಿ, ಅರ್ಚಕರಿಗೆ ತಿಳಿಯದಂತೆ ಎಳೆದುಕೊಳ್ಳುತ್ತಿದ್ದಾಗ ಅವು ಗುಂಪಾಗಿ ಹೊರಡಿಸುವ ಕಲ್ಲೋಲರವಕ್ಕೆ ಅರ್ಚಕರು ಎಚ್ಚೆತ್ತು ಎದ್ದು ಬಂದು ಲೈಟು ಹಾಕಿದೊಡನೆ ಆ ದುರುಳರೆಲ್ಲ ಬಲೆಯನ್ನು ಅಲ್ಲೇ ಬಿಟ್ಟು ಓಡಿ ಪರಾರಿಯಾದರಂತೆ! ಕುವೆಂಪು ಕಾಲದಲ್ಲಿ ವಿಘ್ನೇಶನ ರಕ್ಷೆಯಲ್ಲಿದ್ದ ಮೀನುಗಳು ಈ ಕಾಲದಲ್ಲಿ ಅರ್ಚಕರ ಸುರಕ್ಷೆಯನ್ನೂ ಪಡೆಯುತ್ತಿವೆ.

ಸಿಬ್ಬಲುಗುಡ್ಡೆಗೆ ಮಳೆಗಾಲದಲ್ಲೊಮ್ಮೆ ಹೋಗಿದ್ದಾಗ, ಮೈದುಂಬಿ ಹರಿಯುತ್ತಿದ್ದ ತುಂಗಾನದಿಯ ಸಲಿಲ ವಿಸ್ತಾರ, ರಾಗರಂಜಿತ ವೈಭವಗಳಲ್ಲಿ ಮೀನುಗಳು ಹೆಚ್ಚಾಗಿ ಕಾಣಲಿಲ್ಲ. ಮುಳುಗುತ್ತಿರುವ ಅಕ್ಕಿಯೇ ಕಾಣದಿರುವಾಗ, ಮೀನುಗಳು ತಾನೆ ಹೇಗೆ ಕಂಡಾವು? ಆದರೂ, ಮೀನುಗಳ ನೀಳವಾದ ಕಪ್ಪು ಬೆನ್ನಿನ ಅಂಚುಗಳು ಕೆನ್ನೀರಿನಲ್ಲಿ ಎದ್ದು ಕಾಣುತ್ತಿದ್ದವು. ತನ್ನ ಒಡಲಿನಲ್ಲಿ ಮೀನುಗಳನ್ನು ಮಾತ್ರವಲ್ಲದೆ, ಹೆಬ್ಬಂಡೆಗಳನ್ನು ಕೂಡ ಅಡಗಿಸಿಕೊಂಡು ರಭಸವತಿಯಾಗಿ ಹರಿಯುತ್ತಿದ್ದ ತುಂಗೆಯನ್ನು ನೋಡುತ್ತಿದ್ದರೆ, ನುರಿತ ಈಜುಗಾರರ ಮೈಕೂಡ ಜುಮ್ಮೆನ್ನುತ್ತದೆ. ತುಂಗೆಯಲ್ಲ ಈ ಉತ್ತುಂಗೆಯನ್ನು ದಾಟುವ ಧೈರ್ಯ ಯಾರಿಗಿದೆ? ಎಂದು ಪರಿಭಾವಿಸುತ್ತಿದ್ದಂತೆಯೇ ನಾವಿದ್ದ ತಾಣಕ್ಕೆ ತುಸು ದೂರ ದಿಗಂತದಲ್ಲಿ ಮರದ ದಿಮ್ಮಿಯೊಂದು ತೇಲಿ ಬರುತ್ತಿತ್ತು. ಆ ದಿಮ್ಮಿಯ ಮೇಲಿದ್ದ ಕಪ್ಪು ಚುಕ್ಕೆಗಳು ಹತ್ತಿರ ಬರುಬರುತ್ತಾ ಅದು ದಿಮ್ಮಿಗೆ ಬದಲು ದೋಣಿಯಾಗಿದ್ದು ಅದರೊಳಗೆ ಕುಳಿತಿದ್ದ ಮನುಷ್ಯರ ಕಪ್ಪು ತಲೆಗಳೆಂದು ಗೊತ್ತಾಯಿತು. ಆ ಸ್ಥಳೀಯರು ನಾವಿದ್ದ ದಡದಿಂದ ಎದುರುಗಡೆಯಿದ್ದ ಆಚೆ ದಡಕ್ಕೆ ದಾಟಿಕೊಳ್ಳುತ್ತಿದ್ದರು. ಗೆಳೆಯ ಬಿಳುಮನೆ ರಾಮದಾಸ್, ಅವರೆಲ್ಲ ಹಳ್ಳಿಗಾಡಿನ ಜನರೆಂದೂ, ಆಚೆ ದಡದಲ್ಲಿ ಕಾಣುತ್ತಿರುವ ಕಾಡಿನ ಮಧ್ಯೆಯಿರುವ ಆ ಹಳ್ಳಿಗಳ ಹೆಸರು ಹೇಳಿ, ಅಲ್ಲಿಗೆ ಹೋಗುತ್ತಿದ್ದಾರೆಂದೂ ತಿಳಿಸಿದರು.

ಕೋಲಾರದ ಧೂಳು ಮತ್ತು ಬೆಂಗಳೂರಿನ ಹೊಗೆಯುಂಡು ಬೆಳೆದಿದ್ದ, ಪಂಚ ಪಾಂಡವರಂತಿದ್ದ ಅಗನಾಗ್ ಗೆಳೆಯರಿಗೆ ದೋಣಿಯೇರಿ ಆ ಹಳ್ಳಿಗಾಡಿನ ಜನರಂತೆ, ಆಚೆ ದಡಕ್ಕೊಮ್ಮೆ ಭೇಟಿಕೊಟ್ಟು ಮತ್ತೆ ಹಿಂದಿರುಗಿ ಬರುವ ಮನಸ್ಸಾಯಿತು. ಧರ್ಮರಾಯ ರಾಮದಾಸ್ ನೇತೃತ್ವದಲ್ಲಿ ಭೀಮನಂತಿದ್ದ ನಾನು ಸೇರಿಕೊಂಡು ಆ ದೋಣಿಯಿದ್ದ ಜಾಗಕ್ಕೆ ಹೋದೆವು. ಅಷ್ಟು ಹೊತ್ತಿಗೆ ಮರಳಿಬಂದಿದ್ದ ದೋಣಿಯವನನ್ನು ಮಾತನಾಡಿಸಿದೆವು. ಆತನ ಹೆಸರು ನಾಗನಾಯಕನೆಂದು ತಿಳಿಯಿತು. ವಯಸ್ಸು ಐವತ್ತೈದನ್ನು ಮೀರಿದ್ದ ಆ ಅಂಬಿಗನ ಕಟ್ಟಾಳುತನದಲ್ಲಿ ನಂಬಿಕೆಯಿಟ್ಟು ನಮ್ಮನ್ನು ಈ ದಡದಿಂದ ಆ ದಡಕ್ಕೂ, ನಂತರ ಆ ದಡದಿಂದ ಈ ದಡಕ್ಕೂ ದಾಟಿಸಲು ಸಾಧ್ಯವೇ? ಎಂದು ಕೇಳಿದೆವು.

ಸ್ಥಳೀಯರಾದ ರಾಮದಾಸ್ ಮಾತುಕತೆ, ನಮ್ಮೆಲ್ಲರ ಮುಗ್ಧ ಕುತೂಹಲ ಕಂಡು ಮರುಮಾತಿಲ್ಲದೆ ಒಪ್ಪಿಕೊಂಡು ತನ್ನ ದೋಣಿಯೇರಿ ಕುಳಿತುಕೊಳ್ಳಲು ನಾಗನಾಯಕ ಸೂಚನೆಕೊಟ್ಟ. ತುಂಗೆಯಲ್ಲಿ ರಭಸವಾಗಿ ಹರಿದು ಹೋಗುತ್ತಿದ್ದ ಕಸ ಕಡ್ಡಿಗಳನ್ನು ಸ್ಮರಿಸಿಕೊಳ್ಳುತ್ತಾ, ಆ ತೋಡು ದೋಣಿಯಲ್ಲಿ ನಾವು ಪಂಚಪಾಂಡವರು ಜೀವ ಹಿಡಿದು ಕುಳಿತೊಡನೆ, ನಾಗನಾಯಕ ಹುಟ್ಟು ಗೋಲನ್ನು ಮೀಟಿ ದೋಣಿಯನ್ನು ಮೇಲ್ಮುಖವಾಗಿ ನಡೆಸತೊಡಗಿದನು. ಎದುರಿಗಿದ್ದ ದಡಕ್ಕೆ ನೇರವಾಗಿ ಹುಟ್ಟು ಹಾಕದೆ, ನದಿಗೆದುರಾಗಿ ಹತ್ತು ಮೀನುಗಳಂತೆ ಮೇಲ್ಮುಖವಾಗಿ ಹುಟ್ಟು ಹಾಕುತ್ತಾ ತನ್ನ ನುರಿತ ಕಲೆಯನ್ನು ಲೀಲೆಯೆಂಬಂತೆ ತೋರುತ್ತಿದ್ದ ಆ ಅಂಬಿಗನನ್ನು ನಾವು ಪ್ರಶ್ನಿಸದೆ ಬಿಡಲಿಲ್ಲ. ನೀರಿನ ಸೆಳೆವು ಅಧಿಕವಾಗಿರುವುದರಿಂದ ಹೀಗೆ ನದಿಗೆದುರಾಗಿ ದೋಣಿಯನ್ನು ನಡೆಸಬೇಕೆಂದೂ ಮತ್ತೆ ಮೆಲ್ಲಗೆ ಕೆಳಮುಖನಾಗಿ ದಡದಗುಂಟ ಬಂದು ಆಯಕಟ್ಟಿನಲ್ಲಿ ದೋಣಿ ನಿಲ್ಲಿಸಬೇಕೆಂದೂ ಆತ ತಿಳಿಸಿದ. ನೇರವಾಗಿ ಸರಳರೇಖೆಯಂತೆ ನದಿಯನ್ನು ದಾಟುವ ಬದಲು, ತ್ರಿಕೋನದ ಗೋಪುರ ಬಾಹುಗಳಂತೆ ನದಿಗೆದುರಾಗಿ ಮೇಲೇರಿ ಮತ್ತೆ ಕೆಳಗಿಳಿದು ಬರುವ ಈ ನಾಡ ದೋಣಿಯ ಪಯಣ ನನ್ನ ಪಾಲಿಗೊಂದು ಮರೆಯಲಾಗದ ಅನುಭವ. ಜಲದ ಒಡಲನ್ನು ಸೌದೆ ಸಿಗಿದಂತೆ ನೇರವಾಗಿ ಸಿಗಿಯುತ್ತಾ ರಭಸವಾಗಿ ನುಗ್ಗುವ ಮೋಟಾರು ಬೋಟುಗಳಲ್ಲಿ ಕುಳಿತು ಸಂಚರಿಸುತ್ತಿದ್ದ ಅನುಭವವನ್ನು ನಾಗನಾಯಕನ ಸಾಹಸಯಾನ



ದೆದುರು ದೃಷ್ಟಿ ನಿವಾಳಿಸಿ ತೆಗೆದು ಬಿಸಾಡಬೇಕೆನಿಸಿತು. ನಾಗನಾಯಕ ಮತ್ತು ಅವನ ದೋಣಿಗೆ ಜಿಂದಾಬಾದ್ !

ಸಿಬ್ಬಲು ಗುಡ್ಡೆಗೆ ನೀಡಿದ ನನ್ನ ಭೇಟಿಗಳಲ್ಲಿ ಮರೆಯಲಾಗದ ಮತ್ತೊಂದು ಅನುಭವವೆಂದರೆ, ರಿವರ್ ಟರ್ನ್ ಅಥವಾ ಗಂಗಾಕುರರಿ ಎಂಬ ಪಕ್ಷಿಯ ಹಾರಾಟ. ಈ ಪಕ್ಷಿಗಳು ನದಿ ಮಧ್ಯದಲ್ಲಿ ತಲೆಯೆತ್ತಿರುವ ಬಂಡೆನೆತ್ತಿಯ ಕುಗ್ಗು ತಗ್ಗುಗಳಲ್ಲಿ ಮೊಟ್ಟೆಯಿಟ್ಟು ಮರಿ ಮಾಡಿ ಆ ನದಿಯ ಮೀನುಗಳನ್ನೇ ಹಿಡಿದು ತಿಂದು, ಮಕ್ಕಳನ್ನು ಸಾಕಿ ದೊಡ್ಡವರನ್ನಾಗಿ ಮಾಡಿ ಮರಳಿ ತಮ್ಮ ಮೂಲ ನೆಲೆಯಾದ ಖಂಡಾಂತರ ದೇಶಗಳಿಗೆ ಹೊರಟು ಹೋಗುತ್ತವೆ; ಮತ್ತೆ ಸಂತಾನೋತ್ಪತ್ತಿಗಾಗಿ ಭಾರತ ಭೂಮಿಗೆ ಹಾರಿ ಬರುತ್ತವೆ. (ಇದರಲ್ಲಿ ನಾಲ್ಕು ಬಗೆಯ ವೈವಿಧ್ಯಗಳಿವೆ). ಬಂಡೆಯ ಬಣ್ಣಕ್ಕೆ ಹೊಂದಿದಂತೆ ಕಾಣುವ ಈ ಪಕ್ಷಿಯ ನೆತ್ತಿ ಕಪ್ಪಾಗಿದ್ದರೆ, ಕತ್ತು - ಹೊಟ್ಟೆಯ ಭಾಗವೆಲ್ಲ ಬೆಳ್ಳಗಿರುತ್ತದೆ. ಕಾಲುಗಳು ಮತ್ತು ಕೊಕ್ಕು ನಸು ಹಳದಿ ಮಿಶ್ರಿತ ಕೆಂಬಣ್ಣದಿಂದ ಕೂಡಿರುತ್ತದೆ. ರಿವರ್ ಟರ್ನ್ ಹಕ್ಕಿಯ ನೀಳವಾದ ಕೊಕ್ಕು 'ಚಲಿಸುವ ಗಾಳ' ಎನ್ನಬಹುದು. ಮನುಷ್ಯ ಮೀನು ಹಿಡಿಯಲು ಎರೆ ಸಿಕ್ಕಿಸಿದ ಗಾಳ ಹಾಕಿ 'ಸ್ಥಾವರ'ದಂತೆ ಒಂದು ಕಡೆ ಕುಳಿತಿರಬೇಕಾಗುತ್ತದೆ. ಆದರೆ, ಈ ಹಕ್ಕಿ ತನ್ನ ಕೊಕ್ಕನ್ನೇ ಗಾಳ ಮಾಡಿಕೊಂಡು ನದಿಯ ಮೇಲ್ಮೈಯಲ್ಲಿ, ಕೆಲವೇ ಅಡಿಗಳಷ್ಟು ಎತ್ತರದಲ್ಲಿ ನದಿಗೆದುರಾಗಿ ಎರಡು ದಡಗಳ ಮಧ್ಯೆ ಜಿಗ್‌ಜಾಗ್ ಶೈಲಿಯಲ್ಲಿ ಹೋಲಿಗೆಯಿಲ್ಲದ ಹಾರಾಟ ಮಾಡುತ್ತಾ 'ಜಂಗಮ'ವಾಗಿಯೇ ಮೀನು ಹಿಡಿಯುವ ಬಗೆ ಅಪೂರ್ವವಾದುದು! ಈ ಜಂಗಮ ಗಾಳದ ಗುರಿ ಎಷ್ಟು ಖಚಿತವಾಗಿರುತ್ತದೆಯೆಂದರೆ ಅದು ಜಲಕ್ಕೆ ಎರಗಿದರೆ ಕೊಕ್ಕಿನಲ್ಲಿ ಬೆಳ್ಳಿಮೀನು ಫಳ ಫಳ ಹೊಳೆಯುತ್ತಿರುವುದು ಮೇಲೆ ಹಾರುವಾಗ ನೋಡಬಹುದು. ನಾನು ತುಂಗೆಯ ದಡಗಳಲ್ಲಿ ಅಲೆಯುವಾಗಲೆಲ್ಲ ಈ 'ಗಂಗಾಕುರರಿ'ಯನ್ನು ಅಲ್ಲಲ್ಲ! 'ತುಂಗಾ ಕುರರಿ'ಯನ್ನು ತಪ್ಪದೆ ನೋಡುತ್ತೇನೆ.

ಸಿಬ್ಬಲು ಗುಡ್ಡೆಯ ಆಚೆ ದಡದ ಸುವಿಶಾಲ ಮರಳ ಹಾಸುಗೆಯ ಹಿನ್ನೆಲೆಯಲ್ಲಿ ಹಚ್ಚ ಹಸುರಿನ ಕಾಡು ಇದೆಯೆಂದು ಆಗಲೇ ಹೇಳಿದ್ದೇನೆ. ಭೂಮಿ ತಾಯಿಯ ಅಕ್ಕರೆಯ ಸಕ್ಕರೆಯಂತಿರುವ ಮರಳ ರಾಶಿಯಲ್ಲಿ ಒಂಟಿ ಮರವೊಂದು ತಲೆಯೆತ್ತಿ ನಿಂತಿರುತ್ತದೆ. ಈ ಮರದ ತುಂಬ ಕುಳಿತಿರುವ ಬೆಳ್ಳಕ್ಕಿಗಳ ಹಿಂಡು ದೂರನೋಟಕ್ಕೆ ಅರಳಿದ ಹೂಗಳಂತೆ ಕಾಣುತ್ತವೆ. ನಿಸರ್ಗದ ಈ ಸಹಜ ಯೋಗವನ್ನು ಬಾಣ ಘಾತದ ಮೂಲಕ ಮಾನವ ನಿಷಾದನು ಹೊಡೆದುರುಳಿಸಿದ್ದರಿಂದಲೇ ರಾಮಾಯಣ ಹುಟ್ಟಿಕೊಂಡಿತು. ಇದು ಇಂದಿಗೂ ವಿರಮಿಸದೆ ಬಗೆ ಬಗೆಯ ರಾಮಾಯಣಗಳನ್ನು ಹುಟ್ಟುಹಾಕುತ್ತಿವೆಯೆಂದು ಪ್ರಾಜ್ಞರು ಹೇಳಿದ್ದಾರೆ. ಸಿಬ್ಬಲು ಗುಡ್ಡೆಯೆಂಬ ವನ್ಯತಾಣ, ಹರಿಯುತ್ತಿರುವ ತುಂಗಾನದಿ, ಒಂದೆ ಗುಂಪಾಗಿ ಹಾರುತ್ತಿರುವ ಬೆಳ್ಳಕ್ಕಿಗಳ ಹಿಂಡು, ಕಿಕ್ಕಿರಿದ ಅಡವಿಯ ಅಂಚುಗಳು ಮತ್ತು ಆಕಾಶದ ನೀಲಿ ಪರದೆ – ಇವೆಲ್ಲ ಕುವೆಂಪುಗೆ ಸ್ಫೂರ್ತಿ ನೀಡಿ 'ದೇವರು ರುಜು ಮಾಡಿದನು' – ಎಂಬ ಕವಿತೆಗೆ ಪ್ರೇರಣೆ ನೀಡಿದೆ. ಇದರಿಂದಾಯ್ದ ಸಾಲುಗಳಿವು :

''ಬಿತ್ತರದಾಗಸ ಹಿನ್ನೆಲೆಯಾಗಿರೆ
ಪರ್ವತದೆತ್ತರ ಸಾಲಾಗೆಸೆದಿರೆ
ಕಿಕ್ಕಿರಿದಡವಿಗಳಂಚಿನ ನಡುವೆ
ಮೆರೆದಿರೆ ಜಲಸುಂದರಿ ತುಂಗೆ
ದೇವರು ರುಜು ಮಾಡಿದನು,
ರಸವಶನಾಗುತ ಕವಿ ಅದ ನೋಡಿದನು !
ನದಿ ಹರಿದಿತ್ತು; ಬನ ನಿಂತಿತ್ತು;
ಬಾನ್ ನೀಲಿಯ ನಗೆ ಬೀರಿತ್ತು,
ನಿರ್ಜನ ದೇಶದ ನೀರವ ಕಾಲಕೆ
ಖಗರವ ಪುಲಕಂ ತೋರಿತ್ತು.
ಹೂ ಬಿಸಿಲಲಿ ಮಿರುಗಿರೆ ನಿರಿವೊನಲು
ಮೊರೆದಿರೆ ಬಂಡೆಗಳಲಲಿ ನೀರ್‍ೊದಲು
ರಂಜಿಸೆ ಇಕ್ಕೆಲದಲಿ ಹೊಮ್ಮಳಲು
ಸಿಬ್ಬಲು ಗುಡ್ಡೆಯ ಹೊಳೆಯಲಿ ಮೀಯುತ
ಕವಿ ಮನ ನಾಕದಿ ನೆಲಸಿತ್ತು;
ಮಧು ಸೌಂದರ್ಯದ ಮಧುರ ಜಗತ್ತು
ಹೃದಯ ಜಿಹ್ವೆಗೆ ಜೇನಾಗಿತ್ತು!''

ಸಿಬ್ಬಲು ಗುಡ್ಡೆಯ ಹೊಳೆ ಹೃದಯ ಜಿಹ್ವೆಗೆ ಜೇನಾಗಿತ್ತು ಎಂಬ ಕುವೆಂಪು ನುಡಿ ಇಂದಿಗೂ ಸತ್ಯವಾಗಿದೆ. ಕೆಲವು ತಿಂಗಳುಗಳ ಹಿಂದೆ ಬಿಳುಮನೆ ರಾಮದಾಸ್ ಮತ್ತಿತರ ಗೆಳೆಯರೊಂದಿಗೆ ಸಿಬ್ಬಲು ಗುಡ್ಡೆಗೆ ಹೋಗಿದ್ದೆ. ಅಲ್ಲಿಗೆ ಹೋಗಬೇಕಾದರೆ ದೇವರ ಮೀನುಗಳಿಗೆ ಹಾಕಲೆಂದು ಎರಡು ಸೇರು ಮಂಡಕ್ಕಿ, ಎರಡು ಪೌಂಡು ಬ್ರೆಡ್ಡು, ಎರಡು ಬಿಸ್ಕೀಟು ಪ್ಯಾಕೆಟ್‌ಗಳನ್ನು ಕೊಂಡು ತಂದಿದ್ದೆವು. ನಾವು ಸಿಬ್ಬಲು ಗುಡ್ಡೆಯನ್ನು ತಲುಪುತ್ತಿದ್ದಂತೆಯೇ, ನಮ್ಮ ಹಿಂದೆಯೇ ಮತ್ತೊಂದು ಕೌಟುಂಬಿಕ ತಂಡ ಬಂದಿಳಿಯಿತು. ನೀರಲ್ಲಿ, ತೇಲುತ್ತಿದ್ದ ಮಂಡಕ್ಕಿಗೆ ಮುಗಿ ಬೀಳುತ್ತಿದ್ದ ಮೀನುಗಳ ಅಲ್ಲೋಲ ಕಲ್ಲೋಲ ಬಹುದೂರಕ್ಕೂ ಕೇಳಿಸುತ್ತಿತ್ತು. ಆ ಕೌಟುಂಬಿಕ ತಂಡದಲ್ಲಿ ತಂದೆ-ತಾಯಿ-ಮಗಳು-ಮಗ ಎಲ್ಲರೂ ಇದ್ದು, ಸ್ಥಳೀಯ ನೆಂಟರ ಜೊತೆಗೂಡಿ ಮೊದಲ ಬಾರಿ ಸಿಬ್ಬಲು ಗುಡ್ಡೆಗೆ ಬಂದಿದ್ದರು. ಇದರಿಂದ

ಸಹಜವಾಗಿಯೇ ಅವರ ಉತ್ಸಾಹ ತಾರಕಕ್ಕೆ ಏರಿತ್ತು. ಆ ಮಕ್ಕಳ ಜೊತೆಗೂಡಿದ ನಾವು ಅವರ ಉತ್ಸಾಹದಲ್ಲಿ ಭಾಗಿಗಳಾದೆವು. ನಮ್ಮ ಬಳಿ ಇದ್ದ ಮಂಡಕ್ಕಿ, ಬ್ರೆಡ್ಡು ಬಿಸ್ಕೀಟುಗಳನ್ನು ನಮ್ಮಿಂದ ಪಡೆದುಕೊಂಡು ಅವರೂ ಮೀನುಗಳಿಗೆ ಹಾಕುತ್ತಿದ್ದರು. ಒಂದರ ಮೇಲೊಂದು ಏರಿಕೊಂಡು ಡಬ್ಬಲ್ ಡೆಕ್ಕರ್‌ಗಳಾಗುತ್ತಿದ್ದ ಮೀನುಗಳ ಮೂತಿ, ಬೆನ್ನು, ಬಾಲಗಳನ್ನು ನಾವೆಲ್ಲರೂ ಹಸು-ಕರುಗಳ ಬೆನ್ನು ಸವರುವಂತೆ ಸವರುತ್ತಿದ್ದೆವು. ಆ ಮತ್ಸ್ಯರಾಶಿ ಜಲವನ್ನು ಅಪ್ಪಳಿಸುತ್ತಿದ್ದ ರೀತಿಗೆ ನಮ್ಮೆಲ್ಲರ ಬಟ್ಟೆಗಳು ಒದ್ದೆಮುದ್ದೆಯಾಗಿಬಿಟ್ಟವು. ಪ್ಯಾಂಟು ಮತ್ತು ಸ್ಲೀವ್‌ಲೆಸ್ ಉಡುಪಿನಲ್ಲಿದ್ದ ಆ ತಂಡದ ಮಗಳು ಹದಿನಾರರ ಚೆಲುವೆಯಾಗಿದ್ದು ಮೆಟ್ಟಲುಗಳ ಮೇಲಿಳಿದು ನೀರಲ್ಲಿದ್ದ ಮೀನುಗಳನ್ನು ಮಗುವಿನಂತೆ ಎತ್ತಿಕೊಳ್ಳಲು ವಿಫಲ ಯತ್ನ ನಡೆಸುತ್ತಿದ್ದಳು. ಆ ಮೀನುಗಳೋ ಒಂದೊಂದೂ ಐದರಿಂದ ಹತ್ತು ಕೆ.ಜಿ.ಗಳವರೆಗೆ ತೂಗುವ ಭಾರಿ ಗಾತ್ರದ ಮೀನುಗಳಾಗಿದ್ದವು. ನಮ್ಮ ಮಿತ್ರರೊಬ್ಬರು ಹದಿನಾರರ ಚೆಲುವೆಯ ಸಾಹಸವನ್ನು ಕಂಡು ಉತ್ತೇಜಿತರಾಗಿ "ನೀನು ಮೀನಿನಂತೆಯೇ ಇರುವೆ; ಅವುಗಳು ನಿನ್ನನ್ನು ಎಳೆದುಕೊಂಡುಬಿಟ್ಟಾವು" - ಎಂದು ಚುಡಾಯಿಸಿದರು. ನಾನಾಗ, "ಮೀನಿನಂತೆ ಅಲ್ಲ! ಮರ್ಮೇಡ್‌ನಂತೆ" ಎಂದು ತಿದ್ದುಪಡಿ ಸೂಚಿಸಿದೆ. ಆ ಚೆಲುವೆಯ ತಾಯಿ ಕೂಡ ನಗುತ್ತಾ "ಹೌದು! ಮರ್ಮೇಡ್‌ನಂತೆ!" – ಎಂದು ಪುನರುಚ್ಚರಿಸಿ ಅನುಮೋದಿಸಿದರು. ಅಶ್ಲೀಲತೆಯ ಸೋಂಕಿಲ್ಲದೆ, ನಡೆಯುತ್ತಿದ್ದ ನಗೆಚಾಟಿಕೆಯ ಮಾತುಗಳಿಗೆ ಆ ಹುಡುಗಿಯ ತಂದೆಯೂ ಸೇರಿದಂತೆ ಎಲ್ಲರೂ ತಲೆದೂಗುತ್ತಿದ್ದರು. ನಾನು ಅಂಗೈಯಲ್ಲಿ ಬಿಸ್ಕೀಟು ಹಿಡಿದು ನೀರಲ್ಲಿ ಮುಳುಗಿದಂತೆ ಹಿಡಿದಾಗ ತಕ್ಷಣ ಧಾವಿಸಿದ ಮೀನು, ನನ್ನ ಅಂಗೈಗೆ ಬಾಯಿ ಹಾಕಿ ಬಿಸ್ಕೀಟನ್ನು ಮಾತ್ರ ಎಳೆದುಕೊಂಡಿತು. ಇಂಥ ಮತ್ಸ್ಯಚುಂಬನ ಯಾರಿಗುಂಟು? ಯಾರಿಗಿಲ್ಲ?

ಬ್ರೆಡ್ಡು ಮುಗಿದುಹೋದಾಗ ನಮ್ಮ ಮಿತ್ರರೊಬ್ಬರು ಅದರ ಪ್ಲಾಸ್ಟಿಕ್ ಕವರನ್ನು ನೀರಿಗೆಸೆದುಬಿಟ್ಟರು. ಇದನ್ನು ಕಂಡ ಆ ಹುಡುಗಿಯ ತಮ್ಮ ತೀವ್ರವಾಗಿ ಆಕ್ಷೇಪಿಸುತ್ತಾ "ಅಂಕಲ್! ಪ್ಲಾಸ್ಟಿಕ್ ಕವರ್ ನೀರಿಗೆ ಹಾಕಬೇಡಿ" – ಎಂದು ಕೂಗಾಡಿದ. ಆ ಹುಡುಗನ ಪರಿಸರ ಪ್ರಜ್ಞೆಯನ್ನು ಅಭಿಮಾನದಿಂದ ಮೆಚ್ಚುತ್ತಾ ಪ್ಲಾಸ್ಟಿಕ್ ಕವರ್ ತೆಗೆಯಲು ಪ್ರಯತ್ನಿಸುತ್ತಿದ್ದಂತೆಯೇ ಬಿಳುಮನೆ ರಾಮದಾಸ್ ಉದ್ದನೆಯ ಕೋಲೊಂದನ್ನು ಹುಡುಕಿ ತಂದು ಕೈಗೆ ಎಟುಕದಂತಿದ್ದ ಆ ಪ್ಲಾಸ್ಟಿಕ್ ಕವರನ್ನು ಕೋಲಿನಿಂದ ಎಳೆದುಕೊಂಡರು. ನಾನು ಆ ಪ್ಲಾಸ್ಟಿಕ್ ಕವರ್‌ಗಳನ್ನು ಆಯತೊಡಗಿದೆ. ಮೆಟ್ಟಿಲುಗಳ ಮೇಲೆ ಮಾತ್ರವಲ್ಲ! ನಾವಿದ್ದ ದಡವೆಲ್ಲ ಪ್ಲಾಸ್ಟಿಕ್‌ಮಯ! ನನಗೆ ಗುಡ್ಡವನ್ನು ಗುಡಿಸಲು ಸಾಧ್ಯವೆ? ಎಂಬ ನಿರಾಸೆ ಕವಿದು ಸಿಕ್ಕಷ್ಟು, ದಕ್ಕಿದಷ್ಟು ಪ್ಲಾಸ್ಟಿಕ್ ಆಯ್ದು ಆ ದೇವಸ್ಥಾನದ ಎತ್ತರದ ಪಾವಟಿಗೆಯ ಮೇಲೆ ಕಸದ ಬುಟ್ಟಿಯಂತೆ ದೊಡ್ಡ ಕವರೊಂದನ್ನು ರೂಪಿಸಿ, ಅಲ್ಲೇ ಇಟ್ಟುಬಿಟ್ಟೆ. ಆಗ ಇದ್ದಕ್ಕಿದ್ದಂತೆ ಸ್ಫೋಟದ ಸದ್ದೊಂದು ಕೇಳಿಸಿತು. ಅದೇನೆಂದು ನೋಡಿದರೆ ನಾಲ್ಕೈದು ಜನ ಆಚೆದಡದಲ್ಲಿದ್ದು ನೀರಿಗಿಳಿದು ಮೀನುಗಳನ್ನು ಆಯ್ದುಕೊಳ್ಳುತ್ತಿದ್ದರು. ಸ್ಫೋಟದ ಸದ್ದನ್ನು ಕೇಳಿಸಿಕೊಂಡು ಸಾಕಷ್ಟು ಪಳಗಿದ್ದ ಗಿಡುಗಗಳು ನದಿಯ ಮೇಲೆ ವೃತ್ತಾಕಾರವಾಗಿ ಹಾರುತ್ತಾ ಕಣ್ಣಿಗೆ ಬಿದ್ದ ಮೀನುಗಳನ್ನು ಕಚ್ಚಿಕೊಂಡು ಹೋಗುತ್ತಿದ್ದವು. ನನಗೆ ತಕ್ಷಣಕ್ಕೆ ಅದೇನೆಂದು ಗೊತ್ತಾಗಲಿಲ್ಲ. ಬಿಳುಮನೆ ರಾಮದಾಸ್ "ಅದೇ! ತೋಟಾ ಹಾಕಿ ಮೀನು ಹಿಡಿಯುವುದು"– ಎಂದರು. ಹಿಂದೊಮ್ಮೆ ನಾಗನಾಯಕನ ದೋಣಿಯಿದ್ದ ಜಾಗದಿಂದ ಅಲ್ಲಿಗೆ ಹೋಗಬೇಕಾಗಿತ್ತು. ನಾವು ಹೋಗುವಷ್ಟರಲ್ಲಿ, ಅವರೆಲ್ಲ ಆಚೆ ದಡದಲ್ಲಿರುವುದರಿಂದ ಯಾರ ಕೈಗೂ ಸಿಗದೆ ಪರಾರಿಯಾಗಬಹುದಿತ್ತು. ಮತ್ಸ್ಯಧಾಮ ಅಥವಾ ದೇವರ ಮೀನುಗಳಿದ್ದ ಪ್ರದೇಶಕ್ಕೆ ಅತಿ ಹತ್ತಿರದಲ್ಲೇ ಈ ಕೃತ್ಯ ನಡೆಯುತ್ತಿರುವುದಕ್ಕೆ ಏನು ಹೇಳೋಣ. ತೋಟಾ ಹಾಕಿ ಮೀನು ಹಿಡಿಯುವ ಬಗೆ ಆಧುನಿಕತೆಯ ವಿಕೃತಿಗೊಂದು ನಿದರ್ಶನವಾಗಿದೆ. ಬಂಡೆ ಸಿಡಿಯುವ ಮದ್ದನ್ನು ಇದಕ್ಕಾಗಿ ಬಳಸುತ್ತಾರೆಂದು ರಾಮದಾಸ್ ತಮ್ಮ ಪ್ರಬಂಧವೊಂದರಲ್ಲಿ ಸುದೀರ್ಘವಾಗಿ ನಿರೂಪಿಸಿದ್ದಾರೆ.

ಗಾಳ ಹಾಕಿ ಮೀನು ಹಿಡಿಯುವುದು, ಹತ್ತು ಮೀನು ಕಡಿಯುವುದು, ಬಲೆ ಬೀಸುವುದು, ನೀರಿಗೆ ಕಟ್ಟುಕಟ್ಟಿ ಸೊಪ್ಪುಸದೆ ಕದಡುವುದು, ನೀರು ಸೋಸುವುದು, ಕೊಡಮೆ ಹಾಕಿ ಮೀನು ಹಿಡಿಯುವುದು – ಮುಂತಾದ ವಿಧಾನಗಳನ್ನು ಕಂಡಿದ್ದ ನನಗೆ 'ತೋಟಾ ಹಾಕಿ ಮೀನು ಹಿಡಿಯುವುದು' ಭಯಂಕರವಾಗಿತ್ತು. ಪ್ಲಾಸ್ಟಿಕ್ ಕವಚ ಮತ್ತು ಪೇಪರ್ ಬಾಲ್ ಒಳಗಿರುವ ಮದ್ದು ಭಾರವಾದ ವಸ್ತುವಾದ ಕಾರಣವಾಗಿ ನೀರಲ್ಲಿ ಮುಳುಗಿ ತಳ ಸೇರುತ್ತದೆ. ಅಲ್ಲಿ ಹಚ್ಚಿದ್ದ ಬತ್ತಿ ನಿಧಾನವಾಗಿ ಉರಿಯುತ್ತಾ ಮದ್ದನ್ನು ಸ್ಫೋಟಿಸುತ್ತದೆ. ಒಂದು ನಿರ್ದಿಷ್ಟ ವ್ಯಾಪ್ತಿಯೊಳಗಿರುವ ಎಲ್ಲ ಜಲಚರಗಳು, (ಮೀನುಗಳಾದರೆ ಕಿವಿರುಗಳೊಡೆದು) ಸತ್ತು ಮೇಲೆ ತೇಲುತ್ತಿರುತ್ತವೆ. ಅವುಗಳಲ್ಲಿ ಬೇಕಾದುವನ್ನು ಮಾನವರು, ಬೇಡಾದುದನ್ನು ಗಿಡುಗಗಳು ಆಯ್ದುಕೊಳ್ಳುತ್ತವೆ. ಆ ಮದ್ದಿನ ಮೀನು ಶಿಕಾರಿಗೆ ತಡೆ ಇಲ್ಲವೆ? ದೇವರ ಮೀನುಗಳಿಗಾದರೂ ರಕ್ಷೆ ನೀಡಬೇಕಲ್ಲವೆ? ೧೯೩೬ರಲ್ಲಿ ಕುವೆಂಪು ಬರೆದಿದ್ದ 'ಸಿಬ್ಬಲುಗುಡ್ಡೆ' ಕವನದ ಸಾಲುಗಳನ್ನೊಮ್ಮೆ ಅವಲೋಕಿಸಿರಿ:

........ಹಬ್ಬಿದ ಮಳಲು ಹಳದಿಯನಪ್ಪಿ
ಪ್ರವಹಿಸಿದೆ ತುಂಗಾ ಸಲಲಿ ನೀಲು ಮಾ ಪ್ರೀತಿ
ಪ್ರೇಮ ಸಂಗೀತಮಂ ಹಾಡಿ– "ಏಂ ನಿರ್ಭೀತಿ
ಮೀಂಗಳಿಗೆ!" ರಮ್ಯತೆಗೆ ತಿಲಕವಿಟ್ಟಂತೊಪ್ಪಿ
ಅದೊ ಹಾರಿ ಬರುತಲಿವೆ ನೀರ್ಕಾಗೆ ಬೆಳ್ಳಕ್ಕಿ,
ವನಪಟದ ಭಿತ್ತಿಯಲಿ ನೂರು ಕರಿಬಿಳಿ ಚುಕ್ಕಿ,
ಪ್ರಾಣವೇ ವರ್ಣಚಿತ್ರಂ ಬರೆಯುತಿರುವಂತೆ
ಪ್ರಾಣಮಯವಾಗಿ! ದರ್ಶನಕೆ ಕಬ್ಬಿಗನ ಮೈ
ಹೊಳೆಯಂತೆ, ನೀರಂತೆ, ಬಾನಂತೆ, ಬನದಂತೆ
ಪುಲಕಿತಂ, ಪರವಶಂ, ಪಸುಳೆವೋಲ್ ತಕ್ಕೈ!
(೨೯.೪.೧೯೩೬)

"ಏಂ ನಿರ್ಭೀತಿ ಮೀಂಗಳಿಗೆ" – ಎಂಬ ವಾತಾವರಣವನ್ನು ಮತ್ಸ್ಯಧಾಮದಲ್ಲಿ ಮರಳಿ ಸೃಷ್ಟಿಸಲು ಸಾಧ್ಯವೆ? ಅಥವಾ "ಏಂ ಭೀತಿ ಮೀಂಗಳಿಗೆ" – ಎಂದು ಉದ್ಗರಿಸಿ ಸುಮ್ಮನಿರೋಣವೆ?

ಎ. ಚಂದ್ರಶೇಖರ ನಂಗಲಿ
೩.೨೮೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

೩೩ನೇ ಪುಟದಿಂದ

ವನಮಹೋತ್ಸವ ಎಂಬುದು ಮಂತ್ರಿಗಳು, ಶಾಲಾ ಮಕ್ಕಳು ರಾಷ್ಟ್ರೀಯ ದಿನಾಚರಣೆಗಳ ಸುಸಂದರ್ಭದಲ್ಲಿ ಗಿಡ ನೆಡುವ ಒಂದು ಪ್ರಸಂಗ. ಎಲ್ಲೆಡೆಯೂ ಆಕೇಸಿಯಾ, ನೀಲಗಿರಿ, ಅಶೋಕ ವೃಕ್ಷಗಳ ಅರಣ್ಯ ಕಂಡುಬರುತ್ತಿದೆ. ಒಳಿತು ಸರಿ, ಆದರೆ ಅವುಗಳನ್ನು ನೋಡುವಾಗ ನೈಜವಾಗಿ ಬೆಳೆದ ಕಾಡಿನ ನಿಸರ್ಗ ಸಿರಿಯ ಅನುಭವ ಆಗಲಿಕ್ಕಿಲ್ಲ. ನಾನಾ ಜಾತಿಯ ಗಿಡ - ಮರ ಬಳ್ಳಿಗಳು, ಅಲ್ಲಿ ಹೊಂಚುಹಾಕುವ ರವಿರಶ್ಮಿ, ನೆರಳು - ಬೆಳಕಿನಾಟ, ಹಕ್ಕಿಗಳ ಕಲರವ, ಜೀರುಂಡೆ - ಕಪ್ಪೆಗಳ ಸಂಗೀತಮೇಳ – ಈ ಕೃತಕ ಕಾಡುಗಳಲ್ಲಿ ಕಾಣಬಹುದು. ಎಲ್ಲೂ ಜಾಗ ಸಿಗದ ಪ್ರೇಮಿಗಳಿಗೆ ಮರೆ ಸಿಗುತ್ತದಷ್ಟೆ! ಒಮ್ಮೊಮ್ಮೆ ಅನಿಸುತ್ತದೆ, ಹೀಗೆ ಒಂದೇ ಜಾತಿಯ ಮರಗಳನ್ನು ಬೆಳೆಯುವುದರಿಂದ ಪ್ರಕೃತಿಯ ಸಮತೋಲನ ತಪ್ಪೀತೆ ಎಂದು.

ಕೆಲ ವೈಜ್ಞಾನಿಕ ಬೆಳವಣಿಗೆಗಳು ನಿಜಕ್ಕೂ ಸ್ವಾಗತಾರ್ಹ. ಗಾಳಿಯ ಶಕ್ತಿ ಘಟಕಗಳಿಂದ ಹಳ್ಳಿಗಳ ವಿದ್ಯುತ್ ಪೂರೈಕೆ ಆಗುವುದೂ, ಸೌರ ವ್ಯವಸ್ಥೆಯಿಂದ ನಗರದ ಬಡಾವಣೆಗಳಲ್ಲಿ ವಿದ್ಯುತ್ ಗೃಹ ಬಳಕೆ ಮಿತವ್ಯಯ ಸಾಧಿಸಿರುವುದೂ, ಗೋಬರ್ ಅನಿಲದಿಂದ ಹಳ್ಳಿ ಹಳ್ಳಿಗಳಲ್ಲಿ ಮರ ಮುಟ್ಟುಗಳ ಸುಡುವಿಕೆ ಕಡಿಮೆಯಾಗಿರುವುದೂ, ಇತ್ಯಾದಿ. ಈ ಎಲ್ಲ ಬೆಳವಣಿಗೆ ಇನ್ನಷ್ಟು ಕಾಡುಗಳು ನಶಿಸುವುದು ತಡೆದಾವು.

ಬೆಂಗಳೂರಿನ ನೆಹರೂ ಪ್ಲಾನಟೇರಿಯಂನ ಪ್ರದರ್ಶನವೊಂದರಲ್ಲಿ ಕೇಳಿದ್ದು ನೆನಪಿದೆ: 'ಭೂಮಿ ಹೊರತಾಗಿ ಇನ್ನಾವ ಗ್ರಹಗಳ ಮೇಲಿನ ಪ್ರಕೃತಿಯೂ ಜೀವಿಸಲು ಸಾಧ್ಯವಾಗದಂಥದ್ದು, ಭೂಮಿಯೊಂದೇ ಯೋಗ್ಯ, ಆದರೆ ಇಲ್ಲಿ ಜೀವಿಸುವ ನಾವು ಮಾನವರು ಯೋಗ್ಯರೇ' ಎಂದು. ಕೇಳಿಕೊಳ್ಳಲೇಬೇಕಾದ ಪ್ರಶ್ನೆ, ಕ್ಷಮಯಾ ಧರಿತ್ರಿಯೂ ತನ್ನ ಸಹನೆಯ ಮಿತಿಮೀರಿ, ಈವರೆಗೂ ನುಂಗಿಕೊಂಡ ಅಸಹನೆಯನ್ನು ಇಂದು ಕಂಡ ಭೂಕಂಪದ ಮೂಲಕ ಹೊರಹಾಕಿದಳೆ, ಎಂದು ಒಮ್ಮೊಮ್ಮೆ ಅನ್ನಿಸುತ್ತದೆ. ಭೂತಾಯಿಯೇ ಬಾಯ್ ಬಿರಿವಾಗ, ಪ್ರಕೃತಿಯೇ ಕೋಪಿಸಿಕೊಂಡಾಗ ತಡೆಯುವುದೆಂತು? ಪ್ರಕೃತಿ ನಿಯಮದ ಮುಂದೆ ಅದರ ಭಾಗವಾದ ನಾವು ಹುಲುಮಾನವರು ಮಾತ್ರ.

ಡಾ|| ಮಂಜುನಾಥ್ ಬಿ. ಪಿ.
ಜಿ. ೧೧೧, ಜಿ ಬ್ಲಾಕ್, ಸಹಕಾರನಗರ, ಬೆಂಗಳೂರು - ೫೬೦ ೦೯೨

# ಬ್ರಾಹ್ಮಣೀಕರಣಗೊಂಡ ಜಾತಕ ಕತೆಗಳು

**ಕೆ. ಸಿದ್ರಾಮ**

**ಕಾ**ಲ ಗತಿಸಿದಂತೆ ಪರಿವರ್ತನೆಯ ಸೆಳೆತಗಳ ತೆರೆಗಳಲ್ಲಿ 'ಮೂಲ' ಕೊಚ್ಚಿ ಹೋಗಿ ಇಲ್ಲದ್ದು ಕಾಣಸಬಹುದು; ಇದ್ದದ್ದು ಇಲ್ಲವಾಗಬಹುದು. ಇಂಥ ಸಂದರ್ಭಗಳಲ್ಲಿ 'ಮೂಲ'ದ ಬಗ್ಗೆ ಸಹಜವಾಗಿ ಸಂಶಯ ಮೂಡಿಬರುತ್ತದೆ. ಅಂತಹ ಒಂದು ವಿಚಾರವನ್ನು ಇಲ್ಲಿ ಚರ್ಚಿಸಲಾಗಿದೆ.

ಬೌದ್ಧಧರ್ಮ ಮತ್ತು ಬ್ರಾಹ್ಮಣ ಧರ್ಮ (ಹಿಂದೂ ಧರ್ಮ, ವೈದಿಕ ಧರ್ಮ ಎನ್ನುವುದಕ್ಕಿಂತ ಬ್ರಾಹ್ಮಣ ಧರ್ಮ ಎನ್ನುವುದೇ ಸೂಕ್ತವೆನಿಸುತ್ತದೆ) ಎರಡೂ ವಿರುದ್ಧ ನೆಲೆಯಲ್ಲಿ ನಿಂತು ಸಾಂಸ್ಕೃತಿಕ ಸಂಘರ್ಷದ ದಾರಿಯಲ್ಲಿದ್ದಂಥವುಗಳೇ. ಆದರೆ ಗಾಳಿ ಬಂದತ್ತ ತೂರಿಕೊಳ್ಳುವ, ಸಮಯ ಸಾಧಕತನ ಗುಣ ಹೊಂದಿರುವ ಬ್ರಾಹ್ಮಣ ಧರ್ಮ ಹಾಗೂ ಬೆಳೆಯಬೇಕೆನ್ನುವ ಉತ್ಕಟತೆಯಿಂದ ಅಥವಾ ಮೂಲಭೂತವಾದಿಗಳ ಅಂತರಭೇದದಿಂದ, ತಪ್ಪು ಕಲ್ಪನೆಯಿಂದ, ಅಜ್ಞಾನದಿಂದ ಸುಳ್ಳು ಸೃಷ್ಟಿಗೆ ಎರವಾದ ಬೌದ್ಧಧರ್ಮ, ಒಂದರೊಳಗೊಂದು ಸೇರಿ ಕಲಸುಮೇಲೋಗರ ಚಿತ್ರಣವನ್ನು ನಮ್ಮ ಮುಂದಿಟ್ಟಿವೆ.

ಬ್ರಾಹ್ಮಣ ಧರ್ಮವು, ಬುದ್ಧನನ್ನು ತಮ್ಮ ಧರ್ಮದ ವಿಷ್ಣುವಿನ ದಶಾವತಾರಗಳಲ್ಲಿ ಒಂದು ಅವತಾರವನ್ನಾಗಿ ಸ್ವೀಕರಿಸಿ, ಆತನನ್ನು ಬೆತ್ತಲೆ ನಿಲ್ಲಿಸಿ, ಆತನ ತತ್ವಗಳಿಗೆ ಮಸಿ ಬಳಿದದ್ದು ಒಂದು ಕಡೆಯಾದರೆ, ಬ್ರಾಹ್ಮಣೀಕೃತ ಹಿನ್ನಲೆಯಲ್ಲಿ ಬೌದ್ಧ ಕತೆಗಳನ್ನು ಜನರ ತಲೆಗೆ ತುಂಬಿ ಬುದ್ಧನನ್ನು 'ಪವಾಡಿಕ ದೇವ' ನನ್ನಾಗಿಸುವ, ಆತನನ್ನು ಸರಿಯಾಗಿ ಅರ್ಥೈಸಿಕೊಳ್ಳಲಾರದ ಬೌದ್ಧರು ಇನ್ನೊಂದು ಕಡೆಯಾಗಿ ವ್ಯವಸ್ಥಿತತೆಯನ್ನು ಬುಡಮೇಲಾಗಿಸುವ ಸ್ಥಿತಿ ರೂಪುಗೊಂಡದ್ದಂತೂ ನಿಜ.

ಬ್ರಾಹ್ಮಣಶಾಹಿ ಕಂದಾಚಾರವನ್ನೇ ಧಿಕ್ಕರಿಸಿ, ಮನುಷ್ಯ ಧರ್ಮ ಬೋಧಿಸಿದ ಬುದ್ಧ, ತನ್ನ ಕಾಲದ ಪರಿಮಿತಿಯೊಳಗೆ ಸಮಾಜವನ್ನು ಪರಿವರ್ತಿಸುವ ನೆಲೆಗಳನ್ನೇ ಪ್ರತಿನಿಧಿಸಿ 'ನಡೆ-ನುಡಿ'ಗಳಲ್ಲೊಂದಾದ. ಆತನ ನಂತರದಲ್ಲಿ ತಾತ್ವಿಕ ಭಿನ್ನಾಭಿಪ್ರಾಯ ಹೆಚ್ಚಾದವು. ಇದಕ್ಕೆ ಬೌದ್ಧ ಧರ್ಮವನ್ನು ಹಾಳುಗೆಡುಹುವ ಉದ್ದೇಶದಿಂದಲೇ ಬೌದ್ಧ ಧರ್ಮ ಸೇರಿದ ಬ್ರಾಹ್ಮಣರೇ ಪ್ರಮುಖ ಕಾರಣರು. ಜೊತೆಗೆ ಶಂಕರಾಚಾರ್ಯರಂಥವರ ಪ್ರತಿಗಾಮಿತನ, ಬೌದ್ಧ ಧರ್ಮೀಯರಲ್ಲಿಯ ಆಂತರಿಕ ಗೊಂದಲಗಳು, ಅಸಹ್ಯ ಪ್ರವೃತ್ತಿಗಳಿಂದಾಗಿ, ಬೌದ್ಧಧರ್ಮ ಭಾರತದಿಂದಲೇ ನಿರ್ಗಮಿಸುವಂತಾಯಿತು. ಆದರೂ ಬಹುಸಂಖ್ಯಾತ ಬೌದ್ಧರ ಸಮಾಧಾನಕ್ಕಾಗಿ ಅಥವಾ ಅವರನ್ನು ವಂಚಿಸುವ ಸಲುವಾಗಿ ಬುದ್ಧನನ್ನು ಬ್ರಾಹ್ಮಣೀಕರಣಗೊಳಿಸಿ ವಿಷ್ಣುವಿನ ಅವತಾರವನ್ನಾಗಿಸಲಾಯಿತು.

ಬುದ್ಧನನ್ನು ಬ್ರಾಹ್ಮಣೀಕರಣಗೊಳಿಸಿದಂತೆ ಬೌದ್ಧ ಸಾಹಿತ್ಯವನ್ನೂ ಜಾತಕ ಕಥೆಗಳನ್ನೂ ಮುಂದಿಟ್ಟುಕೊಂಡು ಚರ್ಚಿಗಿಳಿದಾಗ ಅವು ಬ್ರಾಹ್ಮಣೀಕರಣಗೊಂಡ ಸತ್ಯ ಅರ್ಥವಾಗುತ್ತದೆ. ಬುದ್ಧನ ಕಾಲದಲ್ಲಿ ಬರವಣಿಗೆಯ ಕಲೆ ಇನ್ನೂ ಬೆಳೆದಿರಲಿಲ್ಲ. ಆದ್ದರಿಂದ ತಾವು ಕೇಳಿದ್ದನ್ನು ಭಿಕ್ಷುಗಳು ಮನನ ಮಾಡಿಕೊಳ್ಳಬೇಕಾಗಿತ್ತು... ಅವರಲ್ಲಿ ಕೆಲವರು ಮನನ ಮಾಡಿಕೊಳ್ಳುವುದನ್ನೇ ತಮ್ಮ ವೃತ್ತಿಯಾಗಿಸಿಕೊಂಡಿದ್ದರು. ಅವರನ್ನು ಭಾಣಕರು ಎಂದು ಕರೆಯಲಾಗುತ್ತಿತ್ತು... ಬುದ್ಧನು ಜೀವಿಸಿರುವಾಗಲೇ ತಪ್ಪು ವರದಿಯುಳ್ಳ ಅನೇಕ ಪ್ರಸಂಗಗಳನ್ನು ಅವರ ಗಮನಕ್ಕೆ ತರಲಾಯಿತು... ಕರ್ಮ ಮತ್ತು ಪುನರ್ಜನ್ಮಕ್ಕೆ ಸಂಬಂಧಿಸಿದಂತೆ ತಪ್ಪು ವರದಿ ಪ್ರಸಂಗಗಳೂ ಸಾಮಾನ್ಯ. ಈ ಸಿದ್ಧಾಂತಗಳಿಗೆ ಬ್ರಾಹ್ಮಣ ಮತದಲ್ಲಿಯೂ ಸ್ಥಾನಮಾನಗಳಿವೆ. ತತ್ಪರಿಣಾಮವಾಗಿ ಬ್ರಾಹ್ಮಣ ಸೂತ್ರಗಳನ್ನು ಬೌದ್ಧ ಮಟ್ಟದಲ್ಲಿ ಅಳವಡಿಸಲು ಭಾಣಕರಿಗೆ ಸುಲಭವಾಯಿತು. ಬೌದ್ಧ ತಾತ್ವಿಕ ಸಾಹಿತ್ಯದಲ್ಲಿ ಹೇಳಿರುವುದೆಲ್ಲ ಬುದ್ಧನು ಹೇಳಿದ್ದೇ ಎಂದು ಸ್ವೀಕರಿಸುವಲ್ಲಿ ನಾವು ಬಹಳ ಎಚ್ಚರಿಕೆಯಿಂದಿರಬೇಕು. (ಡಾ|| ಬಾಬಾಸಾಹೇಬ ಅಂಬೇಡ್ಕರ-ಬರಹಗಳು ಮತ್ತು ಭಾಷಣಗಳು : ಸಂ ೧; ಭಾಗ - ೩; ಪುಟ ೫೦೨-೫೦೩)

ಜಾತಕ ಕಥೆಗಳಲ್ಲಿ ಪುನರ್ಜನ್ಮದ ಕಲ್ಪನೆಯನ್ನು ಸ್ಥಿರಗೊಳಿಸಲು ಪ್ರಯತ್ನಿಸಲಾಗಿದೆ. ಅದನ್ನು ಬುದ್ಧನ ಉಪದೇಶವೆಂಬಂತೆಯೇ ವ್ಯಕ್ತಿಸಲಾಗಿದೆ. ಬ್ರಾಹ್ಮಣ ಧರ್ಮದ ಅವತಾರ, ಜನ್ಮಾಂತರಗಳ ಕಲ್ಪನೆ ಹಾಗೂ ಜೈನ ಧರ್ಮದ 'ಭವಾವಳಿ'ಗಳ ಮಾದರಿಯಲ್ಲೇ ಬುದ್ಧನ ಜಾತಕ ಕಥೆಗಳನ್ನು ರೂಪಿಸಲಾಗಿದೆ. ಬುದ್ಧ ಪುನರ್‌ಜನ್ಮ ಸಿದ್ಧಾಂತ ವಿತಂಡವಾದಿಯಾಗಿದೆ, ಎಂದು ಕೆಲ ವಿದ್ವಾಂಸರೂ, ಆತ್ಮವಿಲ್ಲದಿದ್ದಾಗ್ಯೂ ಪುನರ್‌ಜನ್ಮ ಸಾಧ್ಯ ಎಂದು ಇನ್ನೂ ಕೆಲವು ವಿದ್ವಾಂಸರೂ ವಾದ ಹೂಡುತ್ತಾರೆ. ಬೌದ್ಧ ಧರ್ಮದಲ್ಲಿ ಪೃಥ್ವಿ, ಅಪ್, ತೇಜಸ್ ಮತ್ತು ವಾಯು ಎಂಬ ಸೃಷ್ಟಿಯ ನಾಲ್ಕು ಮೂಲದ್ರವ್ಯಗಳು ಸೇರಿದಾಗ ಒಂದು ಜನ್ಮವಾಗುತ್ತದೆ; ಇವು ಸತ್ತ ವ್ಯಕ್ತಿಯ ದೇಹದಿಂದ ಅಥವಾ ಹಲವು ದೇಹಗಳಿಂದ ಬಂದಿರಬಹುದು ಎಂದು ಹೇಳಲಾಗಿದೆ. ಆದರೆ ಬುದ್ಧನನ್ನು ಸರಿಯಾಗಿ ಅರ್ಥೈಸಿಕೊಂಡಾಗ ಪುನರ್ಜನ್ಮ ಸಿದ್ಧಾಂತ ಬುದ್ಧನದು ಆಗಿರಲಿಲ್ಲವೆಂಬ ಸಂಶಯ ಸುಳಿಯುತ್ತದೆ; ಬಹುಶಃ ಇದು ಬುದ್ಧನ ನಂತರದ ದಿನಗಳಲ್ಲಿ ಸೇರಿಸಲ್ಪಟ್ಟಿರಬೇಕು. ಬೌದ್ಧ ಧರ್ಮವನ್ನು ಎತ್ತರಕ್ಕೇರಿಸುವ ಸಲುವಾಗಿ ಅಥವಾ ಅನಿತ್ಯವಾದದಿಂದ ಜನ ದೂರವಾಗಬಹುದೆಂದುಕೊಂಡು, ಬ್ರಾಹ್ಮಣ-ಜೈನ ಧರ್ಮಗಳಂತೆಯೇ ''ತಮ್ಮದೂ ಇದೆ'' ಎಂದು ತೋರಿಸಲು ಬುದ್ಧಾನಂತರದ ಬೌದ್ಧರು ಪ್ರಯತ್ನಿಸಿರಬೇಕು.

'ನಾನು - ನನ್ನದು' ಎಂಬುದನ್ನು ಮೀರಿ ನಿಂತಿದ್ದ ಬುದ್ಧನನ್ನು ಜಾತಕ ಕಥೆಗಳ ಸೂತ್ರಧಾರನನ್ನಾಗಿಸಿ, ಆತನ ಬಾಯಿಯಿಂದಲೇ ಕಥೆಗಳನ್ನು ಹೇಳಿಸಿದ್ದು ಪೂರ್ವ ಜನ್ಮದಲ್ಲಿ 'ನಾನು ಹೀಗೆ ಮಾಡಿದ್ದೆ ಹಾಗೇ ಮಾಡಿದ್ದೆ ನಾನೇ ಸರ್ವಜ್ಞ, ಎಂದು ಆತನಿಂದ ನುಡಿಸಿರುವುದು ವಿಪರ್ಯಾಸವಲ್ಲವೆ? ಜೈನ ಭವಾವಳಿಗಳ ಮಾದರಿಯಲ್ಲೇ ಹಲವು ಜನ್ಮಾಂತರಗಳನ್ನು ಇಲ್ಲಿ ಸೇರಿಸಿರುವುದಷ್ಟೇ ಅಲ್ಲದೆ, ಬುದ್ಧ ಕುದುರೆ, ಆನೆ, ಹುಲಿ, ಗಿಳಿ, ಸಿಂಹ, ಜಿಂಕೆ, ಹಾವು, ಕಪಿ ಮೊದಲಾದ ಪ್ರಾಣಿ - ಪಕ್ಷಿ ಯೋನಿಗಳಲ್ಲಿ ಪೂರ್ವಜನ್ಮ ಹಾದು ಬಂದುದಾಗಿ ಹೇಳಲಾಗಿದೆ!

ಬುದ್ಧ ಬದುಕಿದ್ದಾಗಲೇ ಅನೇಕ ಬ್ರಾಹ್ಮಣರು ಆತನ ಅನುಯಾಯಿಗಳಾಗಿ ಮಾರ್ಪಟ್ಟಿದ್ದರು; ಆತನ ಪ್ರೀತಿಪಾತ್ರ ಶಿಷ್ಯರಾಗಿದ್ದರು. ಆತ ಅವರ ಬಗ್ಗೆ ಎಂದೂ 'ಎರಡು ತನ' ಮಾಡಿದ ಉಲ್ಲೇಖವಿಲ್ಲ. ಎಲ್ಲರೂ ಒಂದೇ ಎಂಬ ಭಾವ ಆತನದು. ಆತನ ಅನುಯಾಯಿಗಳು ಭಿಕ್ಷುವಾಗಿದ್ದರೇ ಹೊರತು ಬ್ರಾಹ್ಮಣರಾಗಿರಲಿಲ್ಲ. ಈ ವಿಷಯವನ್ನು ಸ್ಪಷ್ಟಪಡಿಸಿರುವ ಬುದ್ಧ ಭಿಕ್ಷು ಬೇರೆ; ಬ್ರಾಹ್ಮಣ ಬೇರೆ ಎಂಬ ನಿಲುವು ತಳೆದಿದ್ದ. ಬ್ರಾಹ್ಮಣ ಜಾತಿಯಿಂದಾದರೆ, ಭಿಕ್ಷು ಸಾಧನೆಯಿಂದಾಗುತ್ತಾನೆ. ಆದ್ದರಿಂದ ಬ್ರಾಹ್ಮಣನ ಸುತ್ತ ಜಾತಿಯಿರುತ್ತದೆ. ಭಿಕ್ಷು ಇದರಿಂದ ಮುಕ್ತವಾಗಿರುತ್ತಾನೆ. ಅಂದರೆ ಬುದ್ಧ ಬ್ರಾಹ್ಮಣ ಶಾಹಿಯನ್ನು ಧಿಕ್ಕರಿಸಿದ್ದಾನೆ. ಬ್ರಾಹ್ಮಣ ಧರ್ಮದ ಟೊಳ್ಳು ಸಿದ್ಧಾಂತಗಳನ್ನೆಲ್ಲ ಆತ ಮೃದುವಾಗಿಯೇ ತಿರಸ್ಕರಿಸಿದ್ದಾನೆ; ಅದೇ ಸಂದರ್ಭದಲ್ಲಿ ಬ್ರಾಹ್ಮಣ, ಭಿಕ್ಷು ಆದಾಗ ಸ್ವೀಕರಿಸಿದ್ದಾನೆ; ಸ್ವಾಗತಿಸಿದ್ದಾನೆ; ಈ ಕುರಿತು ಬೋಧಿಸಿದ್ದಾನೆ.

ಆದರೆ ಜಾತಕ ಕಥೆಗಳಲ್ಲಿ ಮಾತ್ರ ಇದಕ್ಕೆ ತದ್ವಿರುದ್ಧವಾಗಿದೆ. (ಈ ಮುಂದೆ ನೀಡಿರುವ ಉಲ್ಲೇಖಗಳು, ಪುಟ ಸಂಖ್ಯೆಗಳು ಡಾ. ಬಿ. ನಂ. ಚಂದ್ರಯ್ಯನವರು ಅನುವಾದಿಸಿದ 'ಬುದ್ಧನ ಜಾತಕ ಕಥೆಗಳು : ಸಂ - ೪ ರಿಂದ ಆಯ್ದುಕೊಳ್ಳಲಾಗಿದೆ). 'ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲ ವರ್ಗದ, ಎಲ್ಲ ಅಂತಸ್ತಿನ ಜನರ ಮನಸ್ಸನ್ನು ಸೂರೆಗೊಳ್ಳುವ ಮನಸ್ಸಿಗೆ ವಿವೇಕವನ್ನು ಕೆರಳಿಸುವ ಮೋಡಿ ಈ ಕಥೆಗಳಲ್ಲಿದೆ.' (ಎರಡು ಮಾತು; ಪು-೪) ನಿಜ. ಆದರೆ ಬುದ್ಧ ಯಾವುದನ್ನು ತಿರಸ್ಕರಿಸಿದ್ದಾನೋ, ಧಿಕ್ಕರಿಸಿದ್ದಾನೋ, ಅದನ್ನೇ ಈ ಕಥೆಗಳ ಮುಖ್ಯವಸ್ತುವನ್ನಾಗಿಸಿದ್ದು ನಿಜಕ್ಕೂ ಪಶ್ಚಾತ್ತಾಪ ಪಡಬೇಕಾದ ಅಂಶ!

ಬ್ರಾಹ್ಮಣ ಧರ್ಮ, ಸ್ವರ್ಗ-ನರಕಗಳ ಕಲ್ಪನೆ, ಇಂದ್ರಾದಿ ದೇವತೆಗಳು, ಪವಾಡಿಕ ದಂತಕತೆಗಳೂ ಮೊದಲಾದವು ಜಾತಕಕಥೆಗಳಲ್ಲಿ ಬರುತ್ತವೆ. ತಂದೆ-ತಾಯಿ, ಸಮಣರನ್ನೊಳಗೊಂಡು ಬ್ರಾಹ್ಮಣರಿಗೂ ಗೌರವ ನೀಡಬೇಕು. 'ಯಾರು ತನ್ನ ಮನೆಯಲ್ಲಿ ತಂದೆ, ತಾಯಿಗಳನ್ನು ಮತ್ತು ಶ್ರಮಣ - ಬ್ರಾಹ್ಮಣರನ್ನು ಅಗೌರವಿಸುತ್ತಾರೋ ಅವರು ತಲೆಕೆಳಗಾಗಿ ಬಿದ್ದ ಅಧರ್ಮನಂತೆ ತಮ್ಮ ದೇಹವನ್ನು ಇಲ್ಲಿಯೇ ಬಿಟ್ಟು ಸತ್ತ ಮೇಲೆ ನರಕಕ್ಕೆ ಹೋಗುತ್ತಾರೆ. ಯಾರು ತಮ್ಮ ಮನೆಯಲ್ಲಿ ತಂದೆ-ತಾಯಿಗಳನ್ನು ಹಾಗೂ ಶ್ರಮಣ-ಬ್ರಾಹ್ಮಣರನ್ನು ಗೌರವಿಸುತ್ತಾರೆ ಅವರು ಧರ್ಮ ರಥದಲ್ಲಿ ಕುಳಿತುಕೊಂಡು ಹೋದಂತೆ ಶರೀರವನ್ನು ಇಲ್ಲಿಯೇ ಬಿಟ್ಟು ಮೋಕ್ಷ ಪಡೆಯುತ್ತಾರೆ (೪೫೭; ಧಮ್ಮ ಜಾತಕಂ; ಪು-೧೦/೧೧, ಪು-೧೩). ಇಲ್ಲಿ ಶ್ರಮಣ ಬ್ರಾಹ್ಮಣ ಎಂದು ಒಂದೇ ಪದವನ್ನಾಗಿ ಅನುವಾದಕರು ಬಳಸಿದ್ದಾರೆ. ಆದರೆ ಸಮಣೆ, ಬ್ರಾಹ್ಮಣೆ (ಪು.೭೭, ಪ-೧೦) ಎಂಬ ಬಿಡಿ ಪದಗಳನ್ನು ಕಾಣಬಹುದಾಗಿದ್ದು, ಶ್ರಮಣರೂ ಬ್ರಾಹ್ಮಣರೂ ಎಂಬರ್ಥ ಉಂಟಾಗುತ್ತದೆ ಎಂಬುದನ್ನು ಗಮನಿಸಬೇಕು.

ಇಲ್ಲಿ 'ಬ್ರಾಹ್ಮಣರನ್ನು ಗೌರವಿಸಬೇಕು' ಎಂಬ ಮಾತಿನ

ಜೊತೆಗೆ ಬುದ್ಧ ತಿರಸ್ಕರಿಸುವ ಸ್ವರ್ಗ-ನರಕಗಳ ಪ್ರಸ್ತಾಪವೂ ಬರುತ್ತದೆ: ಇಷ್ಟೆ ಅಲ್ಲ ದೇವರಾಜ ಇಂದ್ರ (ಶಕ್ರ)ನ ಪ್ರಸ್ತಾಪ ಕೂಡ ಬರುತ್ತದೆ. 'ಸತ್ತವರೆಲ್ಲ ನರಕಕ್ಕೆ ಹೋದರು. ಹೊಸ ದೇವ ಪುತ್ರರನ್ನು ಕಾಣದ ದೇವರಾಜ ಇಂದ್ರ ಮನುಷ್ಯ ಲೋಕದ ಕಡೆಗೆ ನೋಡಿ, ಜನ ನರಕದಲ್ಲಿ ಹುಟ್ಟುತ್ತಿದ್ದಾರೆ ಎಂಬುದನ್ನು ಅರಿತ ಮಾತಲಿದೇವಪುತ್ರನನ್ನು ಬಹುದೊಡ್ಡ ಕೃಷ್ಣವರ್ಣದ ನಾಯಿಯನ್ನಾಗಿ ಮಾರ್ಪಡಿಸಿದ. (ಪು-೭೯) ಶಕ್ರನ ಬಿಸಿಯಾಯಿತು.. ನಾಲ್ವರು ದೇವಪುತ್ರರೊಂದಿಗೆ ಅಲ್ಲಿಗೆ ಬಂದ. ದೇವಪುತ್ರರು ಇಲಿ ಮರಿಗಳ ರೂಪ ಧರಿಸಿ (ಪು. ೮೫) ಎಂಬಂಥ ಪ್ರಸಂಗಗಳು ಪದೇ ಪದೇ ಕಂಡು ಬರುತ್ತವೆ. 'ನಾನೇ ಶಕ್ರ' (ಪು - ೮೨) ಎಂದು ಬುದ್ಧ ತನ್ನ ಹಿಂದಿನ ಜನ್ಮವೊಂದರಲ್ಲಿ ಇಂದ್ರನಾಗಿ ಜನಿಸಿದ್ದನೆಂದು ಸ್ವತಃ ಬುದ್ಧನ ಮುಖದಿಂದಲೇ ಹೇಳಿಸಲಾಗಿದೆ.

ಬುದ್ಧನನ್ನು 'ಪಾವಾಡಿಕ'ನನ್ನಾಗಿ ಚಿತ್ರಿಸಿರುವ ಜಾತಕ ಕಥೆಗಳಲ್ಲಿ 'ಆಕಾಶಮಾರ್ಗದಿಂದ ಹಿಮಾಲಯಕ್ಕೆ ಬಂದು... ಪರಿಷತ್ತು ಸಹಿತ ಸ್ವರ್ಗಗಾಯಿಗಳಾದರು... ಆತನಿಗೆ ಅಕಾಲದಲ್ಲಿ ಹಣ್ಣು ಬಿಡಿಸುವ ಮಂತ್ರ ತಿಳಿದಿತ್ತು.. ಭಿಕ್ಷು ಗಳೊಂದಿಗೆ ತಥಾಗತ ಅಂತರ್ಧಾನವಾಗಿ ವಿಶಾಖೆಯ ಒಂದು ಕೊಠಡಿಯಲ್ಲಿ ಕಾಣಿಸಿಕೊಂಡ... ಆತ ಬೆರಳಿನಿಂದ ಆಕೆಯ ಹೊಕ್ಕಳನ್ನು ಮುಟ್ಟಿಬಿಟ್ಟ. ಅದರಿಂದ ಆಕೆ ಗರ್ಭವತಿಯಾದಳು...' ಮುಂತಾದ ಉಲ್ಲೇಖಗಳು ಕಂಡು ಬರುವುದಷ್ಟೇ ಅಲ್ಲ, ಕೆಲವೊಂದು ಸಲ ಬುದ್ಧ ರೋಗಿ ಗಳನ್ನು ಗುಣಪಡಿಸಿದ ಬಗ್ಗೆ ಸತ್ತವರನ್ನು ಬದುಕಿಸಿದ ಬಗ್ಗೆ ಉಲ್ಲೇಖಗಳಿವೆ. 'ಸತ್ತವರ ಮನೆಯ ಸಾಸೀವೆ ಕಾಳಿನ ಕಥೆ'ಯೇ ಇರುವಾಗ ಜಾತಕ ಕಥೆಗಳಲ್ಲಿಯ ಮೇಲೆ ಉದಾಹರಿಸಲ್ಪಟ್ಟ ಉಲ್ಲೇಖಗಳು ಅಬದ್ಧವೆನಿಸುವುದಿಲ್ಲವೆ ? ಇವೆಲ್ಲವೂ ಅತಿರೇಕದ ಕಲ್ಪನೆಗಳು ಅಥವಾ ಪ್ರಕ್ಷಿಪ್ತಗಳು ಎನ್ನುವುದರಲ್ಲಿ ಸಂದೇಹವೇ ಇಲ್ಲ.

'ವೇದೋತ್ತರ ಕಾಲದ ರಾಷ್ಟ್ರ ಜೀವನ ಹಾಗೂ ಧಾರ್ಮಿಕ ಭಾವನೆಗಳಲ್ಲಿ ಪುನರ್ಜನ್ಮ ತತ್ವ ಪಡೆದ ಪ್ರಾಮುಖ್ಯತೆಯನ್ನು ಗಮನಿಸಿದರೆ, ಬೌದ್ಧರಲ್ಲಿ ಕಂಡು ಬರುವ ಪುನರ್ಜನ್ಮ ತತ್ವ ಆಶ್ಚರ್ಯವನ್ನೇನೂ ಉಂಟು ಮಾಡುವುದಿಲ್ಲ' (ನನ್ನ ಮಾತು: ಪು. IV) ಎಂಬ ಅನುವಾದಕರ ಮಾತಿನಂತೆಯೇ ಬ್ರಾಹ್ಮಣ್ಯಶಾಹಿ ಶ್ರೇಷ್ಠತ್ವ, ಪವಾಡಗಳ ಕಲ್ಪನೆಗಳು ಇಲ್ಲಿ ಸೇರಿರಬಹುದಾದ ಸಂಭವವಿದೆ. ಜೊತೆಗೆ ಮೊದಲೇ ಹೇಳಿದಂತೆ, ಬೌದ್ಧ ಧರ್ಮವನ್ನು ಹಾಳುಗೆಡುವಲು, ತತ್ವಗಳನ್ನು ಶಿಥಿಲ ಗೊಳಿಸಲು, ಬೌದ್ಧ ಧರ್ಮ ಹೆಚ್ಚೆಚ್ಚು ಜನರಿಗೆ ಇಷ್ಟ ವಾಗುವಂತೆ ಮಾಡಲು, ಬ್ರಾಹ್ಮಣ ಮತ್ತು ಬೌದ್ಧಧರ್ಮ ಗಳೆರಡನ್ನು ಸಮನ್ವಯಗೊಳಿಸಲು – ಹೀಗೆ ನಾನಾ ಕಾರಣ ಗಳಿಂದಾಗಿ ಜಾತಕಕಥೆಗಳಲ್ಲಿ ಇಂಥ ಅವಘಡಗಳು ಸಿಲುಕಿರಬಹುದಾದ ಸಂಭವವಿದೆ.

'ಮೀನು ಅಥವಾ ಮಾಂಸ ವರ್ಜಿಸುವುದು, ಬೆತ್ತಲಾಗಿರುವುದು, ತಲೆ ಬೋಳಿಸುವುದು, ಜಟೆಗಟ್ಟಿದ ಕೂದಲು ಬೆಳೆಸುವುದು, ಬೂದಿ ಬಳೆದುಕೊಳ್ಳುವುದು, ಒರಟಾದ ಜಿಂಕೆ ಚರ್ಮವನ್ನು ತೊಡುವುದು, ಯಜ್ಞ ಕುಂಡದಲ್ಲಿ ಭಾಗವಹಿಸುವುದು; ಅಮರತ್ವವನ್ನು ಪಡೆಯಲು ಈ ಜಗತ್ತಿನಲ್ಲಿ ಮಾಡುವ ವಿವಿಧ ರೀತಿಯ ತಪಸ್ಸು, ಮಂತ್ರ ಪಠನೆ, ಅರ್ಪಣೆ, ಯಜ್ಞಗಳು, ಆಯಾಕಾಲಕ್ಕೆ ತಕ್ಕಂತೆ ಮಾಡುವ ವ್ರತಗಳು ಇವಾವೂ ಸಂದೇಹವುಳ್ಳ ವ್ಯಕ್ತಿಯನ್ನು ಶುದ್ಧೀಕರಿಸಲಾರವು' (ಡಾ|| ಬಾಬಾಸಾಹೇಬ ಅಂಬೇಡ್ಕರ-ಬರಹಗಳು ಮತ್ತು ಭಾಷಣ ಗಳು; ಸಂ-೧೧, ಭಾಗ ೨, ಪು-೫೮೩) ಎಂಬ ದಿಟ್ಟತನದ ಬುದ್ಧನ ಮಾತುಗಳೂ, 'ನಿಮ್ಮನ್ನು ನೀವೇ ತಿದ್ದಿಕೊಳ್ಳ ಬೇಕು; ಲಾಭಕೃಪೆ ಮತ್ತು ಹೊಗಳಿಕೆ ನಮ್ಮತ್ತ ಬಂದಾಗ ನಾವು ಅವುಗಳನ್ನು ತಿರಸ್ಕರಿಸಬೇಕು ಮತ್ತು ಅವು ನಮ್ಮತ್ತ ಬಂದಾಗ ಅವು ನಮ್ಮನ್ನು ಹಿಡಿದುಕೊಳ್ಳದಿರಲಿ; ನಮ್ಮ ಹೃದಯದಲ್ಲಿ ಅವು ನೆಲೆಸದಿರಲಿ' (ಅದೇ. ಪು. ೫೮೮) ಎಂಬ ಬೋಧನೆಗಳೂ ಇಡೀ ಬುದ್ಧನ ವ್ಯಕ್ತಿತ್ವದ ಚಿತ್ರಣವನ್ನು ನಮ್ಮ ಮುಂದೆ ಇಡುತ್ತವೆ. ಆದರೆ ಇದೇ ಬುದ್ಧನನ್ನು ಜಾತಕ ಕಥೆಗಳಲ್ಲಿ ಬ್ರಾಹ್ಮಣೀಕರಣಗೊಳಿಸಲಾಗಿದೆ !

ಬುದ್ಧನ ಜಾತಕ ಕಥೆಗಳಲ್ಲಿ ಬ್ರಾಹ್ಮಣಶಾಹಿ ಪ್ರತಿ ಗಾಮಿತನ ಪ್ರತಿಫಲಿಸಿ ಅಚಾತುರ್ಯ ಘಟಿಸಿದೆ. ಕೊಡು-ಕೊಳ್ಳುವಿಕೆ ಗತಿಶೀಲ ಸಂಸ್ಕೃತಿಯ ಒಂದು ಅಂಗವೇ ಆದರೂ ಇಡಿಯಾಗಿ ವಿರುದ್ಧ ದಿಸೆಯಲ್ಲಿ ಇರುವ ತತ್ವ-ಸಿದ್ಧಾಂತಗಳಲ್ಲಿ, ತಮ್ಮ ಹಿರಿಮೆ ಮೆರೆಸುವ, ದುರುದ್ದೇಶ ಪೂರ್ವಕ ಮೂಲಭೂತೀಯವಾದದಿಂದ ಸೇರಿಸಲ್ಪಡುವ ಯಾವುದೇ ವಿಚಾರಗಳನ್ನು, ಪರಂಪರೆಯನ್ನು ಮರೆ ಮಾಚುವ, ಇತಿಹಾಸವನ್ನು ತಿರುಚುವ ಯಾವುದೇ ಕಾರ್ಯವನ್ನು ಒಪ್ಪಲಾಗದು. ಆದ್ದರಿಂದ ಬ್ರಾಹ್ಮಣೀಕರಣಗೊಂಡ ಜಾತಕ ಕಥೆಗಳನ್ನು ಓದುವಾಗ, ತಿಳಿದುಕೊಳ್ಳುವಾಗ, 'ಹಂಸಕ್ಷೀರ ನ್ಯಾಯ'ದಿಂದ ಅರ್ಥೈಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

ಕೆ. ಸಿದ್ರಾಮ
ಮೋರೆ ಬಿಲ್ಡಿಂಗ್, ಶ್ರೀ ದುರ್ಗಾದೇವಿ ಕಾಲನಿ, ಸಪ್ತಾಪುರ, ಧಾರವಾಡ

# ಪ್ರಸೂತಿ ಪೂರ್ವದ ಪರಾಮರಿಕೆ

ಗರ್ಭ ಧರಿಸುವುದೊಂದು ವಿಶಿಷ್ಟ ಅನುಭವ. ಅದರಲ್ಲಿ ಉಲ್ಲಾಸ, ಆತಂಕ, ಸಡಗರ, ಸಂಭ್ರಮ, ಅಲ್ಪಸ್ವಲ್ಪ ಭಯ ಎಲ್ಲವೂ ಅಡಕವಾಗಿರುತ್ತದೆ. ಈ ಅವಧಿಯಲ್ಲಿ ಗರ್ಭಿಣಿಯ ಮನೋಭಾವ ತುಂಬಾ ಸೂಕ್ಷ್ಮವಾದುದಾದ್ದರಿಂದ ಮತ್ತು ಅದರ ಪರಿಣಾಮ ಮಗುವಿನ ಮೇಲಾಗುತ್ತದೆಂಬುದು ಖಾತರಿಯಾದುದರಿಂದ, ಗರ್ಭಿಣಿಯರನ್ನು ಅತ್ಯಂತ ಪ್ರೀತಿಯಿಂದ, ಜತನದಿಂದ ನೋಡಿಕೊಳ್ಳಬೇಕಾಗುತ್ತದೆ. ಅನಾವಶ್ಯಕ ಗಾಬರಿ, ಧಾವಂತ, ಮನೋವೇದನೆ, ಕಳವಳ, ಹಿಂಸೆ, ಕ್ರೌರ್ಯ, ನರಳಿಕೆಗಳಿಗೆ ಆಕೆ ಈಡಾಗಬಾರದು. ಆಕೆಗೆ ನೆಮ್ಮದಿ, ಸಂತಸ ಹಾಗೂ ಉಲ್ಲಾಸಮಯ ವಾತಾವರಣ ಬೇಕು. ಆಕೆಯ ಮೇಲೆ ಸುತ್ತಲಿನ ವರಿಗೆ ಅಪಾರ ಪ್ರೀತಿಯಿರಬೇಕು ಮತ್ತು ಅದು ಗರ್ಭವತಿಯಲ್ಲಿ ಉಲ್ಲಾಸವನ್ನು ತರುವಂತಹ ಮಾನಸಿಕ ಆಸರೆಯಾಗಿ ವ್ಯಕ್ತವಾಗಬೇಕು.

**ಮಹಾಭಾರತದ ಒಂದು ಪ್ರಸಂಗ**

ತುಂಬು ಗರ್ಭಿಣಿಯಾದ ತಂಗಿ ಸುಭದ್ರೆಯನ್ನು ತವರುಮನೆಗೆ ಶ್ರೀಕೃಷ್ಣ ಪರಮಾತ್ಮ ಕರೆದುಕೊಂಡು ಹೋಗುತ್ತಿರುತ್ತಾನೆ. ಅಂದಿನ ಕಾಲದಲ್ಲಿ ಈಗಿನ ಹಾಗೆ ವಾಹನಗಳ ಸೌಕರ್ಯಗಳಿರಲಿಲ್ಲ, ಸುಸ್ಥಿತಿಯ ರಸ್ತೆಗಳಿರಲಿಲ್ಲ, ಕಲ್ಲು ಮುಳ್ಳಿನ ತೆಗ್ಗು ತೆವರುಗಳ ಕಚ್ಚಾ ರಸ್ತೆಯಲ್ಲಿಯೇ ರಥದಲ್ಲಿ ಸಾಗಬೇಕಾಗಿತ್ತು. ಪ್ರವಾಸದ ಪ್ರಯಾಸ ಮರೆಯಲೆಂದು ಆತ ತಂಗಿಗೆ ಕಥೆ ಹೇಳತೊಡಗುತ್ತಾನೆ. ಸುಭದ್ರೆ ಖುಷಿಪಡುತ್ತಾಳೆ. ಕಥೆ ಕೇಳುತ್ತಾ 'ಹುಂ' ಎನ್ನುತ್ತಿರುತ್ತಾಳೆ. ಹಾದಿ ಸಾಗಿದಂತೆ ಬಳಲಿಕೆಯಿಂದ ನಿದ್ದೆಹೋಗುತ್ತಾಳೆ. ಕಥೆ ಸಾಗಿಯೇ ಇರುತ್ತದೆ. ಸುಮಾರು ದೂರ ಸಾಗಿದ ಮೇಲೆ ಕೃಷ್ಣ ಹೊರಳಿ ನೋಡುತ್ತಾನೆ. ಕೃಷ್ಣನಿಗೆ ಅಚ್ಚರಿಯಾಗುತ್ತದೆ. ನಾನು ಹೇಳುತ್ತಿದ್ದ ಕಥೆ ಕೇಳಿ ಹೂಂ ಗುಟ್ಟಿದವರಾರು ಎಂಬ ಪ್ರಶ್ನೆ ಕಾಡುತ್ತದೆ. ಕೊನೆಗೆ ಸುಭದ್ರೆಯ ಗರ್ಭದಲ್ಲಿರುವ ಶಿಶು ಕಥೆ ಕೇಳಿದೆ ಎಂದು ತರ್ಕಿಸುತ್ತಾನೆ. ತಕ್ಷಣ ಕತೆ ಹೇಳುವುದನ್ನು ನಿಲ್ಲಿಸುತ್ತಾನೆ....

....ಹೀಗಾಗಿ ಸುಭದ್ರೆಯ ಮಗ ಅಭಿಮನ್ಯುವಿಗೆ ಚಕ್ರವ್ಯೂಹ ಭೇದಿಸಿ ಒಳ ನುಗ್ಗುವುದು ಮಾತ್ರ ಗೊತ್ತಾಗುತ್ತದೆ. ಅದರಿಂದ ಹೊರಗೆ ಬರುವ ಮಾರ್ಗದ ಭಾಗದ ಕಥೆಯನ್ನು ಕೇಳಿರುವುದಿಲ್ಲವಾದ್ದರಿಂದ ಅಭಿಮನ್ಯುವಿಗೆ ಅದು ಗೊತ್ತಾಗುವುದೇ ಇಲ್ಲ. ಇದು ಎಲ್ಲರಿಗೂ ತಿಳಿದಿರುವ ಕಥೆ. ನಿಮಗೂ ಈ ಕಥೆಯ ಪ್ರಸ್ತಾಪ ಮಾಡುವ ಉದ್ದೇಶ – ನಮಗೆ ಆರೋಗ್ಯವಂತ ಮಗು ಬೇಕಾಗಿದ್ದಲ್ಲಿ, ಗರ್ಭ ತಳೆದ ದಿನದಿಂದಲೇ ಗರ್ಭಿಣಿಯರು ಪುಣ್ಯ ಕಥೆಗಳನ್ನು ಹೇಳಿದರೆ ಅವುಗಳ ಪ್ರಭಾವದಿಂದ ಒಳ್ಳೆಯ ಮಕ್ಕಳು ಹುಟ್ಟುತ್ತಾರೆಂಬ ಭಾವನೆ ಇಂದಿಗೂ ಇದೆ. ಇದನ್ನು ವಿಜ್ಞಾನವೂ ಇಂದು ಒಪ್ಪಿಕೊಂಡಿದೆ.

ಪ್ರಸೂತಿ ಪೂರ್ವ ಪರಾಮರಿಕೆ ಫಲಪ್ರದವಾಗಬೇಕಾದರೆ, ಅದರಿಂದ ಗರ್ಭಿಣಿಗೆ ಸಾಕಷ್ಟು ಪ್ರಯೋಜನ ದೊರೆಯಬೇಕಾದರೆ, ಯಾವಾಗಲೋ ಒಮ್ಮೆ ತಪಾಸಣೆ ಮಾಡಿಸಿಕೊಂಡರೆ ಸಾಲದು. ನಿರಂತರವಾಗಿ, ನಿಯತಕಾಲಿಕವಾಗಿ ಆಗಾಗ್ಗೆ ತಪ್ಪದೇ ತಪಾಸಣೆ ಮಾಡಿಸಿಕೊಳ್ಳುತ್ತಿರಬೇಕು. ಗರ್ಭಧಾರಣೆ ಸುಸೂತ್ರವಾಗಿ ಮುಂದುವರೆಯಬೇಕಾದರೆ, ಹೆರಿಗೆ ನಿರಾತಂಕವಾಗಿ ಮುಗಿಯಬೇಕಾದರೆ, ಸಹಜವಾದ ಆರೋಗ್ಯವಂತ ಮಗು ಜನಿಸಬೇಕಾದರೆ ಗರ್ಭಿಣಿ ಆದ ದಿನದಿಂದಲೇ ತಜ್ಞವೈದ್ಯರ ಸಲಹೆ ಅಗತ್ಯ. ಗರ್ಭ ಧರಿಸಿದ ಮೊದಲ ಏಳು ತಿಂಗಳು ಕನಿಷ್ಠ ಪಕ್ಷ ತಿಂಗಳಿಗೊಮ್ಮೆಯಾದರೂ ತಪಾಸಣೆ ಮಾಡಿಸಿಕೊಳ್ಳಬೇಕು. ಎಂಟನೆ ತಿಂಗಳು ಹದಿನೈದು ದಿನಗಳಿಗೊಮ್ಮೆ, ಕೊನೆಯ ತಿಂಗಳು ವಾರಕ್ಕೊಮ್ಮೆ ಪರೀಕ್ಷಿಸಿಕೊಳ್ಳುವುದು ಉತ್ತಮ. ಹೀಗೆ ನಿಯತಕಾಲಿಕವಾಗಿ ತಪಾಸಣೆ ಮಾಡಿಸಿಕೊಳ್ಳುವುದರಿಂದ ದೇಹಸ್ಥಿತಿಯಲ್ಲಿನ ಬದಲಾವಣೆಗಳನ್ನು ತಕ್ಷಣ ಗುರುತಿಸಲು ಸಹಾಯವಾಗುವುದು, ಸೂಕ್ತ ಚಿಕಿತ್ಸೆ ನೀಡಲು ಅನುಕೂಲವಾಗುವುದು. ಇದರಿಂದ ಆಗಬಹುದಾದ ಅನಾಹುತಗಳನ್ನು ತಪ್ಪಿಸಲು ಸಾಧ್ಯ.

**ಡಾ|| ಕರವೀರಪ್ರಭು ಕ್ಯಾಲಕೊಂಡ**

''ಆರೈಕೆ ಆರು ಪಾಲು, ಧೈರ್ಯ ಮೂರು ಪಾಲು'' ಎಂದು ಹಳ್ಳಿ ಮುತ್ತೈದೆಯರು ಗರ್ಭಿಣಿಯರಿಗೆ, ಅವರ ಬಂಧುಗಳಿಗೆ ಎಚ್ಚರಿಕೆ ಕೊಡುತ್ತಾರೆ. ಇದರ ಅರ್ಥ ಸ್ಫಟಿಕದಷ್ಟೇ ಸ್ಪಷ್ಟ. ದೈವಕೃಪೆಯ ಮೇಲೆ ನಂಬಿಕೆ ಮೂರು ಪಾಲಾದರೆ, ನಾವು ಗರ್ಭಿಣಿಯರಿಗೆ ಮಾಡುವ ಆರೈಕೆ, ಉಪಚಾರಗಳು ಆರು ಪಾಲಾಗಿರಬೇಕು ಎಂದು. ಇದು ಕ್ರಮಬದ್ಧ ನಿಯತಕಾಲಿಕ ತಪಾಸಣೆಯಿಂದ ಮಾತ್ರ ಸಾಧ್ಯ. ಗರ್ಭಧಾರಣೆಯು ಸುಸೂತ್ರವಾಗಿ ಮುಂದುವರೆದು, ಹೆರಿಗೆಯು ನಿರಾತಂಕವಾಗಿ ನಡೆದು, ಆರೋಗ್ಯವಂತ ತಾಯಿ ಮತ್ತು ಮಗು ದೊರೆಯುವಂತೆ ಮಾಡುವುದೇ ಪ್ರಸೂತಿ ಪೂರ್ವ ಪರಾಮರಿಕೆಯ ಮುಖ್ಯಗುರಿ. ಗರ್ಭಿಣಿಯ ಸಾವು, ಗರ್ಭಿಣಿಯ ಮತ್ತು ಬಾಣಂತಿಯ ನಂಜು-ನೋವುಗಳು, ಗರ್ಭಸ್ಥ ಶಿಶುವಿನ ಸಾವು ಮತ್ತು ನವಜಾತ ಶಿಶುವಿನ ಸಾವು ನೋವುಗಳಿಂದ ಪಾರು ಮಾಡಲು ನೆರವಾಗುತ್ತದೆ ಪ್ರಸೂತಿ ಪೂರ್ವ ಪರಾಮರಿಕೆ.

**ಮೊದಲ ಮೂರು ತಿಂಗಳ ಪೋಷಣೆ**

ಗರ್ಭ ನಿಂತಿದೆ ಎಂಬ ಅನುಮಾನ ಉಂಟಾದ ಕೂಡಲೇ ವೈದ್ಯರ ಸಲಹೆ ಪಡೆಯಲು ಹೋಗುವುದು ನಮ್ಮ ಜನರಲ್ಲಿ ಕಡ್ಡಾಯದ ರೂಢಿಯಾಗಬೇಕು. ಗರ್ಭ ನಿಂತಿರುವುದೇ ನಿಜವಾದರೆ ಅದು ಗರ್ಭಕೋಶದಲ್ಲಿ ಬೆಳೆಯುತ್ತಿದೆಯೋ ಅಥವಾ ಗರ್ಭಕೋಶದ ಹೊರಗೆ ಬೆಳೆಯುತ್ತಿದೆಯೋ ಎಂಬುದನ್ನು ನಿರ್ಧರಿಸಬೇಕು. ಗರ್ಭ ನಿಂತ ನಂತರ ಭ್ರೂಣವು ಗರ್ಭಕೋಶದಲ್ಲಿ ಬೆಳೆಯದೇ ಮತ್ತೆಲ್ಲಿ ತಾನೆ ಬೆಳೆಯಲು ಸಾಧ್ಯ ? ಎಂದು ಅಚ್ಚರಿಪಡಬಹುದು. ಆದರೆ ಗರ್ಭಕೋಶದ ಹೊರಗಡೆಯಲ್ಲೂ ಭ್ರೂಣ ಬೆಳೆಯುವ ಸಂಭವಗಳುಂಟು. ಇದನ್ನು ಹೊರಬಸಿರು (Ectopic Pregnancy) ಎನ್ನುತ್ತಾರೆ. ಇಂಥ ಸಂದರ್ಭಗಳು ಅತಿ ವಿರಳವಾದರೂ, ಅವು ಅತೀ ಅಪಾಯಕಾರಿ. ಆದ್ದರಿಂದ ಅದನ್ನು ಪ್ರಾರಂಭದ ವಾರಗಳಲ್ಲಿಯೇ ಖಚಿತಪಡಿಸಿಕೊಂಡರೆ, ಅಂಥ ಗರ್ಭಿಣಿಯರನ್ನು ಅಪಾಯದಿಂದ ಪಾರು ಮಾಡಬಹುದು.

ಓಕರಿಕೆ, ವಾಂತಿ ಇವು ಗರ್ಭಧಾರಣೆಯ ಆರಂಭದ ವಾರಗಳಲ್ಲಿ ತಕ್ಕಮಟ್ಟಿಗೆ ಕಂಡು ಬರುವುದು ಸಹಜ. ಆದರೆ ಒಮ್ಮೊಮ್ಮೆ ಇವು ವಿಪರೀತವಾಗಿ ಗರ್ಭಿಣಿಯರನ್ನು ಪೀಡಿಸಬಹುದು. ವೈದ್ಯರ ಸಕಾಲಿಕ ನೆರವಿನಿಂದ ಈ ವೈಪರೀತ್ಯದ ಪರಿಸ್ಥಿತಿಯನ್ನು ಎದುರಿಸಲು ಸಾಧ್ಯವಾಗುತ್ತದೆ. ಗರ್ಭದಾನ ಪಡೆದ ಅಂಡವು ಗರ್ಭಕೋಶದಲ್ಲಿ ತಳ ಊರಿದೊಡನೆಯೇ ಅದರ ಅಂಗಾಂಗಗಳ ಸೃಷ್ಟಿ, ಅವುಗಳ ವಿಭಜನೆ ಮತ್ತು ಬೆಳವಣಿಗೆ ಜರಗುತ್ತದೆ. ಮೊದಲ ಮೂರು ತಿಂಗಳಲ್ಲಿ ಈ ಭ್ರೂಣ ಹೊಸ ರೂಪವನ್ನು ತಳೆದು ಗರ್ಭಸ್ಥ ಶಿಶುವಾಗಲು ತೊಡಗುತ್ತದೆ. ಈ ಅವಧಿಯಲ್ಲಿ ಈ ಭ್ರೂಣಕ್ಕೆ ಯಾವ ಧಕ್ಕೆಯೂ ಆಗಬಾರದು. ಆಕಸ್ಮಾತ್ ಧಕ್ಕೆ ಉಂಟಾದಲ್ಲಿ ಯಾವುದಾದರೊಂದು ಅಥವಾ ಹಲವು ಅಂಗಗಳಿಗೆ ನ್ಯೂನತೆ ಆಗಬಹುದು. ಭ್ರೂಣಕ್ಕೆ ನಾಲ್ಕು ತಿಂಗಳುಗಳಾಗುವಷ್ಟರಲ್ಲಿ ಪ್ರತಿ ಅಂಗವೂ ರೂಪುಗೊಂಡುಬಿಟ್ಟಿರುತ್ತದೆ. ಆಗ ಗರ್ಭಸ್ಥ ಶಿಶುವಿಗೆ ಸ್ವಲ್ಪ ನಿರಾಳ; ಈ ರೀತಿಯ ತೊಡಕು ಅಷ್ಟಾಗಿ ಇರದು; ಮೊದಲ ಮೂರು ತಿಂಗಳು ತಾಯಿ ಜಾಗರೂಕಳಾಗಿರಬೇಕಾದದು ಅತ್ಯಗತ್ಯ. ಆದ್ದರಿಂದ ಆರೋಗ್ಯವಂತ ದೃಢಕಾಯವಾದ ಮಗು ಹುಟ್ಟಬೇಕಾದರೆ, ಗರ್ಭಿಣಿಯಾದ ಮೊದಲನೆಯ ದಿನದಿಂಲೇ ಅದಕ್ಕೆ ರಕ್ಷಣೆ ಹಾಗೂ ಪೋಷಣೆ ನಡೆಯಬೇಕು ಎಂಬುದನ್ನು ಎಲ್ಲರೂ ತಿಳಿದಿರಬೇಕು.

ಸಂಜಾತ ಊನಗಳನ್ನು ತಪ್ಪಿಸುವ ಸಲುವಾಗಿ ಮೊದಲ ಮೂರು ತಿಂಗಳ ಗರ್ಭಾವಧಿಯಲ್ಲಿ ವಿಕೃತಿಯನ್ನುಂಟುಮಾಡುವ ಕಿರಾತ ಜನಕ (Tevatogenic) ಔಷಧಿಗಳನ್ನು ಸೇವಿಸಬಾರದು. ಒಮ್ಮೆ ಜರ್ಮನಿಯಲ್ಲಿ ದೊಡ್ಡ ಅನಾಹುತವಾಯಿತು. 'ಥಾಲಿಡೊಮೈಡ್' ಎಂಬ ನೆಮ್ಮದಿ ತರುವ ಔಷಧಿಯನ್ನು, ಅದರ ಭಯಂಕರ ಶಕ್ತಿಯನ್ನರಿಯದೇ, ಅನೇಕ ಗರ್ಭಿಣಿ ಸ್ತ್ರೀಯರು ಬಳಸಿದ್ದರಿಂದ ಅವರಿಗೆಲ್ಲ ಹುಟ್ಟಿದ ಮಕ್ಕಳು ಅಂಗವಿಕಲವಾದವು. ಆದ್ದರಿಂದ ಗರ್ಭಿಣಿ ಸ್ತ್ರೀ ಯಾವುದೇ ಕಾರಣಕ್ಕಾಗಿಯಾದರೂ ವೈದ್ಯರ ಸಮ್ಮತಿಯಿಲ್ಲದೆ ಯಾವುದೇ ಗುಳಿಗೆಯನ್ನಾಗಲೀ, ಚುಚ್ಚುಮದ್ದನ್ನಾಗಲೀ ತೆಗೆದುಕೊಳ್ಳಬಾರದು.

ಗರ್ಭಿಣಿಗೆ ಮೊದಲ ಮೂರು ತಿಂಗಳಲ್ಲಿ ಯಾವುದಾದರೂ ಸಾಂಕ್ರಾಮಿಕ ರೋಗ ಬಂದರೆ, ಕಾಮಾಲೆ, ಜ್ವರದ ಗುಳ್ಳೆಗಳು ಕಂಡುಬಂದರೆ, ಸಿಫಿಲಿಸ್ ಇದ್ದರೆ ಹುಟ್ಟುವ ಮಗು ವಿಕಲಾಂಗಿಯಾಗಬಹುದು. ಜರ್ಮನ್ ಮೀಸಲ್ಸ್ ತಾಯಿಗೆ ಈ ಅವಧಿಯಲ್ಲಿ ಕಾಣಿಸಿಕೊಂಡರೆ, ವಿಲಕ್ಷಣ ಜನನ ಖಂಡಿತ. ಕುರುಡಾಗಿಯೋ, ಕಿವುಡಾಗಿಯೋ, ಹೃದಯ ರೋಗಿಯಾಗಿಯೋ ಹುಟ್ಟಬಹುದು. ಸುದೈವದ ಸಂಗತಿ ಎಂದರೆ ಈ ರೋಗ ನಮ್ಮ ದೇಶದಲ್ಲಿ ಅತ್ಯಂತ ವಿರಳ.

ಮೊದಲ ಮೂರು ತಿಂಗಳ ಕಾಲಾವಧಿಯಲ್ಲಿ ಗರ್ಭಿಣಿ ಸ್ತ್ರೀಯರಿಗೆ ಎಕ್ಸ್‌ರೇ ತೆಗೆಯಬೇಕಾದ ಸಂದರ್ಭ ಬಂದಾಗ, ತುಂಬಾ ಯೋಚನೆ ಮಾಡಬೇಕು. ಮಗುವಿನ ವರ್ಣತಂತುಗಳ ಮೇಲೆ 'ಎಕ್ಸ್‌ರೇ' ಕಿರಣಗಳು ದುಷ್ಪರಿಣಾಮ ಬೀರುವುದರಿಂದಾಗಿ

ನ್ಯೂನತೆಗಳ ಕರಿ ನೆರಳು ಶಿಶುವಿನ ಸುತ್ತ ಗಸ್ತು ಹೊಡೆಯುತ್ತದೆ. ಕಾರಣ ಗರ್ಭಿಣಿ ಸ್ತ್ರೀ ಮೊದಲ ಮೂರು ತಿಂಗಳಲ್ಲಿ ಬಹು ಜಾಗರೂಕತೆಯಿಂದ ಇರಬೇಕು. ವೈದ್ಯರ ಸಲಹೆ ಇಲ್ಲದೆ ಅನಾವಶ್ಯಕವಾಗಿ ಯಾವುದೇ ಚಿಕಿತ್ಸೆಗೆ ಒಳಗಾಗಬಾರದು. ಯಾವುದೇ ಮದ್ದನ್ನು ಸೇವಿಸಬಾರದು. ಈ ಬಗ್ಗೆ ನಿರ್ಲಕ್ಷ್ಯ ಅಕ್ಷಮ್ಯ.

**ಕೊನೆಯ ಆರು ತಿಂಗಳ ಪೋಷಣೆ**

ಗರ್ಭಸ್ಥ ಶಿಶುವಿನ ಎತ್ತರ ಮತ್ತು ತೂಕ ಗರ್ಭಾವಧಿಯ ಮಧ್ಯದ ಮತ್ತು ಕೊನೆಯ ಮೂರು ತಿಂಗಳಲ್ಲಿ ಹೆಚ್ಚುವುವು. ಮಿದುಳಿನ ಬೆಳವಣಿಗೆ ಕೊನೆಯ ಮೂರು ತಿಂಗಳಲ್ಲಿ ಆರಂಭವಾಗುತ್ತದೆ. ಅಂದರೆ, ಆ ಅವಧಿಯಲ್ಲಿ ತಾಯಿಯ ಆರೋಗ್ಯ ಚೆನ್ನಾಗಿರಬೇಕು. ಇಲ್ಲದಿದ್ದರೆ ಗರ್ಭಸ್ಥ ಶಿಶುವಿನ ಬೆಳವಣಿಗೆ ಕುಂಠಿತವಾಗುತ್ತದೆ. ತಾಯಿಯ ಆಹಾರದಲ್ಲಿನ ಕ್ಯಾಲ್ಸಿಯಂ ಮಗುವಿನ ಬೆಳವಣಿಗೆಗೆ ಅತಿ ಮುಖ್ಯ. ಕ್ಯಾಲ್ಸಿಯಂ ಕೊರತೆಯಾದರೆ ಗರ್ಭಿಣಿ ಮಹಿಳೆಯರಿಗೆ ಧಕ್ಕೆ ಯಾಗುವುದಲ್ಲದೆ ಹೆರಿಗೆ ವೇಳೆಯಲ್ಲಿ ತೊಂದರೆಯಾಗುವುದು. 'ಪ್ರತಿ ಬಸುರಿಗೆ ಒಂದು ಹಲ್ಲು ಮೀಸಲು' ಎಂಬ ಪ್ರಚಲಿತ ಮಾತು ಕ್ಯಾಲ್ಸಿಯಂ ಪೂರೈಕೆಯ ಪ್ರಾಮುಖ್ಯತೆಯ ಬಗ್ಗೆ ಒತ್ತಿ ಹೇಳುತ್ತದೆ.

ಗರ್ಭಿಣಿಯರಲ್ಲಿ ನ್ಯೂನ ಪೋಷಣೆ, ಸಸಾರಜನಕದ ಕೊರತೆ, ರಕ್ತಹೀನತೆ, ತಲೆದೋರಿದಲ್ಲಿ ಶಿಶುವಿನ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತದೆ. ದಿನ ತುಂಬುವ ಮೊದಲೇ ಮಗು ಜನಿಸಿ, ತೊಂದರೆಗಳಿಗೆ ತುತ್ತಾಗುವ ಸಂಭವ ಹೆಚ್ಚು. ಕಡಿಮೆ ತೂಕದ ಮಕ್ಕಳು, ಬೆಳವಣಿಗೆಯಾಗದ ಮಕ್ಕಳು, ನಿರ್ಬಲ ಶಿಶುವಾಗಿ ಹುಟ್ಟಬಹುದು. ಆದ್ದರಿಂದ ಗರ್ಭಿಣಿ ಸ್ತ್ರೀ ಸತ್ವಯುತ, ಶಕ್ತಿಯುತ, ಸಮತೋಲ ಆಹಾರವನ್ನು ಸೇವಿಸುವುದು ಒಳ್ಳೆಯದು. ಹಣ್ಣು, ಹಾಲು, ತರಕಾರಿ, ಹಸಿರು ತೊಪ್ಪಲು ಪಲ್ಲೆ, ತುಪ್ಪ, ಬೇಳೆಕಾಳುಗಳನ್ನು, ಮಾಂಸಾಹಾರಿಗಳಾದರೆ ಮಾಂಸ, ಮೀನು ಮೊಟ್ಟೆ ನಿತ್ಯ ಬಳಸಬೇಕು.

ಕೀಟಲೆ ಕೊಡುವ ಅತ್ತೆ ಮಾವಂದಿರೂ ಗರ್ಭಿಣಿಯರನ್ನು ಗೌರವಿಸಿ, 'ಹೂ' ಮುಡಿಸುವ 'ಸೀಮಂತ' ಕಾರ್ಯ ಮಾಡುತ್ತಾರೆ. ನೆರೆಹೊರೆಯವರೂ 'ಹೂ' ಮುಡಿಸುವ ಕಾರ್ಯದಲ್ಲಿ ಭಾಗವಹಿಸಿ ಒಳ್ಳೆ ವಾತಾವರಣವನ್ನು, ಮಾನಸಿಕ ನೆಮ್ಮದಿಯನ್ನು ನೀಡುತ್ತಾರೆ. ಹೆರಿಗೆ ಚೆನ್ನಾಗಿ ಆಗಲಿ, ಮಗುವೂ ಚೆನ್ನಾಗಿ ಬೆಳೆಯಲಿ ಎಂದು 'ಬಯಕೆ'ಯ ಊಟ-ಉಡುಗೊರೆಗಳನ್ನು ಕೊಡುತ್ತಾರೆ. 'ಬಯಕೆಯ ಬುತ್ತಿ'ಯಿಂದ ಎಲ್ಲ ಜೀವಸತ್ವಗಳು, ಅವಶ್ಯಕ ಲವಣಾಂಶಗಳೂ, ಶರ್ಕರ, ಪಿಷ್ಟ, ಕೊಬ್ಬು, ಪ್ರೋಟೀನುಗಳು ಹೇರಳವಾಗಿ ಪೂರೈಕೆಯಾಗುತ್ತವೆ. ಹೀಗೆ ಅನೇಕ ಆಪ್ತರ ಮನೆಯಲ್ಲಿ ವಿಭಿನ್ನ ವಾತಾವರಣದಲ್ಲಿ ವೈವಿಧ್ಯಮಯ ಊಟ ಮಾಡಿ ಬರುವ ಗರ್ಭಿಣಿ ಆರೋಗ್ಯವಾಗಿರುತ್ತಾಳೆ. ನಮ್ಮ ಸಮಾಜದಲ್ಲಿ ಇನ್ನೊಂದು ಒಳ್ಳೇ ಸಂಪ್ರದಾಯವಿದೆ. ಊಟವಾದ ಮೇಲೆ ಎಲೆ ಅಡಿಕೆ ಹಾಕಿಕೊಳ್ಳಲು ಹೇಳುತ್ತಾರೆ. ಎಲೆ ಅಡಿಕೆಯೊಂದಿಗೆ ಸುಣ್ಣವೂ ಬೆರೆತಿರುತ್ತದೆ. ಇದರಿಂದ ಆಕೆಗೆ ಅವಶ್ಯಕವಾದ ಕ್ಯಾಲ್ಸಿಯಂನ ಸರಬರಾಜು ಆಗುತ್ತದೆ. ಆದರೆ ಕೇವಲ ವೀಳ್ಯದೊಂದಿಗೆ ಹಾಕಿಕೊಳ್ಳುವ ಸುಣ್ಣ ಒದಗಿಸುವ ಕ್ಯಾಲ್ಸಿಯಂ ಸಾಲದು. ಕನಿಷ್ಠ ಪಕ್ಷ ಆಕೆಗೆ ದಿನಕ್ಕೆ ೧೦೦೦ ಮಿ.ಗ್ರಾಂ. ಕ್ಯಾಲ್ಸಿಯಂ ಮತ್ತು ೪೦ ಮಿ.ಗ್ರಾಂ. ಕಬ್ಬಿಣಾಂಶಗಳ ಅವಶ್ಯಕತೆಯಿರುತ್ತದೆ. ಆದ್ದರಿಂದ ಈ ಅವಶ್ಯಕತೆಗೆ ತಕ್ಕ ಮಾತ್ರೆಗಳನ್ನು ವೈದ್ಯರ ಸಲಹೆ ಮೇರೆಗೆ ಸೇವಿಸಬೇಕು.

ಗರ್ಭಿಣಿಯ ಮೂತ್ರ, ರಕ್ತ ಒತ್ತಡ, ತೂಕ ಇತ್ಯಾದಿಗಳನ್ನು ಪರೀಕ್ಷಿಸಿ ನೋಡುವುದರಿಂದ ಗರ್ಭಿಣಿಯು ಸಹಜ ದೇಹಾರೋಗ್ಯ ಹೊಂದಿರುವಳೆ ಎಂಬುದು ದೃಢ ಪಡುತ್ತದೆ. ಗರ್ಭಿಣಿಯರ ಪ್ರಾಣಕ್ಕೇ ಅಪಾಯಕಾರಿಯಾದ 'ಬಸುರಿನ ನಂಜು' (Eclampsia) ಏನಾದರೂ ತಲೆದೋರುವ ಲಕ್ಷಣಗಳಿದ್ದರೆ, ಕೂಡಲೇ ಚಿಕಿತ್ಸೆ ಆರಂಭಿಸಿ ಅಪಾಯವನ್ನು ತಪ್ಪಿಸಲು ಸಾಧ್ಯವಾಗುತ್ತದೆ. ಗರ್ಭಿಣಿಯರಿಗೆ ಪರಂಗಿ ರೋಗ ಇಲ್ಲವೇ ಗನೋರಿಯಾ ಏನಾದರೂ ತಗಲಿದ್ದರೆ ಅವುಗಳಿಗೆ ಸಕಾಲದಲ್ಲಿ ಸಂಪೂರ್ಣ ಚಿಕಿತ್ಸೆ ಪಡೆಯುವುದು ಅತ್ಯಗತ್ಯ. ಇಲ್ಲವಾದರೆ, ತಾಯಿ ಮತ್ತು ಮಗು ಇಬ್ಬರಿಗೂ ತೊಂದರೆ ತಪ್ಪಿದ್ದಲ್ಲ. ಗರ್ಭಿಣಿಯರ ರಕ್ತ ಪರೀಕ್ಷೆಯನ್ನು ಕೂಲಂಕಷವಾಗಿ ಮಾಡಿ, ರಕ್ತ ಹೀನತೆ ಇದ್ದರೆ ಸರಿಯಾದ ಔಷಧೋಪಚಾರ ಮಾಡಬೇಕಾಗುತ್ತದೆ. ರಕ್ತ ಪರೀಕ್ಷೆ ಮಾಡುವಾಗ ರಕ್ತಗುಂಪನ್ನು ಕಂಡುಹಿಡಿಯಲು ಮರೆಯಬಾರದು.

ಗರ್ಭಿಣಿಯರಿಗೆ ತಪ್ಪದೆ, ಎರಡು ಬಾರಿ ಟಿಟಾನಸ್ ಟಾಕ್ಸಾಯ್ಡ್ ಕೊಡಬೇಕು. ಮೊದಲನೆಯದನ್ನು ನಾಲ್ಕನೇ ತಿಂಗಳಲ್ಲೂ, ಎರಡನೆಯದನ್ನು ನಾಲ್ಕರಿಂದ ಎಂಟು ವಾರಗಳ ಅಂತರದಲ್ಲಿ ಕೊಡಬೇಕು. ಹೆರಿಗೆಯಾದ ಮೂರು ವರ್ಷದೊಳಗೆ ಆಕೆ ಮತ್ತೆ ಗರ್ಭಿಣಿಯಾದರೆ, ಕೇವಲ ಏಳನೆಯ ತಿಂಗಳಲ್ಲಿ ಒಂದು ಟಿಟಾನಸ್ ಟಾಕ್ಸಾಯ್ಡ್ ಚುಚ್ಚುಮದ್ದನ್ನು ಕೊಟ್ಟರೆ ಸಾಕು. ಮೂರು ವರ್ಷಗಳ ನಂತರವಾದರೆ, ತಪ್ಪದೇ ಎರಡು ಸಲ ಕೊಡಬೇಕು. ಹೀಗೆ ಕೊಡುವುದರಿಂದ ತಾಯಿ ಮತ್ತು ಮಗು ಇಬ್ಬರೂ ಧನುರ್ವಾಯುವಿನಿಂದ ರಕ್ಷಣೆ ಪಡೆಯುತ್ತಾರೆ.

ಗರ್ಭ ಧರಿಸಿದ ಕಾಲದಲ್ಲಿ ವಹಿಸಬೇಕಾದ ಮುಂಜಾಗರೂಕತೆ ಮತ್ತೊಂದಿದೆ. ಇದು ಸಾಮಾನ್ಯವಾಗಿ ವೈದ್ಯರುಗಳಿಂದ ನಿರ್ಲಕ್ಷ್ಯಕ್ಕೊಳಗಾಗಿರುವಂತಹ ಸಂಗತಿಯಾಗಿದೆ. ಅದೇಂದರೆ, ಗರ್ಭಿಣಿಯ ಮೊಲೆ ತೊಟ್ಟುಗಳನ್ನು ವೈದ್ಯರು ಪರೀಕ್ಷಿಸಬೇಕು. ಕೆಲವೊಮ್ಮೆ ಮೊಲೆ ತೊಟ್ಟುಗಳು ಒಳಕ್ಕೆ ತಿರುಗಿಕೊಂಡಿದ್ದು (Retracted nipples) ಹೆರಿಗೆಯ ನಂತರವೂ ಹಾಗೆಯೇ ಉಳಿದರೆ ಮಗುವಿಗೆ ಹಾಲುಣಿಸುವುದು ಕಷ್ಟವಾಗುತ್ತದೆ. ಇದನ್ನು ಗರ್ಭಿಣಿಯಿದ್ದಾಗಲೇ ಗಮನಿಸಿದರೆ ಚಿಕಿತ್ಸೆ ಕೊಡಲು ಸಾಧ್ಯವಾಗುತ್ತದೆ. ಇಂತಹ ಸರಳ ಮುಂಜಾಗರೂಕತೆಯನ್ನು ಅಲಕ್ಷಿಸಿ, ಮಗು ಅಮ್ಮನ ಹಾಲಿನಿಂದ ವಂಚಿತವಾಗದಂತೆ ನೋಡಿಕೊಳ್ಳಬೇಕು. ಗರ್ಭಿಣಿ ಸ್ತ್ರೀಗೆ ತಕ್ಕ ವ್ಯಾಯಾಮ ಸಹ ಅಗತ್ಯ. ಆಗ ಗರ್ಭ ಸುಸೂತ್ರವಾಗಿ ಮುಂದುವರಿದು, ಹೆರಿಗೆ ಸುಲಭವಾಗುವುದು. ಗರ್ಭಿಣಿಗೆ ಯಾವ ಮನೋವ್ಯಥೆಯೂ ಇರಕೂಡದು. ಆತಂಕ, ಗಾಬರಿ ಆಕೆಯ ಸಮೀಪ ಸಹ ಸುಳಿಯಬಾರದು. ಗರ್ಭಸ್ಥ ಶಿಶುವಿನ ಮೇಲೆ ಅವುಗಳ ಪರಿಣಾಮ ಗಾಢವಾಗಿರುತ್ತದೆ. ಗರ್ಭಪಾತ, ಅಕಾಲಿಕ ಶಿಶು ಜನನ, ಕ್ಷೀಣ ಶಿಶುವಿನ ಜನನಗಳಲ್ಲಿ ಇದು ಅಂತ್ಯಗೊಳ್ಳಬಹುದು. ಹುಟ್ಟಲಿರುವ ಮಗುವಿನ ಮತ್ತು ಭವಿಷ್ಯದ ತಾಯಿಯ ಸಮಗ್ರ ಆರೋಗ್ಯಕ್ಕಾಗಿ ಗರ್ಭಿಣಿ ಕಡಿಮೆ ಕೆಲಸ ಮಾಡಬೇಕು. ಸಮತೋಲ ಆಹಾರ ಸೇವಿಸಬೇಕು. ಆಕೆಗೆ ನೆಮ್ಮದಿ ನೀಡುವಂತಹ ವಾತಾವರಣವಿರಬೇಕು. ಹೆಚ್ಚಿನ ಕಬ್ಬಿಣಾಂಶ ಮತ್ತು ಕ್ಯಾಲ್ಸಿಯಂ ದೊರೆಯಬೇಕು. ಈ ಎಲ್ಲವುಗಳನ್ನು ಗರ್ಭಿಣಿಗೆ ಅವಳ ಕೈ ಹಿಡಿದಾತ ಸಲೀಸಾಗಿ ಒದಗಿಸಬಹುದು. ಆ ಮಾತ್ರದ ಸಹನೆ, ಪ್ರೀತಿ ಆತನಿಗಿರಬೇಕು. ಎಲ್ಲಾ ಗಂಡಂದಿರೂ ನೆನಪಿಡಬೇಕಾದ ಶಾಶ್ವತ ಸತ್ಯವೊಂದಿದೆ. ಗರ್ಭಿಣಿಯಾದ ಮಡದಿಗಾಗಿ, ಆಕೆಯ ಸಂತೋಷಕ್ಕಾಗಿ ಆಕೆಯ ಗಂಡ ಮಾಡುವ ಎಲ್ಲ ಸಹಾಯ, ಸಹಾನುಭೂತಿ, ನೀಡುವ ಪ್ರೀತಿ, ಕೊಡುವ ಸೌಖ್ಯಗಳೇ ಆತ ತನ್ನ ಸಂತಾನಕ್ಕಾಗಿ ಹೂಡಿದಂತಹ ಅತಿದೊಡ್ಡ ಬಂಡವಾಳ.

"ಮೊದಲ ಪ್ರಸವವನ್ನು ಅನುಭವಿಸುವ, ಮೊದಲ ಮಗುವನ್ನು ಹೆರುವ ಮೂಲಕ ಹುಡುಗಿಯೊಬ್ಬಳು ತನ್ನ ಬಾಲ್ಯವನ್ನು ಮುಗಿಸಿಕೊಳ್ಳುತ್ತಾಳೆ;" ಎಂಥ ಅದ್ಭುತ ಮಾತಲ್ಲವೆ? ತನಗೊಂದು ಮಗು ಆಗುವವರೆಗೂ ಅವಳು ಬಾಲೆಯೇ; ತಾಯಿಯಾಗುವುದರೊಂದಿಗೆ ಅವಳ ಬಾಲ್ಯ ಮುಕ್ತಾಯವಾಗುತ್ತದೆ. ಮೊದಲ ಪ್ರಸವವೆಂಬುದು ಕೊಂಚ ಯಾತನಾದಾಯಕ, ಆತಂಕದಾಯಕ ಎಂಬುದು ನಿಜವಾದರೂ, ಅಷ್ಟೇ ಸಾರ್ಥಕ ಸಂತೋಷಕ್ಕೆ ಕಾರಣವಾಗುತ್ತದೆಂಬುದೂ ನಿಜ. ಮೊದಲ ಹೆರಿಗೆ ಸರಾಗವಾಗಿ ಸುಸೂತ್ರವಾಗಿ ಆಗಬೇಕೆಂದರೆ ಅದಕ್ಕೆ ಪೂರಕವಾದಂತಹ ವಾತಾವರಣ ಅಗತ್ಯವಾಗಿ ಇರಬೇಕು.

ಹೆರಿಗೆಯ ಸಮಯದಲ್ಲಿ 'ಪಂಚಶುಚಿತ್ವ' (Five cleans) ಪಾಲಿಸಿ, ಶುಚಿಯಾದ ಸ್ಥಳ, ಶುಚಿಯಾದ ಕೈಗಳು, ಶುಚಿಯಾದ ಹೊಸ ಬ್ಲೇಡು, ಶುಚಿಯಾದ ದಾರ, ಶುಚಿಯಾದ ಹೊಕ್ಕಳ ಹುರಿಗೆ ಏನನ್ನೂ ಹಚ್ಚದೆ ಇರುವುದು, ಸುರಕ್ಷಿತ ಹೆರಿಗೆಗಾಗಿ ಇವೆಲ್ಲವುಗಳನ್ನು ಸರಕಾರ 'ಕಿಟ್' ರೂಪದಲ್ಲಿ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ತರಬೇತಿ ಪಡೆದ ದಾಯಿಗಳಿಗೆ ಪೂರೈಸಿದೆ. ಇವುಗಳ ಸದುಪಯೋಗ ಆಗಬೇಕು. ಇದರಿಂದ ಎಷ್ಟೋ ಅಪಾಯಕಾರಿ ಅನಾಹುತಗಳನ್ನು ತಪ್ಪಿಸಬಹುದು.

ಮನೆಯಲ್ಲಿ ಏನೆಲ್ಲ ಅನುಕೂಲತೆಗಳಿದ್ದಾಗ್ಯೂ ಮೊದಲ ಹೆರಿಗೆ ಸುಸಜ್ಜಿತ ಆಸ್ಪತ್ರೆಯಲ್ಲೇ ಆಗುವುದು ಸೂಕ್ತ; ಕಷ್ಟದ ಹೆರಿಗೆಯ ಹಿನ್ನೆಲೆಯಿದ್ದಾಗ. ಈ ಮಾತು ಉಳಿದ ಹೆರಿಗೆಗೂ ಅನ್ವಯಿಸುತ್ತದೆ.

**ಡಾ|| ಕರವೀರಪ್ರಭು ಕ್ಯಾಲಕೊಂಡ**
ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ನವನಗರ, ಬಾಗಲಕೋಟೆ

‘ನಿಮ್ಮಲ್ಲಿ ಶಿವರಾಮ ಕಾರಂತರ ‘ವಿಜ್ಞಾನ ಪ್ರಪಂಚ’ದ ಪ್ರತಿಗಳಿವೆಯೆ ?’

ಬೆಂಗಳೂರಿನ ಹೆಸರಾಂತ ಪ್ರಕಾಶಕರು, ಪುಸ್ತಕ ವ್ಯಾಪಾರಿಗಳನ್ನೆಲ್ಲ ಕೇಳಿದ್ದೆ. ‘ಈ ಜಗತ್ತು’ ಇದೆ ಎಂದು ಒಂದು ಸಂಸ್ಥೆ ಹೇಳಿತು. ‘ವಿಜ್ಞಾನ ಸಾಧನ’ದ ಒಂದೇ ಒಂದು ಪ್ರತಿ ಇದೆ ಎಂದರು ಇನ್ನೊಬ್ಬ ಪುಸ್ತಕ ವ್ಯಾಪಾರಿ. ‘ಒಟ್ಟಿಗೇ ನಾಲ್ಕೂ ಸಂಪುಟಗಳು ಬೇಕಲ್ಲ’ ಎಂದೆ. ಯಾರೂ ‘ಇದೆ’ ಎನ್ನುವ ಮಾತನಾಡಲಿಲ್ಲ. ಎಲ್ಲೂ ದೊರಕದಿದ್ದಾಗ ನಾಲ್ಕಾರು ನಗರ ಕೇಂದ್ರ ಗ್ರಂಥಾಲಯಗಳನ್ನೂ ಹೊಕ್ಕೆ. ಯಾವ ರೆಫರೆನ್ಸ್ ಸೆಕ್ಷನ್‌ನಲ್ಲೂ ಇರಲಿಲ್ಲ. ೧೯೩೭-೩೯ರ ನಡುವೆ ಕಾರಂತರು ರಚಿಸಿದ್ದ ಈ ನಾಲ್ಕೂ ಕೃತಿಗಳು ೮೦-೯೦ರ ದಶಕದಲ್ಲಿ ಮರು ಮುದ್ರಣ ಕಂಡಿದ್ದವು. ಈಗ ಅವೂ ಖಾಲಿ. ಇದು ಪ್ರಕಾಶಕರಿಗೆ ಖುಷಿ ಕೊಡುವ ಸಂಗತಿಯೇ. ಕಾರಂತರ ‘ಬಾಲಪ್ರಪಂಚ’ ಮಕ್ಕಳ ವಿಶ್ವಕೋಶ ರಚನೆಯಾಗಿ ೬೭ ವರ್ಷಗಳಾಯಿತು. ಕಳೆದ ವರ್ಷವಷ್ಟೇ ಅವು ಮರು ಮುದ್ರಣವಾಗಿವೆ. ಆ ಪೈಕಿ ಮೊದಲ ಸಂಪುಟ ಹೊರ ಬಂದಿದೆ. ಮಾಲಿನಿ ಮಲ್ಯ ಅವರು ಈ ಸಂಪುಟಕ್ಕೊಂದು ಸುದೀರ್ಘ ಮುನ್ನುಡಿ ಬರೆದು ಇದು ಪರಿಷ್ಕೃತ ಸಂಪುಟ ಎಂದಿದ್ದಾರೆ. ಅಂತೂ ಕಾರಂತರ ವಿಜ್ಞಾನ ಕೃತಿಗಳ ಪರಿಷ್ಕರಣೆಯಾಗಿ ಓದುಗರಿಗೆ ಹೊಸ ಮಾಹಿತಿಯನ್ನು ಕೊಡಲು ಒಬ್ಬರಾದರೂ ಮನಸ್ಸು ಮಾಡಿದರಲ್ಲ ಎಂಬ ಸಾಂತ್ವನ, ಸಂತಸ ಒಟ್ಟಿಗೇ ಆಗಬೇಕಾದ್ದು ಸಹಜ ತಾನೇ ? ಮುನ್ನುಡಿ ಓದಿದಾಗ ಖುಷಿ ಆಯಿತು. ಈ ೬೭ ವರ್ಷಗಳಲ್ಲಿ ವಿಜ್ಞಾನ ರಂಗ ಅದೆಷ್ಟೆತ್ತರಕ್ಕೆ ಬೆಳೆದಿದೆ ! ಭೌತ ಜಗತ್ತಿನಲ್ಲಿ, ಜೀವ ಜಗತ್ತಿನಲ್ಲಿ, ಯಂತ್ರಗಳ ಆವಿಷ್ಕಾರದ ಸಾಧನೆಯಲ್ಲಿ, ವಸ್ತುವಿನ ಪರಿಕಲ್ಪನೆಯಲ್ಲಿ ಅದೆಂಥ ಬದಲಾವಣೆಯ ಬಿರುಗಾಳಿ ಬೀಸಿದೆ. ತಾಯ ಕೆಚ್ಚಲಿನ ಕೋಶದಿಂದಲೇ ಮೈದಳೆದ ಡಾಲಿ ಕುರಿಮರಿ ಸುದ್ದಿ ಮಾಡಿದ್ದೂ ಆಯಿತು, ಅದು ಸತ್ತದ್ದೂ ಆಯಿತು. ಈಗ ಅದು ಬರಿ

# ಕಾರಂತರ ವಿಜ್ಞಾನ ಕೃತಿಗಳ ಮರುಮುದ್ರಣ ಎಷ್ಟು ಪ್ರಸ್ತುತ?



**ಸರ್ಕಾರಿ ಪಠ್ಯ ಪುಸ್ತಕಗಳ ನಿರುತ್ಸಾಹಿ ಪಾಠಗಳ ಬಗ್ಗೆ ಬೇಸತ್ತು, ಕೆಲವೊಮ್ಮೆ ಕಿಡಿಕಾರಿ, ಅವನ್ನೆಲ್ಲ ಸಾರಾಸಗಟಾಗಿ ಬದಿಗಿಟ್ಟು, ‘ಮಕ್ಕಳಿಗೆ ಬರೆಯುವುದಾದರೆ ಹೀಗೆ ಬರೆಯಿರಿ’ ಎಂದು ಉಪದೇಶಿಸದೆ ಬರೆದು ತೋರಿಸಿದ ಜ್ಞಾನ ಪಿಪಾಸು ಶಿವರಾಮ ಕಾರಂತರು; ತಿಳಿವಿನ ಹಲವು ಮಗ್ಗುಲನ್ನು ಕನ್ನಡದ ಜನತೆಯ ಮುಂದಿಟ್ಟ ಧೀಮಂತ.**

**ಶಿವರಾಮ ಕಾರಂತರು ಅಳಿದ ಮೇಲೂ ಸಾರಸ್ವತ ಲೋಕದಲ್ಲಿ ಉಳಿದಿರುವ ಅಸಾಮಾನ್ಯ ಬರಹಗಾರ, ಚಿಂತಕ. ವಿಜ್ಞಾನ ಸಾಹಿತ್ಯದಲ್ಲಿ ಅವರು ಮಾಡಿರುವ ಕೃಷಿ ಉಳಿಯಬೇಕಾದರೆ ಅವರ ಕೃತಿಗಳ ಪರಿಷ್ಕರಣೆಯಾಗಬೇಕು. ಅದರ ಐತಿಹಾಸಿಕ ಮಹತ್ವವನ್ನಷ್ಟೇ ಉಳಿಸಿಕೊಳ್ಳಲು ಹೋರಾಡಿದರೆ ಅವರ ಎಲ್ಲ ವಿಜ್ಞಾನ ಕೃತಿಗಳೂ ಮ್ಯೂಸಿಯಂ ಪೀಸುಗಳಾಗುತ್ತವೆ ಎಂಬುದು ಕಹಿ ಮಾತಾಗಬಹುದು. ಆದರೆ ಅದು ನುಂಗಲಾರದ ಸತ್ಯ.**

**— ಟಿ. ಆರ್. ಅನಂತರಾಮು —**

ಚರ್ಮಾಂಬರಧಾರಿ. ಆಕಾಶದುದ್ದಕ್ಕೂ ಜಿಗಿದ ಕಲ್ಪನಾ ಚಾವ್ಲ ನಮ್ಮ ಮುಂದೆಯೇ ಕರಗಿಬಿಟ್ಟಳಲ್ಲ ಮೊನ್ನೆ ಮೊನ್ನೆ! ಮನುಷ್ಯನ ದೇಹದ ಜೀವಕೋಶಗಳಲ್ಲಿ ಇರುವ ವಂಶವಾಹಿಗಳ ಮಹಾ ಮೋಜಣಿಯಾಗಿದೆ. ನಮ್ಮ ಬಾಯಿಗೆ ಈಗ ಕುಲಾಂತರಿ ತರಕಾರಿಗಳು ಬೀಳುತ್ತಿರುವ ಸಂದರ್ಭ. ಇತ್ತ ನಮ್ಮ ದೇಶದ ಇಸ್ರೋ ಸಂಸ್ಥೆ ಚಂದ್ರ ಶೋಧನೆಗಾಗಿ ತಯಾರಿ ಮಾಡುವಷ್ಟು ತಾಂತ್ರಿಕ ಮುನ್ನಡೆ ಸಾಧಿಸಿದೆ; ಅಂತರಿಕ್ಷವನ್ನೇ ಆಳುವ ಉತ್ಸಾಹದ ಭರದಲ್ಲಿದೆ. ಹೃದಯದ ನಾಟಿ ಎಲ್ಲ ಮಿತಿಗಳನ್ನೂ ದಾಟಿ ಇದೀಗ ಬದಲಿ ಹೃದಯವಷ್ಟೇ ಅಲ್ಲ, ಹೃದಯಕ್ಕೆ ಹೊಸ ವಸ್ತುಗಳಿಂದ ರಚಿತವಾದ ಕವಾಟಗಳನ್ನೇ ಕೂಡಿಸುತ್ತಿದ್ದಾರೆ. ಇನ್ನು ಅಮೆರಿಕ ಮಂಗಳನ ಮಣ್ಣನ್ನೆಲ್ಲ ಕೆರೆದು ತಂದು ಸೌರವ್ಯೂಹದ ಆಚೆಗಿನ ಭೂಸದೃಶ ಗ್ರಹಗಳ ಕಡೆ ನೌಕೆಗಳನ್ನು ಕಳಿಸುತ್ತಿದೆ. ಮನುಕುಲದ ಬೌದ್ಧಿಕ ಪ್ರಗತಿ ಕಳೆದ ಶತಮಾನದಲ್ಲೇ ನಮ್ಮನ್ನು ಆಕಾಶದೆತ್ತರಕ್ಕೆ ಒಯ್ದಿದೆ. ಪರಿಷ್ಕೃತ ಸಂಪುಟದಲ್ಲಿ ಇಷ್ಟೆಲ್ಲ ಬೆಳವಣಿಗೆಯನ್ನು ಹೇಗೆ ಹಿಡಿದಿಟ್ಟಿದ್ದಾರೆ ಎಂಬ ಕುತೂಹಲ ನನ್ನನ್ನು ಕಾಡುತ್ತಿತ್ತು.

ಸರ್ಕಾರಿ ಪಠ್ಯ ಪುಸ್ತಕಗಳ ನಿರುತ್ಸಾಹಿ ಪಾಠಗಳ ಬಗ್ಗೆ ಬೇಸತ್ತು, ಕೆಲವೊಮ್ಮೆ ಕಿಡಿಕಾರಿ, ಅವನ್ನೆಲ್ಲ ಸಾರಾಸಗಟಾಗಿ ಬದಿಗಿಟ್ಟು, ‘ಮಕ್ಕಳಿಗೆ ಬರೆಯುವುದಾದರೆ ಹೀಗೆ ಬರೆಯಿರಿ’ ಎಂದು ಉಪದೇಶಿಸದೆ ಬರೆದು ತೋರಿಸಿದ ಜ್ಞಾನ ಪಿಪಾಸು ಶಿವರಾಮ ಕಾರಂತರು; ತಿಳಿವಿನ ಹಲವು ಮಗ್ಗುಲನ್ನು ಕನ್ನಡದ ಜನತೆಯ ಮುಂದಿಟ್ಟ ಧೀಮಂತ. ಇದು ೬೭ ವರ್ಷಗಳ ಹಿಂದಿನ ಮಾತು. ಡಾ|| ಮಾಲಿನಿ ಮಲ್ಯ ಅವರು ಕಾರಂತರ ಎಲ್ಲ ಒಳತುಡಿತಗಳನ್ನು ಹತ್ತಿರದಿಂದ ಬಲ್ಲವರು. ಹೀಗಾಗಿ ‘ಬಾಲಪ್ರಪಂಚ’ವನ್ನು ಪರಿಷ್ಕರಿಸುವಾಗ, ಅವರೇ ನಾಲ್ಕು ವಿಧಿ, ವಿಧಾನಗಳನ್ನು ಕಂಡುಕೊಂಡು, ತಾವೇ ಲಕ್ಷ್ಮಣರೇಖೆ ಎಳೆದುಕೊಂಡು, ಬೇರೆಯವರಿಂದ ಮಾಡಿಸಿದರೆ ಕೃತಿಕಾರರ ಗೌರವಕ್ಕೆ, ಕೃತಿಯ ಐತಿಹಾಸಿಕ ಮಹತ್ವಕ್ಕೆ ಭಂಗ ಬರಬಹುದೆಂದು ಅನುಮಾನಪಟ್ಟು ಇದರ ಹೊಣೆ ಹೊತ್ತುದಾಗಿ ಹೇಳಿದ್ದಾರೆ. ಅವರು ಮತ್ತೊಂದು ಮಾತನ್ನೂ ಸೇರಿಸಿದ್ದಾರೆ: ‘ಕಾರಂತರ ಕೃತಿಗಳಲ್ಲಿ ಅಂಕಿ ಅಂಶಗಳು ವ್ಯತ್ಯಯವಾಗಿದ್ದರೆ ಅದೇನೂ ಅಂಥ ಮಹತ್ವದ ಸಂಗತಿಯಲ್ಲ, ಇಂದಿಗೂ ಕಾರಂತರ ಈ ಕೃತಿ ಪ್ರಸ್ತುತವಾಗಿದೆಯಲ್ಲ ಎಂದು ನನಗೇ ಅಚ್ಚರಿಯಾಗಿದೆ’ ಎನ್ನುತ್ತಾರೆ.

ಈ ಪ್ರಸ್ತುತತೆಯ ಬಗ್ಗೆ ಕೆಲವೊಂದು ವಿಚಾರಗಳನ್ನು ಪ್ರಸ್ತಾಪಿಸುವ ಮುನ್ನ ‘ಬಾಲ ಪ್ರಪಂಚ’ವನ್ನು ಬರೆದಾಗ ಇದ್ದ ಸ್ಥಿತಿಯನ್ನು ನಾವು ಅಗತ್ಯವಾಗಿ ಮನಗಾಣಬೇಕಾಗುತ್ತದೆ. ಕಾರಂತರು ಈ ಕೃತಿ ರಚಿಸಿದ್ದು ಎರಡನೇ ಮಹಾಯುದ್ಧಕ್ಕೆ ಮುನ್ನ ಎಂದು ಹೇಳಿದರೆ ಕಾಲದ ಬಗ್ಗೆ ಒಂದು ಸ್ಪಷ್ಟ ಕಲ್ಪನೆ ಸಿಕ್ಕೀತು. ಆಕರ ಗ್ರಂಥಗಳ ತೀವ್ರ ಕೊರತೆ, ಚಿತ್ರಗಳನ್ನು ಒದಗಿಸುವ ಬಗ್ಗೆ ಇದ್ದ ಕಷ್ಟಕರ ಸ್ಥಿತಿಗಳು, ದೇಶದ ಮೂಲೆಮೂಲೆಯ ಮಹಾನಗರಗಳನ್ನು ಹೊಕ್ಕು ಅವರು ಸಂಗ್ರಹಿಸಿದ ೩೦೦೦ ಚಿತ್ರಗಳ ಜೊತೆಗೆ ತಾವೇ ತೆಗೆದ ೧೦೦೦ ಚಿತ್ರಗಳನ್ನೂ ಅವರು ನಿರ್ವಹಿಸಿದ ಪರಿ, ಕೊನೆಗೆ ಚೀನಾದಿಂದಲೂ ಮಾಹಿತಿ ತರಿಸಿಕೊಂಡ ಪ್ರಸಂಗ, ನಿಟ್ಟೂರು ಶ್ರೀನಿವಾಸರಾಯರು ಪ್ರಕಟಿಸುವ ಹೊಣೆ ಹೊತ್ತು, ಕೃತಿಗಳನ್ನು ಖರ್ಚು ಮಾಡಲು ತೆಗೆದುಕೊಂಡ ಶ್ರಮ, ಈ ಎಲ್ಲವನ್ನೂ ಸ್ಮರಿಸಿಕೊಳ್ಳದೆಯೇ ಕಾರಂತರ ಬಾಲಪ್ರಪಂಚದ ಹೂರಣದ ಬಗ್ಗೆ ಯೋಚಿಸುವುದು ಅಸಾಧು.

ಕಾರಂತರು ಬರೆದಾಗಿನ ಸ್ಥಿತಿಯೇ ಬೇರೆ, ಈಗಿನ ಸ್ಥಿತಿಯೇ ಬೇರೆ. ಈಗ ಕನ್ನಡದಲ್ಲಿ ಅತ್ಯಂತ ಪ್ರಬುದ್ಧವಾಗಿ ವಿಜ್ಞಾನವನ್ನು ಸಂವಹಿಸುವ ಅನೇಕ ಲೇಖಕರಿದ್ದಾರೆ, ದೊಡ್ಡ ದೊಡ್ಡ ಹೊಣೆಹೊತ್ತ ಸಂಪಾದಕರಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಶ್ವಕೋಶದ ವಿಜ್ಞಾನ ಲೇಖನಗಳನ್ನು ತಿದ್ದಿ, ತೀಡಿ, ಅವಕ್ಕೆ ಮರುಜನ್ಮ ಕೊಟ್ಟು, ಹೊಸ ವಿಜ್ಞಾನ ಪರಂಪರೆ ಸೃಷ್ಟಿಸಿದ ಅನುಭವೀ ಲೇಖಕ ಜಿ. ಟಿ. ನಾರಾಯಣರಾಯರಿದ್ದಾರೆ. ಇಂದಿಗೂ ಖಚಿತತೆಯ ದೃಷ್ಟಿಯಿಂದ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿರುವ ಕನ್ನಡ ವಿಶ್ವಕೋಶದ ವಿಜ್ಞಾನ ಲೇಖನಗಳನ್ನು ಮತ್ತೆ ಮತ್ತೆ ಪರಾಮರ್ಶಿಸಬಹುದು. ಆಧಾರವಾಗಿ ಪರಿಗಣಿಸಬಹುದು. ವಿಶ್ವಕೋಶದ ರಚನೆ ಹೇಗಿರಬೇಕೆಂದು ಮಾದರಿಯಾಗಿ ತೋರಿಸಿಕೊಟ್ಟ, ನಿರಂಜನರ ಸಂಪಾದಕತ್ವದ ‘ಜ್ಞಾನ ಗಂಗೋತ್ರಿ’ ಕಿರಿಯರ ವಿಶ್ವಕೋಶದಲ್ಲಿ ವಿಜ್ಞಾನ ಸಂಪಾದಕರಾಗಿದ್ದ ಅಡ್ಯನಡ್ಕ ಕೃಷ್ಣಭಟ್ಟರು ಈಗಲೂ ಸಕ್ರಿಯವಾಗಿ ವಿಜ್ಞಾನ ಪ್ರಸರಣಕ್ಕೆ ದುಡಿಯುತ್ತಿರುವ ವ್ಯಕ್ತಿ. ಕಾರಂತರ ಬಗ್ಗೆ ಪ್ರೀತಿ, ಗೌರವವುಳ್ಳ ಯಾವ ವಿಜ್ಞಾನ ಲೇಖಕರೂ ಪರಿಷ್ಕರಣೆಗೆ ನೆರವು ನೀಡಲು ಒಲ್ಲೆವೆನ್ನುತ್ತಿರಲಿಲ್ಲ. ಹಾಗಿದ್ದರೂ, ನಿಜವಾದ ಕೊರತೆ ಏನು ? ಬಾಲಪ್ರಪಂಚದ ಪರಿಷ್ಕೃತ ಕೃತಿ ೬೭ ವರ್ಷಗಳ ಹಿಂದಿನ ವಿಜ್ಞಾನದ ಪ್ರಗತಿಯನ್ನು

ನೆನಪಿಸುತ್ತದೆ. ಯಾವುದೇ ಊರಿನ ಯಾವುದೇ ಗ್ರಾಮೀಣ ಶಾಲೆಯ ಪ್ರೌಢಶಾಲೆಯ ಅಥವಾ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯನ್ನು 'ಮನುಷ್ಯ ಯಾವ ಆಕಾಶಕಾಯದಲ್ಲಿ ಇಳಿದಿದ್ದ?' ಎಂಬ ಸರಳ ಪ್ರಶ್ನೆಯನ್ನೇ ಕೇಳಿ, ತಡಬಡಿಸದೆ ಉತ್ತರಿಸುತ್ತಾನೆ 'ಚಂದ್ರ' ಎಂದು. ನಗರದ ವಿದ್ಯಾರ್ಥಿಗಳಾದರೆ ಇನ್ನೂ ಒಂದು ವಾಕ್ಯ ಸೇರಿಸಿ 'ಅಮೆರಿಕದ ನೀಲ್ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ಮೊದಲ ಹೆಜ್ಜೆ ಇಟ್ಟ ಮಾನವ' ಎಂದೂ ಹೇಳಬಲ್ಲರು. ಇನ್ನೂ ಮುಂದುವರಿದ ಮಕ್ಕಳು ಆಕಾಶಶೋಧ ಕುರಿತು ಹೊಸ ಸಾಧನೆಗಳೂ ಹೇಗಿರಬೇಕೆಂದು ಪ್ರಾಜೆಕ್ಟ್ ಕೊಡುವ ಹಂತದಲ್ಲಿದ್ದಾರೆ. ಬಾಲಪ್ರಪಂಚ ರಚಿಸುವಾಗ ಚಂದ್ರನ ಮೇಲೆ ಇಳಿಯುವ ಪರಿಕಲ್ಪನೆಯೇ ಮನುಷ್ಯನಿಗಿರಲಿಲ್ಲ. ಈ ಕೃತಿಯನ್ನು ಪರಿಷ್ಕರಿಸಿರುವುದು ೨೦೦೨ರಲ್ಲಿ. ಇದರಲ್ಲೂ ಚಂದ್ರನ ಮೇಲೆ ಮಾನವ ಇಳಿದ ಪ್ರಸ್ತಾಪವಿಲ್ಲ ಎಂದಮೇಲೆ ಇದರ ಉಪಯುಕ್ತತೆಯನ್ನು ಊಹಿಸಬಹುದು.

ಆ ಕ್ಷೇತ್ರದಲ್ಲಿ ಸ್ವಲ್ಪವಾದರೂ ಪರಿಶ್ರಮವಿಲ್ಲದಿದ್ದರೆ ಕೇವಲ 'ಧೈರ್ಯ'ವೊಂದೇ ಪರಿಷ್ಕರಣೆಗೆ ನೆರವು ನೀಡದು. ಯಾವುದೇ ವಿಶ್ವವಿದ್ಯಾಲಯಗಳು ಮಾಡದಿದ್ದ ಕೆಲಸವನ್ನು ಕಾರಂತರು ಮಾಡಿದರು, ನಿಜ. ಆದರೆ ಅದೊಂದೇ ಇಂದಿನ ಓದುಗರಿಗೆ ತೃಪ್ತಿ ಕೊಡುವ ಅಂಶವಾಗುವುದಿಲ್ಲ. ಮೂಲಭೂತ ಸಂಶೋಧನೆಗಳನ್ನೇ ಕಾಲಕಾಲಕ್ಕೆ ಒರೆಹಚ್ಚಿ ಅವು ಹೊಸ ಹೊಳಪು ಪಡೆದು ಮರುಮೌಲ್ಯ ಗಳಿಸುತ್ತವೆ, ಇಲ್ಲವೇ ತಿರಸ್ಕೃತವಾಗುತ್ತವೆ. ವಿಜ್ಞಾನದ ಅಂಗೀಕಾರವಿರುವುದೇ ಈ ನಿಕಷಕ್ಕೊಡ್ಡಿಕೊಳ್ಳುವ ಗುಣದ ಮೇಲೆ. ಶೈಲಿಗೆ ಭಂಗ ಬರದ ಹಾಗೆ ಮೂಲ ಲೇಖನವನ್ನು ಉಳಿಸಿಕೊಳ್ಳಬೇಕಾದ ಸಂದರ್ಭದಲ್ಲಿ ಮಾಹಿತಿಗೂ ಕೊರತೆಯಾಗದಂತೆ ಪರಿಷ್ಕರಿಸಬೇಕಾದ್ದು ತೀರ ಅಪೇಕ್ಷಣೀಯ. ಅದಕ್ಕಾಗಿಯೇ ವಿಜ್ಞಾನದ ಪರಿಶ್ರಮ ಕೊಂಚಮಟ್ಟಿಗಾದರೂ ಬೇಕಾಗುತ್ತದೆ.

ಸ್ವತಃ ಕಾರಂತರೇ ಹೇಳಿದ್ದಾರೆ : 'ನನ್ನ ಮುಂದಿರುವ ಒಂದೊಂದು ಕೆಲಸ ವಿಸ್ತಾರವಾದದ್ದು. ಅದನ್ನು ಪೂರೈಸುವ ಹೊಣೆ ಹೇಗೆ ? ನಾನೇ ಸರ್ವಜ್ಞನಾಗಿ ಬರೆಯಲೆ ? ಒಂದೊಂದು ವಿಷಯದಲ್ಲೂ ತಜ್ಞರ ಕಾಲನ್ನು ಹಿಡಿದು, ವಿವಿಧ ವಿಷಯಗಳ ಲೇಖನ ಸಂಗ್ರಹಿಸಿ ಕೊಡಿಸಲೇ ಎಂಬ ಪ್ರಶ್ನೆ ಮೂಡಿತು. ಎರಡನೆಯ ದಾರಿಯೇ ಉತ್ತಮವಾದುದೆಂದು ಹೇಳಬೇಕಾಗಿಲ್ಲ.'

ಹೀಗೆಂದು ಬರೆಯುತ್ತಲೇ ಕನ್ನಡ ನಾಡಿನ ವಿದ್ವಾಂಸರ ನಿರಾಸಕ್ತಿ ಕುರಿತು ಕಾರಂತರು ಆಗ ನೊಂದಿದ್ದರು. ಕಾರಂತರು ಬಾಲಪ್ರಪಂಚ ರಚಿಸಿದ ನಂತರ ಒಂದಲ್ಲ ಅನೇಕ ವಿಶ್ವಕೋಶಗಳು ರಚನೆಯಾಗಿವೆ ಎಂಬ ವಾಸ್ತವ ಅಂಶವೇ ಸಾಕು ಈಗ ಹಿಂದಿನ ಪರಿಸ್ಥಿತಿ ಇಲ್ಲ ಎನ್ನುವುದನ್ನು ಸಾರುವುದಕ್ಕೆ. ನಾವು ಈಗ ಇಂಟರ್‌ನೆಟ್ ಯುಗದಲ್ಲಿದ್ದೇವೆ ಎಂಬುದನ್ನು ಸುಲಭವಾಗಿ ಮರೆಯಬಾರದು.

ಬಾಲಪ್ರಪಂಚದ ಕೆಲವು ಪದಪುಂಜಗಳು ಓದುತ್ತಲೇ ಗಾಬರಿ ಹುಟ್ಟಿಸುತ್ತವೆ. ಭೂಗರ್ಭದ ನೀರು ಜ್ವಾಲಾಮುಖಿಗಳನ್ನು ಸಿಟ್ಟಿಗೇಳಿಸುತ್ತದೆ (ಪುಟ ೧೩೯), ನೀರಿನ ಉತ್ಕರ್ಷಣದಿಂದ ಹಡಗು ತೇಲುತ್ತದೆ (ಪುಟ ೩೨), ಭೂಮಿಯ ದಟ್ಟಣೆಯು ನೀರಿಗಿಂತ ೫.೫ ಹೆಚ್ಚು – ಇಂಥ ಶಬ್ದಗಳನ್ನೂ, ಶಬ್ದಾರ್ಥಗಳನ್ನೂ ಸ್ವೀಕರಿಸುವುದು ಹೇಗೆ ? ಆರ್ಗಾನಿಕ್ 'ಸಾಂಗ' ಎನ್ನಿಸಿದರೆ ಇನ್‌ಆರ್ಗಾನಿಕ್ 'ನಿರಂಗ' ಎಂಬ ಅರ್ಥ ಇಲ್ಲಿದೆ. ಈ ಶಬ್ದಗಳು ಯಾವ ನಿಘಂಟಿನಲ್ಲೂ ಈ ಅರ್ಥದಲ್ಲಿ ಬಳಕೆಯಾಗಿಲ್ಲ. ಒಂದು ವೇಳೆ ಪರೀಕ್ಷೆಯಲ್ಲಿ ವಿದ್ಯಾರ್ಥಿ ಹೀಗೆ ಬರೆದರೆ ಆತನಿಗೆ ಅಂಕಗಳು ಬರುತ್ತವೆಯೆ ? ಇವನ್ನೆಲ್ಲ ಗಂಭೀರವಾಗಿ ಯೋಚಿಸುವ ಸಮಯ ಇದು. ತಾವು ಬರೆದದ್ದೆಲ್ಲ ಸರಿ ಎಂದು ಕಾರಂತರು ಎಂದೂ ಸಾರಿಲ್ಲ. ಅವರು ಕೋಶ ರಚಿಸುವ ಕಾಲಕ್ಕೆ ವೈಜ್ಞಾನಿಕ ನಿಘಂಟುಗಳಿರಲಿಲ್ಲ. ತಾವೇ ಅನೇಕ ಪದಗಳನ್ನು ಟಂಕಿಸಬೇಕಾಯಿತು. ಆದರೆ ವಿಜ್ಞಾನ ಸಾಹಿತ್ಯ ಈಗ ಬಹು ದೂರ ಸಾಗಿ ಬಂದಿದೆ. ಮೈಸೂರು ವಿಶ್ವವಿದ್ಯಾಲಯದ ಇಂಗ್ಲಿಷ್-ಕನ್ನಡ ನಿಘಂಟನ್ನು ಆಶ್ರಯಿಸಿದರೂ ನೂರಾರು ವಿಜ್ಞಾನ ಪದಗಳಿಗೆ ಅರ್ಥ ಸಿಗುತ್ತದೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ವಿಜ್ಞಾನ ಪದಕೋಶವನ್ನೇ ಹೊರತಂದು ದಶಕವೇ ಕಳೆದಿದೆ. ನವಕರ್ನಾಟಕ ಪ್ರಕಾಶನ ಸುಮಾರು ೧೨,೦೦೦ ಪದಗಳಿಗೆ ಅರ್ಥ, ವಿವರಣೆ ನೀಡುವ 'ವಿಜ್ಞಾನ ಪದ ವಿವರಣ ಕೋಶ'ವನ್ನು ಹೊರತಂದು ಈಗ ಅದರ ಪರಿಷ್ಕರಣೆಯಲ್ಲಿ ತೊಡಗಿದೆ. ಜೈವಿಕ ತಂತ್ರಜ್ಞಾನದ ಇತ್ತೀಚಿನ ಬೆಳವಣಿಗೆಗಳನ್ನಾಧರಿಸಿ ನೂರಾರು ಪದಗಳು ಹುಟ್ಟಿಕೊಂಡಿವೆ. ಚಾಲ್ತಿಯಲ್ಲಿರುವ ಪದಗಳಿಗೆ ಅರ್ಥ ಕೊಡದೇ ಹೋದರೆ ಪದಕೋಶಗಳಿಗೆ ಅರ್ಥ ಬರುವುದಿಲ್ಲ. ಪರಿಷ್ಕರಣೆ ಎಂಬುದು ವಿಜ್ಞಾನದ ಮಟ್ಟಿಗೆ ಒಂದು ನಿರಂತರ, ಚಲನಶೀಲತೆ ತಂದು ಕೊಡುವ, ಸ್ವೀಕಾರಾರ್ಹ ಮೌಲ್ಯ ಗಳಿಸುವ ಪ್ರಕ್ರಿಯೆ.

ಬಾಲಪ್ರಪಂಚದಲ್ಲಿ ಕೆಲವು ಅಧ್ಯಾಯಗಳಲ್ಲಿ ಸಂಪಾದಕರು ಸೇರಿಸಿರುವ ಅಡಿ ಟಿಪ್ಪಣಿಗಳಿವೆ. ಅವು ಪಠ್ಯಕ್ಕೆ ಯಾವ ರೀತಿಯಲ್ಲೂ ಪೂರಕವಾಗಿಲ್ಲ. ಇನ್ನು, 'ಇದು ನಿಮಗೆ ತಿಳಿದಿರಲಿ' ಎಂಬ ಬಗೆಯ ಲೇಖನಗಳು. ಪರಿಷ್ಕರಣೆ ಬಯಸುವುದು ಇಂಥ ಅಡಿಟಿಪ್ಪಣಿಗಳಲ್ಲಲ್ಲ. ಪಠ್ಯವನ್ನು ಆಮೂಲಾಗ್ರವಾಗಿ ಓದಿ, ಹಳತನ್ನು ಹಿಂದೆ ಸರಿಸಿ, ಆ ಜಾಗದಲ್ಲಿ ಹೊಸ ಮಾಹಿತಿ ತುಂಬುವುದರಿಂದ ಅದು ಸಾಧ್ಯವಾಗುತ್ತದೆ. ಬಾಲಪ್ರಪಂಚ ನಮ್ಮನ್ನು ಮತ್ತೆ ೬೭ ವರ್ಷಗಳ ಹಿಂದಕ್ಕೆ ಕೊಂಡೊಯ್ಯುವುದು ಖೇದದ ಸಂಗತಿ. ಇದನ್ನಾಧರಿಸಿ ಯಾವ ಮಕ್ಕಳೂ ಪ್ರಬಂಧ ಬರೆಯುವಂತಿಲ್ಲ, ಅಧ್ಯಾಪಕರು ಹೆಚ್ಚಿನ ತಿಳಿವಿಗೆ ಇದನ್ನು ಓದಿ ಎಂದು ಹೇಳುವ ಸ್ಥಿತಿಯಲ್ಲಿಲ್ಲ ಎಂಬುದು ಕಟು ವಾಸ್ತವ. ಮೂಲಧಾತುಗಳನ್ನು ಕುರಿತು ಹೇಳುವಾಗ ಮೆಂಡಲೀವ್‌ನ ಹೆಸರೇ ಇಲ್ಲಿ ನಾಪತ್ತೆ. ಇದು ಹೇಗೆಂದರೆ ಜೀವ ವಿಕಾಸವನ್ನು ವಿವರಿಸುತ್ತ ಡಾರ್ವಿನ್ ಸಿದ್ಧಾಂತವನ್ನು ಬಿಟ್ಟ ಹಾಗೆ. ಕಾರಂತರ ವಿಜ್ಞಾನ ಸಾಹಿತ್ಯ ರಚನೆ ಕುರಿತಂತೆ ಬೆರಳೆಣಿಕೆಯ ಮಂದಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಹುಮಂದಿ ಸಾಹಿತಿಗಳು ಕಾರಂತರ ಕಾದಂಬರಿಗಳ ಜೊತೆ ಇವನ್ನು ತೂಗಿನೋಡಿ, ಪುಟ ತೆರೆಯದೆ 'ಅದ್ಭುತ' ಎಂದು ಹೊಗಳಿದ್ದುಂಟು. ಕಾದಂಬರಿಗಳ ಮೌಲ್ಯ ಮಾಪನಗಳ ಪರಿಯೇ ಬೇರೆ, ವಿಜ್ಞಾನ ಕೃತಿಗಳ ಮೌಲ್ಯಮಾಪನವೇ ಬೇರೆ.

ಕಾರಂತರ ಅಂತರಂಗದ ಬಿಚ್ಚುನುಡಿಗಳನ್ನು ನಾವು ಗಮನಿಸಬಹುದು. 'ನಾನು ವಿಜ್ಞಾನದ

## ನಿಲುವಂಗಿ

ಹುಲಿ ಹಾಲೆಂದು ಮಜ್ಜಿಗೆ ಕುಡಿದಿದ್ದೆ
ಗಡ್ಡ ಬೆಳೆದಿತ್ತು ಆದರ ಬಾಲದಂತೆ
ಹುಟ್ಟಿದ್ದು ಕೊಟ್ಟಿಗೆಯಲ್ಲಿ ಬೆಳೆದಿತ್ತು ಅಲ್ಲೆ
ಕಾಡುವ ರೋಗಗಳಿಲ್ಲ ಸಾಲು ಸಾಲು
ಹದಿನಾರು ದಾಟುವ ಮುನ್ನ
ಸಗಣಿ ಬಾಚಿದ್ದೆ ಎಮ್ಮೆ ಸವಾರಿ ಮಾಡಿದ್ದೆ
ಹಗಲಿರುಳು ತೊಟ್ಟಿದ್ದೆ ಮುಟ್ಟದವನೆಂಬ ನಿಲುವಂಗಿ
ನೋಡಿದರೆ ಕಾಣಲೊಲ್ಲದು
ಮುಟ್ಟಿದರೆ ಸಿಗಲೊಲ್ಲದು
ಮೆಲುದನಿಯ ಜಪಗಳಿಗೆ ಸಿಗದು
ಘಂಟಾ ನಾದಗಳಿಗೆ ಗೊಣಗುಟ್ಟದು
ನಗಾರಿ ಬಾರಿಸಿದರೆ ಮೊರೆಯುವುದು ಮುಟ್ಟದವನೇ
ದೀರ್ಘ ಘೋಷಗಳು ಇತಿಹಾಸದುದ್ದಕ್ಕೂ
ಪಠನ ಗಾನ ಮಾಡಿದರೂ ಸ್ವರ್ಗವಿಲ್ಲ
ಸೇವೆಯೊಂದೆ ಸ್ವರ್ಗ ತರುವುದು.
ತಲೆ ಚಿಟ್ಟು ಹಿಡಿದರೂ ರೋಸಿಹೋದರು ಬಿಡದು
ನಿಲುವಂಗಿ ಯಾರು ತೊಡಿಸಿದರೊ ದೇವರೆಸರಲಿ



ಅವರಿಗೆ ತಾರುಣ್ಯವಿರದಿರಲಿ
ವೃದ್ಧಾಪ್ಯ ಶಾಶ್ವತವಾಗಲಿ
ಮಂಡಿಯೂರಿ ಮನೆಮುಂದೆ ಬೇಡುವಂತೆ ಮಾಡಿದವರು
ದುಃಖದಿಂದ ತುಂಬಿರಲಿ
ಕಣ್ಣಾಲಿಗಳು ಮಂಜಾಗಿರಲಿ
ನನ್ನೊಳಗಿನ ಸಣ್ಣಗಿನ ವಿರೋಧ
ಮೇಲೇಳಲಿಲ್ಲ ರೋಧಿಸದೆ
ಹೃದಯ ಹೇಗೆ ಇದ್ದೀತು !

ಬರಿ ಸೇವೆಯಿಂದ ತುಟಿಯಂಚಿನ ದುಃಖ ಆರೀತೆ ?
ತೊರೆಯುತ್ತಿರುವೆ ನಗಾರಿ ತಮಟೆ
ಜಪತಪ ಘಂಟಾ ನಾದವ
ತೊರೆಯುತ್ತಿರುವೆ ಕಟ್ಟುಕಟ್ಟಳೆ
ದಹದಹಿಸುವೆ, ಉಸಿರುಗಟ್ಟಿಸುವ ನಿಲುವಂಗಿಯ
ಹರಿದೆಸೆಯುವೆ. ಸಾಕಾಯಿತು
ಬೇರಾರಿಗೂ ಬೇಡ ಈ ನಿಲುವಂಗಿ
ಮುಳುಗಿಸುವೆ ಮುಟ್ಟದ ನಿಲುವಂಗಿ.

**ಗಂಗಾರಾಂ ಚಂಡಾಳ**
ಎಲ್-೧೬, ಕುವೆಂಪುನಗರ ೩ನೇ ಹಂತ, ಮೈಸೂರು-೨೩



ಬೆಂಗಳೂರಿನಲ್ಲಿ ಸೆಪ್ಟೆಂಬರ್ ೧೨-೨೧ರವರೆಗೆ ಪುಸ್ತಕ ಮೇಳ ನಡೆಯಿತು. ಹೆಚ್ಚಿನ ಸಂಖ್ಯೆಯ ಪುಸ್ತಕ ಪ್ರಿಯರನ್ನು ಆಕರ್ಷಿಸಿದ ಈ ಮೇಳದಲ್ಲಿ ಕನ್ನಡ, ಇಂಗ್ಲಿಷ್, ತಮಿಳು, ತೆಲುಗು ಇತ್ಯಾದಿ ಭಾಷೆಗಳ ಪುಸ್ತಕಗಳು ಪ್ರದರ್ಶನಕ್ಕಿದ್ದವು. ಪ್ರತಿದಿನ ಕ್ವಿಜ್ ಕಾರ್ಯಕ್ರಮವಲ್ಲದೆ, ಹಲವು ಗಣ್ಯರನ್ನು ಸನ್ಮಾನಿಸಲಾಯಿತು.

ಚಿತ್ರದಲ್ಲಿ: ಕವಿ ನಿಸ್ಸಾರ್ ಅಹಮದ್‌ರನ್ನು ಸನ್ಮಾನಿಸುತ್ತಿರುವವರು ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್.

ಯಾವೊಂದು ವಿಷಯದಲ್ಲೂ ಪ್ರವೀಣನಲ್ಲ. ತಿಳಿದು, ಹೇಳುವ ಭಾಷೆಯೊಂದನ್ನು ಸಾಧಿಸುತ್ತಿರುವವನು ಮಾತ್ರ'. ಇದು 'ವಸ್ತುಚೈತನ್ಯ' ಕೃತಿಗೆ ಬರೆದ ಮುನ್ನುಡಿಯಲ್ಲಿ ಕಾಣಸಿರುವ ಮಾತುಗಳು. ಕಾರಂತರ ಛಲ ಅನುಕರಣೀಯ. ಕಾರಂತರು ಎಲ್ಲೂ ತಮ್ಮ ಕೃತಿಗಳನ್ನು ಪರಿಷ್ಕರಿಸಬಾರದೆಂಬ ಹಠ ಹಿಡಿದಿಲ್ಲ. ಆಗ ಲಭ್ಯವಿದ್ದ ಮಾಹಿತಿಗಳನ್ನು ಹೆಕ್ಕಿ ನಮ್ಮ ಮುಂದಿಟ್ಟರು. ಈಗ ಮಾಹಿತಿ ಸುಲಭ ಲಭ್ಯ, ಪರಿಷ್ಕರಣೆಗೆ ಕಾಲ ಬಹು ಪಕ್ವಾಗಿದೆ. ತಜ್ಞರು ಕೂಡಿಯೇ ಮಾಡಬೇಕಾದ ಕೆಲಸ ಇದು. ವಿಜ್ಞಾನದ ಯಾವುದೇ ಒಂದು ಭಾಗದ ಪರಿಪೂರ್ಣ ತಿಳಿವು ತಮಗಿದೆ ಎಂದು ಯಾವ ವಿಜ್ಞಾನಿಯೂ ಭಾವಿಸುವುದಿಲ್ಲ. ಹೆಮ್ಮರವಾಗಿ ವಿಜ್ಞಾನ ಬೆಳೆದಿದೆ ಎಂಬುದು ಕಂಡ ಹಾಗೇ ಇರುವ ಸತ್ಯ.

**'ವಿಜ್ಞಾನ ಪ್ರಪಂಚ' ಆಗಬೇಕಾದ್ದೇನು ?**

೧೯೫೯-೬೪ರ ನಡುವೆ ಕಾರಂತರು ರಚಿಸಿದ 'ವಿಜ್ಞಾನ ಪ್ರಪಂಚ' ಮಾಲಿಕೆಯ ನಾಲ್ಕು ಕೃತಿಗಳು 'ಈ ಜಗತ್ತು', 'ಜೀವ ಜೀವನ', 'ವಸ್ತು ಚೈತನ್ಯ', 'ವಿಜ್ಞಾನ ಸಾಧನ'. ಅಂದಿನ ವಿಜ್ಞಾನದ ಬೆಳವಣಿಗೆಯನ್ನಾಧರಿಸಿ ಮಾಹಿತಿಗಳನ್ನು ಹಿಡಿದಿಡಲು ಮಾಡಿರುವ ಪ್ರಯತ್ನ. ಇಂದಿನ ಓದುಗರಿಗೆ ಅಡ್ಡಬರುವುದು ಅಲ್ಲಿ ಅತಿ ಸರಳೀಕೃತವಾಗಿರುವ ಪಾರಿಭಾಷಿಕ ಪದಗಳು. ಪಾರಿಭಾಷಿಕ ಪದಗಳನ್ನು ಟಂಕಿಸುವಾಗ ಸರಳತೆಯೊಂದೇ ಗುರಿಯಾದರೆ ವಿಜ್ಞಾನದ ಖಚಿತತೆ ಲಾಗ ಹೊಡೆಯುತ್ತದೆ. ಈ ನಾಲ್ಕೂ ಗ್ರಂಥಗಳಲ್ಲಿ ಬರುವ ಪದಗಳ ತೊಡಕನ್ನು ಈಗಾಗಲೇ ಕಾರಂತರ 'ವಿಜ್ಞಾನ ಪ್ರಪಂಚ' ಎಂಬ ಲೇಖನದಲ್ಲಿ (ಕಾರಂತ ವೇದಿಕೆಯ ಮುಖಪತ್ರಿಕೆಯಲ್ಲಿ) ಪ್ರಸ್ತಾಪಿಸಲಾಗಿದೆ. ಇಲ್ಲಿ ಸ್ಥೂಲವಾಗಿ ಕೆಲವೊಂದು ಅಂಶಗಳ ಬಗ್ಗೆ ಓದುಗರ ಗಮನ ಸೆಳೆಯುವುದು ನನ್ನ ಉದ್ದೇಶ. ಈ ಕೃತಿಗಳು ರಚನೆಯಾಗಿ ೪೦ ವರ್ಷಗಳೇ ಸಂದಿವೆ. ವಿಜ್ಞಾನ ಕ್ಷೇತ್ರದಲ್ಲಿ ಈ ಅವಧಿಯಲ್ಲಿ ಅಪೂರ್ವ ಶೋಧಗಳಾಗಿವೆ. ಸೂರ್ಯ ಚಂದ್ರರ ವ್ಯಾಸ ಬದಲಾಗದಿರಬಹುದು, ಆದರೆ ಆ ಕಾಯಗಳ ಭೌತ ವಿದ್ಯಮಾನಗಳನ್ನು ಅರ್ಥಮಾಡಿಕೊಳ್ಳುವ ಪರಿ ಬದಲಾಗಿದೆ. ಈ ಮಾಲೆ ವಿಶೇಷವಾಗಿ ಪ್ರೌಢಶಾಲಾ ಮಕ್ಕಳನ್ನು ಗುರಿ ಇಟ್ಟುಕೊಂಡು ರಚಿತವಾದುದು. 'ಈ ಜಗತ್ತಿ'ನ ಬಗೆಗೆ ಇಂದಿನ ದೃಷ್ಟಿಕೋನವೂ ಬದಲಾಗಿದೆ. ಕಾರಂತರು ಇದನ್ನು ಬರೆದಾಗ ಭೂಖಂಡಗಳ ಬಗ್ಗೆ ಇದ್ದ ಪರಿಕಲ್ಪನೆಯೇ ಬೇರೆ. ಈಗ ಖಂಡಗಳ ಅಲೆತ ಎನ್ನುವುದನ್ನು ಇಡೀ ಭೂಮಿಯ ಶಿಲಾಗೋಳದ ಚಂಚಲತೆಯ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಭೂಫಲಕಗಳ ರಚನೆ ಎಂಬ ಪರಿಕಲ್ಪನೆಯೇ ಇಡೀ ಭೂವಿಜ್ಞಾನದ ಮೂಲಭೂತ ತಿಳಿವನ್ನೇ ಬದಲಾಯಿಸಿಬಿಟ್ಟಿದೆ. ಹಾಗೆ ನೋಡಿದರೆ ಈಗಿನ ಹೈಸ್ಕೂಲ್ ಪಠ್ಯದಲ್ಲೂ ಈ ಅಂಶಗಳು ಸೇರಿವೆ.

'ಜೀವ ಜೀವನ' ಸಂಪುಟದಲ್ಲಿ ಜೀವಕಣದಿಂದ ಹಿಡಿದು ವರ್ಗೀಕರಣದವರೆಗೆ ಕಾರಂತರು ವಿಶಾಲ ವ್ಯಾಪ್ತಿಯ ತಿಳಿವನ್ನು ಹಿಡಿದಿಡಲು ಯತ್ನಿಸಿದ್ದಾರೆ. ಈಗಿನ ತಿಳಿವು ಹೈಸ್ಕೂಲು ಮಟ್ಟದಲ್ಲೇ ಬಹುದೂರ ಸಾಗಿಬಿಟ್ಟಿದೆ. ವಂಶವಾಹಿಗಳ ಬಗ್ಗೆ ಅದೆಷ್ಟು ಸಂಶೋಧನೆ ಆಗಿವೆಯೆಂದರೆ ತಳಿವಿಜ್ಞಾನಕ್ಕೆ ಇದು ಹೊಸ ಹೆದ್ದಾರಿಗಳನ್ನೇ ಕೊಡುತ್ತಿದೆ.

'ವಸ್ತು ಚೈತನ್ಯ'ದ ಪರಿಕಲ್ಪನೆ ಅದೆಷ್ಟು ಬದಲಾಗಿದೆ ? ಶಕ್ತಿಯ ಆಕರದ ದೃಷ್ಟಿಯಿಂದಷ್ಟೇ ಅಲ್ಲ, ಅವುಗಳು ತರುವ ಸಾಮಾಜಿಕ ಕೇಡುಗಳ ಬಗ್ಗೆಯೂ ಅವಲೋಕಿಸದೆ ಹೋದರೆ ಸಮಕಾಲೀನ ವಿಜ್ಞಾನ ವಿದ್ಯಮಾನಗಳನ್ನು ನಾವು ಕಡೆಗಣಿಸಿದಂತೆಯೇ. ಸ್ವತಃ ಕಾರಂತರೇ ಕೈಗಾ ಪರಮಾಣು ಸ್ಥಾವರ ಬೇಡ ಎಂದು ಹೋರಾಡಿದ್ದು ಬುದ್ಧಿಜೀವಿಗಳನ್ನಷ್ಟೇ ಅಲ್ಲ, ಜನಸಾಮಾನ್ಯರನ್ನೂ ಬಡಿದೇಳಿಸಿದ ಪ್ರಸಂಗ.

'ವಿಜ್ಞಾನ ಸಾಧನ'ದಲ್ಲಿ ಕಾಣಬೇಕಾದ ನೂರಾರು ಸಾಧನಗಳು, ಉಪಕರಣಗಳು ಇವೆ. ಅಮೆರಿಕ 'ಹಬಲ್' ಟೆಲಿಸ್ಕೋಪನ್ನು ೧೯೯೦ರಲ್ಲಿ ಆಕಾಶದಲ್ಲಿ ತೇಲಿಬಿಟ್ಟ ನಂತರ ಇಡೀ ವಿಶ್ವದ ರಚನೆಯ ಬಗ್ಗೆ ನಮ್ಮ ತಿಳಿವಿನಲ್ಲಿ ಅದೆಂಥ ಕ್ರಾಂತಿಯಾಗಿದೆ ! ವಿಶ್ವದ ಉಗಮ, ವಿಕಾಸದ ಬಗ್ಗೆ ಅದು ಒದಗಿಸಿರುವ ಚಿತ್ರಗಳೇ ಸಾವಿರಾರು ಪುಟಗಳ ಗ್ರಂಥಗಳಿಗಾಗುವಷ್ಟಿದೆ. ಮನುಕುಲದ ಆಕಾಶದ ಮಹಾ ಅಧ್ಯಾಯವನ್ನು ಹಬಲ್ ಟೆಲಿಸ್ಕೋಪ್ ತೆರೆದಿಟ್ಟಿದೆ. ಇಂಥ ಉಪಯುಕ್ತ ಅಂಶಗಳು ಸೇರ್ಪಡೆಯಾಗದಿದ್ದರೆ ಪಠ್ಯಪುಸ್ತಕಗಳಿಗಿಂತಲೂ ಕನಿಷ್ಠ ಮಾಹಿತಿಯನ್ನು ಒಳಗೊಂಡ ಖ್ಯಾತಿ (?) ಅವುಗಳದ್ದಾಗುತ್ತದೆ.

ಕಾರಂತರ ವಿಜ್ಞಾನ ಕೃತಿಗಳ ಮರುಮುದ್ರಣದ ಬಗ್ಗೆ ಈಗ ಪ್ರಸ್ತಾಪಿಸಲು ಒಂದು ಕಾರಣವಿದೆ. ಯಾವುದೇ ಬದಲಾವಣೆ ಇಲ್ಲದೆ ೧೯೫೯-೬೪ರಲ್ಲಿ ರಚಿಸಿದ ವಿಜ್ಞಾನ ಪ್ರಪಂಚ ಮಾಲಿಕೆ ೧೯೮೦-೯೫ರ ನಡುವೆ ಮರು ಮುದ್ರಣವನ್ನು ಕಂಡಿದೆ. ಕೆಲವೊಂದು ಸಂಪುಟಗಳು ನಾಲ್ಕು ಬಾರಿ ಮರುಮುದ್ರಣವಾಗಿವೆ. ಚೋದ್ಯವೆಂದರೆ ಯಾವ ವಿಜ್ಞಾನ ಲೇಖಕರೂ ಇದರ ಬಗ್ಗೆ ಚಕಾರವೆತ್ತಿಲ್ಲ. ಎಷ್ಟೋ ಮಂದಿ ಇವುಗಳನ್ನು ಪುಟ ತೆರೆದೂ ನೋಡಿಲ್ಲ. ಇಲ್ಲಿ ಎರಡು ಪ್ರಶ್ನೆಗಳನ್ನು ಎತ್ತಬೇಕಾಗುತ್ತದೆ. ಮೂಲ ಸ್ಥಿತಿಯ ಈ ಕೃತಿಗಳು ಯಾವ ರೀತಿಯಲ್ಲಿ ನಮ್ಮ ಇಂದಿನ ತಿಳಿವನ್ನು ವಿಸ್ತರಿಸುತ್ತವೆ ? ಇದನ್ನು ಆಧರಿಸಿ ಒಬ್ಬ ಹೈಸ್ಕೂಲ್ ವಿದ್ಯಾರ್ಥಿ ಒಂದು ಉತ್ತಮ ಪ್ರಬಂಧವನ್ನು ರಚಿಸಲು ಸಾಧ್ಯವೆ ? ಈ ಮಾಲಿಕೆಯ ಕೃತಿಗಳೆಲ್ಲವನ್ನೂ ಪರಿಷ್ಕರಿಸದೆ ಮತ್ತೆ ಮರುಮುದ್ರಿಸಿದರೆ ಯಾರಿಗೆ ಲಾಭ, ಪ್ರಕಾಶಕರಿಗೋ, ಓದುಗರಿಗೋ ?

ಈಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕಾರಂತರ ಎಲ್ಲ ಕೃತಿಗಳನ್ನೂ ಮರುಮುದ್ರಿಸುವ ಯೋಜನೆಯನ್ನು ಹಾಕಿಕೊಂಡು ಈಗಾಗಲೇ ಸಣ್ಣ ಕಥೆ, ಕಾದಂಬರಿ, ಬಿಡಿ ಬರಹಗಳ ೧೩ ಸಂಪುಟಗಳನ್ನು ಹೊರತಂದು ಕನ್ನಡಿಗರೆಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ. ಕಾರಂತರ ಒಟ್ಟೂ ಬರಹದಲ್ಲಿ ಸುಮಾರು ಕಾಲು ಭಾಗ ವಿಜ್ಞಾನ ಸಾಹಿತ್ಯ ಕುರಿತದ್ದಾಗಿದೆ ಎಂಬುದನ್ನು ನಾವು ಮರೆಯುವಂತಿಲ್ಲ. ಕಾರಂತರ 'ಸಂಕೀರ್ಣ' ಬರಹಗಳನ್ನು ಪ್ರಕಟಿಸುವ ಇರಾದೆ ಕನ್ನಡ ಸಂಸ್ಕೃತಿ ಇಲಾಖೆಯದು. 'ಮಾಲಿನಿ ಮಲ್ಯ ಅವರು ಯಾವ ಸ್ಕ್ರಿಪ್ಟ್‌ಗಳನ್ನು ಕೊಡುತ್ತಾರೋ ಅವನ್ನು ಪ್ರಕಟಿಸುತ್ತೇವೆ' ಎಂದು ಸಂಸ್ಕೃತಿ ಇಲಾಖೆ ಹೇಳುತ್ತದೆ. ಇಲ್ಲಿ ಪ್ರಾಸಂಗಿಕವಾಗಿ ಒಂದು ವಿಚಾರವನ್ನು ಮನಗಾಣಿಸಲು ಬಯಸುತ್ತೇನೆ. ೧೯೭೨ರಲ್ಲೇ ನಿರಂಜನರ ಸಂಪಾದಕತ್ವದಲ್ಲಿ ಸಹಕಾರಿ ಪ್ರಕಾಶನದ ಮೂಲಕ ಏಳು ಸಂಪುಟಗಳಲ್ಲಿ 'ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ' ಹೊರಬಂದಿದೆ. ಇಲ್ಲೂ ೭೦ರ ದಶಕದಲ್ಲಿ ಲಭ್ಯವಿದ್ದ ಮಾಹಿತಿಗಳನ್ನು ಕ್ರೋಢೀಕರಿಸಿ ತಮ್ಮ ಮಿತಿಯಲ್ಲೇ ಅತ್ಯುತ್ತಮ ವೈಜ್ಞಾನಿಕ ಲೇಖನಗಳನ್ನು ಅಡ್ಯನಡ್ಕ ಕೃಷ್ಣಭಟ್ಟರು ನೀಡಿದ್ದಾರೆ. ಈಗ ಕೃಷ್ಣಭಟ್ಟರು 'ಯಾವ ಸಂಸ್ಥೆಯಾದರೂ ಮುಂದೆ ಬಂದು ಕಿರಿಯರ ವಿಶ್ವಕೋಶವನ್ನು ಪರಿಷ್ಕರಿಸಬಾರದೆ ? ಹಾಗೆ ಮಾಡುವುದಾದರೆ ನಾನು ಎಲ್ಲ ಸಂಪಾದಕೀಯ ನೆರವನ್ನೂ ನೀಡಬಲ್ಲೆ' ಎನ್ನುತ್ತಾರೆ. ಕಿರಿಯರ ವಿಶ್ವಕೋಶ ಮಾಲಿಕೆಯ 'ಕಲೆ-ಸಾಹಿತ್ಯ' ಸಂಪುಟದಲ್ಲಿ ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ಬಗ್ಗೆ ನಿರೀಕ್ಷಿಸಿದಂತೆಯೇ ನಮೂದು ಇರಲು ಸಾಧ್ಯವಿಲ್ಲ (ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದದ್ದು ೧೯೭೭ರಲ್ಲಿ). ಅದೇ ಸಂಪುಟವನ್ನು ಈಗ ಪರಿಷ್ಕರಿಸಿದರೆ ಇಂಥ ಅಂಶಗಳನ್ನು ಕೈಬಿಡಲು ಸಾಧ್ಯವೆ ? ತೀರ ಇತ್ತೀಚೆಗಷ್ಟೇ ನವಕರ್ನಾಟಕ ಸಂಸ್ಥೆ ಹೊರತಂದ 'ಜ್ಞಾನ ವಿಜ್ಞಾನ ಕೋಶ' (೧೯೮೮)ವನ್ನು ಪರಿಷ್ಕರಿಸುವ ಉತ್ಸಾಹವನ್ನು ಆ ಸಂಸ್ಥೆ ತೋರುತ್ತಿದೆ. ಬದಲಾಗುತ್ತಿರುವ ಪರಿಕಲ್ಪನೆಗಳನ್ನು ದಾಖಲಿಸಲು ಈ ಬಗೆಯ ನಿಲುವು ತಳೆಯದಿದ್ದರೆ ನಾವು ಬೌದ್ಧಿಕವಾಗಿ ಹಿನ್ನಡೆ ಸಾಧಿಸಿದಂತಾಗುತ್ತದೆ.

ಶಿವರಾಮ ಕಾರಂತರು ಅಳಿದ ಮೇಲೂ ಸಾರಸ್ವತ ಲೋಕದಲ್ಲಿ ಉಳಿದಿರುವ ಅಸಾಮಾನ್ಯ ಬರಹಗಾರ, ಚಿಂತಕ. ವಿಜ್ಞಾನ ಸಾಹಿತ್ಯದಲ್ಲಿ ಅವರು ಮಾಡಿರುವ ಕೃಷಿ ಉಳಿಯಬೇಕಾದರೆ ಅವರ ಕೃತಿಗಳ ಪರಿಷ್ಕರಣೆಯಾಗಬೇಕು. ಅದರ ಐತಿಹಾಸಿಕ ಮಹತ್ವವನ್ನಷ್ಟೇ ಉಳಿಸಿಕೊಳ್ಳಲು ಹೋರಾಡಿದರೆ ಅವರ ಎಲ್ಲ ವಿಜ್ಞಾನ ಕೃತಿಗಳೂ ಮ್ಯೂಸಿಯಂ ಪೀಸುಗಳಾಗುತ್ತವೆ ಎಂಬುದು ಕಹಿ ಮಾತಾಗಬಹುದು. ಆದರೆ ಅದು ನುಂಗಲಾರದ ಸತ್ಯ. ಪ್ರತಿಷ್ಠಾನ, ಈಗ ಕಾರಂತರ ಎಲ್ಲ ಕೃತಿಗಳನ್ನೂ ಮರುಮುದ್ರಿಸಲು ಹೊರಟಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕಾರಂತರ ವಿಜ್ಞಾನ ಕರ್ತೃತ್ವದ ಬಗ್ಗೆ ಪ್ರೀತಿ ಇಟ್ಟುಕೊಂಡಿರುವ ಎಲ್ಲ ಓದುಗರೂ ಒಟ್ಟಾಗಿಯೆ ಯೋಚಿಸಬೇಕಾದ ವಿಚಾರ ಇದು.

ಟಿ. ಆರ್. ಅನಂತರಾಮು
೫೩೪, 'ಧಾತ್ರಿ', ೭೦ನೇ ಕ್ರಾಸ್, ೧೪ನೇ ಮುಖ್ಯರಸ್ತೆ ಕುಮಾರಸ್ವಾಮಿ ಬಡಾವಣೆ, ೧ನೇ ಹಂತ, ಬೆಂಗಳೂರು-೭೮

# ವಾಲ್ಮೀಕಿಯ ದಾರಿ ಇಂದಿಗೂ ಮಾದರಿ

ಅದೊಂದು ಮದುವೆ ಸಮಾರಂಭ. ಮುಹೂರ್ತಕ್ಕೆ ಮುನ್ನ ವಧುವಿನ ಕೈಲಿ ೫ ಜನ ಮುತ್ತೈದೆಯರಿಗೆ ಮೊರದ ಬಾಗಿನ ಕೊಡಿಸುವ ಪದ್ಧತಿ. ವಧುವಿನ ತಾಯಿ ಕೂಗಿದಾಗ ನಾಲ್ವರು ಸಿಕ್ಕಿದರು. ಮತ್ತೊಬ್ಬರಿಗಾಗಿ ಆಕೆ ಅತ್ತಿತ್ತ ಹುಡುಕುತ್ತ, ನೋಡುತ್ತಿದ್ದಾಗ, ಆ ಮುತ್ತೈದೆಯರಲ್ಲೇ ಒಬ್ಬಾಕೆ, ''ಇಲ್ಲೇ ನಿಂತಿದಾರಲ್ರೀ, ನಿಮ್ಮಕ್ಕ, ಅವರಿಗೆ ಕೊಡಿಸಿ'' ಎಂದರು. ವಧುವಿನ ತಾಯಿ ಆ ಮಾತು ಕಿವಿಯ ಮೇಲೆ ಬೀಳಲಿಲ್ಲವೆಂಬಂತೆ, ಹೊರ ನಡೆದು ಇನ್ಯಾರನ್ನೋ ಹಿಡಿದು ತಂದರು. ಶಾಸ್ತ್ರ ಮುಗಿಯಿತು. ಆದರೆ ಆ ಬಗ್ಗೆ ಟೀಕೆ ಟಿಪ್ಪಣಿ ಮುಗಿಯಲಿಲ್ಲ; ಒಬ್ಬಾಕೆ ಅಂದರು, ''ಅಲ್ಲಾ ಆಕೆ ಅಕ್ಕನೇ ಅಲ್ಲಿದ್ರು ಆಕೆಗೇ ಕೊಡಿಸಬಹುದಾಗಿತ್ತು. ಹುಡುಕ್ಕೊಂಡು ಹೊರಗೆ ಹೋಗಿದ್ರು.'' ಇನ್ನೊಬ್ಬರ ಉತ್ತರ ''ಅಕ್ಕ ತಂಗಿಯರ ಮಧ್ಯೆ ಹೇಗಿದ್ಯೋ'', ಮತ್ತೊಬ್ಬರು ''ಅಯ್ಯೋ, ಅಂಥ ದ್ದೇನಿಲ್ಲ, ಆಕೆ (ಅವರ ಅಕ್ಕನ್ನ) ಗಂಡ ಬಿಟ್ಟೋರು ಕಣ್ರೀ'' ಎಂದು ಪಿಸು ನುಡಿದರು. ''ಹ್ಞಾಂ ಹೌದೆ, ಗಂಡನೇ ಇವರನ್ನ ಬಿಟ್ರೋ, ಇವರೇ ಗಂಡನ್ನ ಬಿಟ್ರೋ'', ''ಯಾವಾಗ್ರೀ? ಯಾಕಂತೇರಿ'', ''ಆಕೆ ಎಷ್ಟು ಲಕ್ಷಣ ವಾಗಿದಾರೆ, ನೋಡೋಕೆ'', ''ಆದರೆ ಮೊರದ ಬಾಗಿನ ಕೊಡಿಸುವಾಗ ನೋಡೋ ಲಕ್ಷಣವೇ ಬೇರೆ. ಬನ್ನಿ ಮುಹೂರ್ತಕ್ಕೆ ಹೊತ್ತಾಯ್ತು.'' ಹೀಗೆ ಟೀಕೆ, ಟಿಪ್ಪಣಿಗಳು ಹಾರಾಡಿದವು. ಅಲ್ಲೇ ಇದ್ದ ಆಕೆಯ ಇರವನ್ನೇ ಮರೆತಂತೆ.

ಇದು ಇಂದಿಗೂ, ಇಪ್ಪತ್ತೊಂದನೇ ಶತಮಾನದಲ್ಲೂ ವಿವಾಹ ವಿಚ್ಛೇದನ ಪಡೆದ ಮಹಿಳೆಯ ಬಗ್ಗೆ ಇರುವ ಸಾಮಾಜಿಕ ಸ್ಥಾನಮಾನಗಳಿಗೆ ಒಂದು ನಿದರ್ಶನ ಅಷ್ಟೆ. ವಿಧವೆಯ ಬಗ್ಗೆ ಅಯ್ಯೋ ಪಾಪ ಎಂಬ ಮರುಕದ ಮಾತಾದರೂ ಉಂಟು. ವಿಚ್ಛೇದಿತೆಗೆ ಅದೂ ಇಲ್ಲ. ''ಹೌದೇ! ಯಾಕೆ? ಈಗೇನ್ಮಾಡ್ತಿದಾರೆ? ಎಲ್ಲಿದಾರೆ? ಮಕ್ಕಳು ಎಷ್ಟು ಜನ?'' ಹೀಗೆ ಕುತೂಹಲ ಕೆದರುತ್ತದೆ ಅಷ್ಟೆ. ಅತ್ಯಂತ ಮೇಲ್ವರ್ಗದವರಲ್ಲೂ, ಅತೀ ಕೆಳಗಿನ ಸ್ತರದವರಲ್ಲೂ ವಿಚ್ಛೇದಿತ ಮಹಿಳೆ ಇಂತಹ ಮಾನಸಿಕ ಹಿಂಸೆಗಳಿಗೆ ಒಳಗಾಗುವ ಸಂದರ್ಭಗಳು ಕಡಿಮೆ. ಆ ಮಹಿಳೆಯರು ಇಂಥವಕ್ಕೆ ಗಮನ ಕೊಡುವುದೂ ಇಲ್ಲ. ಆದರೆ, ಕೆಳ ಮಧ್ಯಮ ಹಾಗೂ ಮೇಲ್ಮಧ್ಯಮ ವರ್ಗಗಳೆ ರಡರಲ್ಲೂ ವಿಚ್ಛೇದಿತ ಮಹಿಳೆಯ ತೊಳಲಾಟವೇ ಬೇರೆ. ಎಷ್ಟೇ ದುಷ್ಟ ಗಂಡನಾದರೂ, ಅವನ ಎಲ್ಲಾ ದೌರ್ಜನ್ಯ ವನ್ನೂ ಸಹಿಸಿಕೊಂಡು, ಸಂಸಾರದಲ್ಲೇ ದಿನ ದೂಡುವುದು ಇದಕ್ಕಾಗಿಯೇ. ಅದನ್ನು ಸಹಿಸಲಾಗದಿದ್ದರೆ ಆತ್ಮಹತ್ಯೆಯೇ ಗತಿ. ಸಂಸಾರ ಬಂಧನ ಬಿಡಿಸಿಕೊಂಡು ಬಂದ ಮಾತ್ರಕ್ಕೆ ಆಕೆಯ ಕಷ್ಟಗಳು ಮುಗಿಯುವುದಿಲ್ಲ. ನಾನಾ ಸಮಸ್ಯೆಗಳ ಸರಮಾಲೆ ಶುರುವಾಗುವುದೇ ಆಗ. ಅನೇಕ ವೇಳೆ ಆಕೆಯ ಸ್ಥಿತಿ ಬಾಣಲೆಯಿಂದ ಬೆಂಕಿಗೆ ಎಂಬಂತಾಗುತ್ತದೆ. ಗಂಡನೇ ಬಿಟ್ಟರೂ, ಅವನೇ ಮನೆಯಿಂದಾಚೆ ದಬ್ಬಿದರೂ, ಕೌಟುಂಬಿಕ ಕೋರ್ಟಿನ ಮೂಲಕವೇ ವಿಚ್ಛೇದನ ಪಡೆದರೂ, ನಮ್ಮ ಸಮಾಜ ಅವಹೇಳನದ ತರ್ಜನಿ ಬೆರಳು ತೋರಿಸು ವುದು ಮಾತ್ರ ಮುಂದುವರಿಸುತ್ತಲೇ. ಏಕೆಂದರೆ ಅವಳು ಹೆಣ್ಣು!

ವಿಚ್ಛೇದನದಿಂದ ಉಂಟಾದ ಮಾನಸಿಕ, ಆರ್ಥಿಕ, ದೈಹಿಕ ಕಷ್ಟಸ್ಥಿತಿಯನ್ನು ಸಮತೋಲನಗೊಳಿಸಿಕೊಳ್ಳಲು ಹೆಣಗುತ್ತಿರುವ ಹೆಣ್ಣಿಗೆ, ಮೇಲೆ ಹೇಳಿದಂಥ ಎಷ್ಟೋ ಸಂದರ್ಭಗಳು, ಇದಕ್ಕಿಂತಲೂ ಅವಹೇಳನಕರವಾದ ಸಂದರ್ಭಗಳು, ಬೆಳಗಿನಿಂದ ಸಂಜೆವರೆಗೆ ಒದಗುತ್ತಲೇ ಇರುತ್ತವೆ; ಕಿರಿಯವಾದರೂ ಕಿರಿಕಿರಿ ಮಾಡಿ ಕೊರೆಯು ವಂತಹವು. ವಿಚ್ಛೇದಿತೆಯ ಬಗ್ಗೆ ಅವಳ ಹಿಂದಣ, ಇಂದಿನ ಬಾಳನ್ನು ಕೆದಕುವ ಕೆಟ್ಟ ಕುತೂಹಲವೇ ಹೊರತು ಮತ್ಯಾವ ಅನುಕಂಪ, ಸಹಾನುಭೂತಿಗಳೂ ನಮ್ಮ ಸಮಾಜದಲ್ಲಿ ಕಂಡುಬರುವುದು ಕಡಿಮೆ.

ವಿಚ್ಛೇದನದ ಸಮಸ್ಯೆ ಇಂದಿಗೆ ಹೊಸದಾಗಿ ಹುಟ್ಟಿದ್ದಲ್ಲ. ಮರ್ಯಾದಾ ಪುರುಷೋತ್ತಮನೆಂದು ಪರಿಗಣಿತನಾಗಿರುವ ಶ್ರೀರಾಮನು, ಗರ್ಭಿಣಿಯಾದ ಸೀತಾದೇವಿಯನ್ನು ತ್ಯಜಿಸಿ ಬಿಟ್ಟನು. ಶ್ರೀರಾಮನಿಗೆ ಸೀತೆಯ ಪಾವಿತ್ರ್ಯದ ಬಗ್ಗೆ ಅನು ಮಾನವೇನೂ ಇರಲಿಲ್ಲ. ಆದರೆ ಅಯೋಧ್ಯೆಯ ಸಿಂಹಾ ಸನದ ಮೇಲೆ ಕುಳಿತುಕೊಳ್ಳುವವನು ಲೋಕಾಪವಾದಕ್ಕೆ ಒಳಗಾಗಕೂಡದು, ನಿಷ್ಕಳಂಕ ಚರಿತ್ರನೆನಿಸಿಕೊಳ್ಳಬೇಕು ಎಂಬ ಆದರ್ಶಕ್ಕಾಗಿ ಕಳಂಕರಹಿತೆಯಾಗಿದ್ದರೂ, ಅಗ್ನಿ ಪೂತೆಯೆಂದು ಕಣ್ಣಾರೆ ಕಂಡಿದ್ದರೂ, ರಾಮ, ಸೀತೆಯನ್ನು ತ್ಯಜಿಸಿಬಿಟ್ಟನು. (ಅವನು ನಂತರ ಬೇರೆ ಮದುವೆಯಾಗ ದಿದ್ದುದು, ಸೀತೆಯನ್ನು ವಾಲ್ಮೀಕಿ ಆಶ್ರಮದ ಬಳಿ ಬಿಡುವಂತೆ ಹೇಳಿದ್ದು, ಎಲ್ಲಾ ಶ್ರೀರಾಮನಿಗೆ ಸೀತೆಯ ಬಗೆಗಿದ್ದ ಪ್ರೇಮವನ್ನು ಪ್ರಕಟಿಸಿದರೂ, ಅದರಿಂದ ಸೀತೆ ಗಾದ ಲಾಭವೇನು?) ಏಕಾಂಗಿಯಾಗಿ, ಎಂದೂ ಕಾಣದ ಕಾನನದಲ್ಲಿ ಸೀತೆ ಇದ್ದಾಳೆ. ಬಸಿರ ಭಾರ, ಜೊತೆಗೆ ಅನಿ ರೀಕ್ಷಿತವಾಗಿ ಬಂದೊದಗಿದ ಬರ ಸಿಡಿಲಂಥ ಪರಿತ್ಯಾಗ! ದೈಹಿಕವಾಗಿ ಮಾನಸಿಕವಾಗಿ ಜರ್ಜರಿತಳಾಗಿದ್ದಾಳೆ. ನೀನೇ ಎನ್ನುವರಿಲ್ಲದೆ, ಅವಳ ಅಳು ಅಕ್ಷರಶಃ ಅರಣ್ಯರೋದನ ವಾಗಿದೆ. ನಿಂತ ನೆಲವೇ ಕುಸಿದ ಮೇಲೆ ಆಧಾರ ಯಾವುದು? ಉಕ್ಕಿ ಬರುತ್ತಿರುವ ಪ್ರವಾಹದಲ್ಲಿ ದಿಕ್ಕು ಗಾಣದೆ, ಕೊಚ್ಚಿ ಹೋಗುತ್ತಿರುವ ಪರಿಸ್ಥಿತಿ ಅವಳದು.

ಅಂತಹದೇ ಪರಿಸ್ಥಿತಿಯಲ್ಲಿ ಈಗಲೂ ಅನೇಕ ಮಹಿಳೆ ಯರು ಇದ್ದಾರೆ. ಗಂಡನಿಂದಾಗಿ ಎಷ್ಟೋ ಕಷ್ಟ (ದೈಹಿಕ, ಆರ್ಥಿಕ, ಮಾನಸಿಕ)ಗಳನ್ನು ಬಾಯಿ ಮುಚ್ಚಿಕೊಂಡು ಅನುಭವಿಸಿದರೂ, ಗಾಣಕ್ಕೆ ಕಟ್ಟಿದ ಮೂಗೆತ್ತಿನಂತೆ, ಆ ಗಂಡ, ಅವನಿಂದಾದ ಮಕ್ಕಳಿಗಾಗಿ, ದುಡಿದರೂ, ಕ್ಷುಲ್ಲಕ ಕಾರಣಗಳಿಗಾಗಿ ಸಹ ಹೆಂಡತಿಯರನ್ನು ಬಿಡುವ ಗಂಡಂದಿರು ಇಂದೂ ಇದ್ದಾರೆ; ಹಣದ ಬೆಂಬಲವಿಲ್ಲ, ಉದ್ಯೋಗ ಮಾಡುವ ಅರ್ಹತೆ, ಅವಕಾಶ, ಧೈರ್ಯ, ವಯಸ್ಸು ಯಾವುದೂ ಇಲ್ಲ. ಕೊನೆಗೆ ನಿಲ್ಲಲು ನೆಲೆಯೂ ಇಲ್ಲ. ಸೀತೆಯಿದ್ದದು ವನ್ಯಮೃಗಗಳಿದ್ದ ಕಾಡು, ಇಂತಹ ಮಹಿಳೆಯರಿರುವುದು ಜನಭರಿತ ನಾಡು, ಅಷ್ಟೇ ವ್ಯತ್ಯಾಸ. ಆ ಜನರಲ್ಲಿ ಕೆಲವರಾದರೂ ಮೃಗಗಳು. ಏನಿಲ್ಲ ದಿದ್ದರೂ, ಮರದ ಕೆಳಗೋ, ಅಂಗಡಿಯ ಮುಂದೆಯೋ ಮಹಿಳೆ ಮಲಗಲಾಗುವುದಿಲ್ಲವಷ್ಟೆ. ಜೊತೆಗೆ ಕೈಯಲ್ಲಿ ಕಂಕುಳಲ್ಲಿ ಚಿಕ್ಕ ಮಕ್ಕಳಿದ್ದರೆ ಆ ಕಷ್ಟ ಹೇಳಲೂ ಸಾಧ್ಯವಿಲ್ಲ. ತಲೆ ಮೇಲೊಂದು ಸೂರು ತತ್ಕಾಲಕ್ಕಾದರೂ ಕೊಡುವವ ರಿರುವುದಿಲ್ಲ. ತಂದೆ, ತಾಯಿ, ಒಡಹುಟ್ಟಿದವರು ಯಾರೂ ಕೈಹಿಡಿದು ಬಾ ಎನ್ನುವುದಿಲ್ಲ. (ತ್ರೇತಾಯುಗದಲ್ಲೂ, ಸೀತೆಯ ಸ್ಥಿತಿ ಅವಳಪ್ಪ ಜನಕರಾಜನಿಗೆ ತಿಳಿಯಿತೋ, ಇಲ್ಲವೋ, ತಿಳಿದಾಗ ಏನು ಮಾಡಿದನೋ, ನಮಗೆ ತಿಳಿಯದು). ಮಹಿಳೆಯ ಬಳಿ ಹಣಕಾಸಿದ್ದರೂ ಅಥವಾ ಉದ್ಯೋಗಸ್ಥೆಯೇ ಆಗಿದ್ದರೂ ವಿಚ್ಛೇದಿತೆ ಎಂದು ತಿಳಿದಾಗ, ಮನೆ ಬಾಡಿಗೆಗೆ ಕೊಡಲೂ ಹಿಂಜರಿಯುತ್ತಾರೆ. ಇಂತಹ ಇಂದಿನ ಸಮಾಜಕ್ಕೆ ಅಂದಿನ ಆ ತ್ರೇತಾಯುಗ ದಲ್ಲೇ ಒಂದು ದಾರಿ ತೋರಿಸಿದ್ದಾರೆ ವಾಲ್ಮೀಕಿ ಋಷಿಗಳು.

ಸೀತೆ ಏಕಾಂಗಿಯಾಗಿ ಕಾಡಿನಲ್ಲಿ ಅಳುತ್ತಿದ್ದಳಷ್ಟೆ. ಆಗ ಅಲ್ಲಿಗೆ ಬಂದ ವಾಲ್ಮೀಕಿ ಮುನಿಗಳು ಅವಳನ್ನು ಕಂಡು, ನೀನು ಯಾರಮ್ಮ ಎಂದು ಕರುಣೆಯಿಂದ ವಿಚಾರಿಸುತ್ತಾರೆ. ''ಅಪರಾಧ ಮಣವಿಲ್ಲದೆನ್ನ ಪತಿ ತೊರೆದನು'' ಎಂದು ಸೀತೆ ಹೇಳಿದಾಗ, ''ಬಾ ತಾಯಿ, ನಾನು ವಾಲ್ಮೀಕಿ, ನಮ್ಮ ಆಶ್ರಮದಲ್ಲಿರು. ನಿಮ್ಮ ಮಾವ ದಶರಥ, ನಿಮ್ಮ ತಂದೆ ಜನಕ. ಎಲ್ಲರನ್ನೂ ನಾನು ಬಲ್ಲೆ. ನಿಮ್ಮ ತಂದೆಯ ಮನೆಯಲ್ಲಿರುವಂತೆ ಇಲ್ಲಿರು'' ಎಂದು ಮಮತೆಯಿಂದ ಹೇಳಿ, ವಾಲ್ಮೀಕಿ ಋಷಿಗಳು ಸೀತೆಯನ್ನು ಕರೆದೊಯ್ಯುತ್ತಾರೆ. ಆಕೆಗಾಗಿ ಪ್ರತ್ಯೇಕ ಪರ್ಣಕುಟಿ ಸಿದ್ಧವಾಗುತ್ತದೆ. ವಾಲ್ಮೀಕಿಗಳ ಆದೇಶದಂತೆ, ಆಶ್ರಮದಲ್ಲಿದ್ದ ಮುನಿ ಪತ್ನಿ ಯರೂ ಮುನಿ ಕನ್ನಿಕೆಯರೂ ಅವಳನ್ನು ಆದರಿಸುತ್ತಾರೆ. ಎಲ್ಲರೂ ಸೇರಿ ಸೀತೆ ಪತಿ ಪರಿತ್ಯಕ್ತೆಯಾದರೂ ಅವಳ ಪರಿಸ್ಥಿತಿ ಸಹನೀಯವಾಗುವಂತೆ ಮಾಡುತ್ತಾರೆ. ಮುಂದೆ ಸೀತಾದೇವಿಗೆ ದಿನ ತುಂಬಿ ಹೆರಿಗೆಯಾಯಿತು. ಅವಳಿ ಗಂಡು ಮಕ್ಕಳು. ಕೂಡಲೆ ವಾಲ್ಮೀಕಿ ಮುನಿಗಳು ದರ್ಭೆ ಮಂತ್ರಿಸಿ ಮುನಿ ಪತ್ನಿಯರಿಂದ ರಕ್ಷೆ ಇಡಿಸುತ್ತಾರೆ; ಆ ಮಕ್ಕಳಿಗೆ ಕುಶ, ಲವ ಎಂದು ನಾಮಕರಣ ಮಾಡುತ್ತಾರೆ. ವಯೋನುಗುಣವಾಗಿ ಮುಂದೆ ಆ ಮಕ್ಕಳನ್ನು ಶಾಸ್ತ್ರ, ಶಸ್ತ್ರವಿದ್ಯೆಗಳೆರಡರಲ್ಲೂ ಪಾರಂಗತರನ್ನಾಗಿ ಮಾಡುತ್ತಾರೆ. ಮುದ್ದಿನ ತಾತನ ಮಡಿಲಲ್ಲಿ ಬೆಳೆವಂತೆ ಕುಶ ಲವರು ವಾಲ್ಮೀಕಿಯ ಅಕ್ಕರೆಯ ಆರೈಕೆಯಲ್ಲಿ ಬೆಳೆದು ಹದಿಹರೆಯಕ್ಕೆ ಬರುತ್ತಾರೆ. ತಂದೆಯಿಲ್ಲದ ಕೊರತೆ ಕಾಣ ದಂತೆ, ನಾಡಿನ ರಾಜಕುಮಾರರು ಕಾಡಿನಲ್ಲಿ ಬೆಳೆದರೂ ಯಾವ ಕುಂದೂ ಇಲ್ಲದಂತೆ, ಅವರ ವ್ಯಕ್ತಿತ್ವ ವಿಕಾಸವಾಗಿ ಅರಳುತ್ತದೆ. ವಾಲ್ಮೀಕಿಯೇ ಕಲಿಸಿದ ರಾಮಾಯಣವನ್ನು ಹಾಡುವ ಮೂಲಕ ಅವರು ಪ್ರಪಂಚದ ಪ್ರಥಮ ಗಮಕಿಗಳೂ ಆಗುತ್ತಾರೆ.

ಇಲ್ಲಿ ಗಮನಿಸಬೇಕಾದ್ದು, ವಾಲ್ಮೀಕಿ ಸೀತೆಗೆ ಯಾವ ರೀತಿಯಲ್ಲೂ ಸಂಬಂಧಿಕರಲ್ಲ. ಅವಳಿಗೆ ಆಶ್ರಮದಲ್ಲಿ ಆಸರೆ ಕೊಟ್ಟರೇ ಹೊರತು, ಅವಳ – ಶ್ರೀರಾಮನ ಸಂಬಂಧವಾಗಿ ಪ್ರಶ್ನೆಗಳನ್ನು ಕೆದಕಿ ಕೇಳಿ ಅವಳನ್ನು

ಬಿ. ಜೆ. ಕುಸುಮಾ

೫೧ನೇ ಪುಟಕ್ಕೆ

# ಕತ್ತಲ ನಡುವಿನ ಒಂದು ದೀಪ : ಕರುಳ ಬಳ್ಳಿಗೆ ನಂಜಿನ ಸೋನೆ

ಇದು ಮಾಹಿತಿ ಯುಗ. ಮಾಹಿತಿ ಹೆದ್ದಾರಿ ಇಡೀ ಜಗತ್ತನ್ನು ಒಂದು ಹಳ್ಳಿಯಾಗಿಸಿದೆ. ಮಾಧ್ಯಮಗಳ ನಾಗಾಲೋಟದಲ್ಲಿ ಜಗತ್ತು ನೋಡನೋಡುತ್ತಿದ್ದಂತೆಯೇ ಒಂದು ಹಳ್ಳಿಯಾಗಿಬಿಡುವುದು ವಿಸ್ಮಯವೇ ಸರಿ. ಈ ವಿಸ್ಮಯವನ್ನು ನಾವೆಲ್ಲರು ಸಂಭ್ರಮಿಸುತ್ತಿರುವಾಗಲೇ ಇದರ ಮತ್ತೊಂದು ಮುಖ ನಿಧಾನವಾಗಿ ತೆರೆದುಕೊಳ್ಳುತ್ತಿದೆ. ಹೆದ್ದಾರಿಗಳು ನಗರ ನಗರಗಳನ್ನು ಜೋಡಿಸುತ್ತವೆಯೇ ಹೊರತು ಹಳ್ಳಿ ಹಳ್ಳಿಗಳನ್ನು ಅಲ್ಲ. ಅಥವಾ ಹಳ್ಳಿಗಳನ್ನು ನಗರಗಳೊಂದಿಗೆ ಬೆಸೆಯುವುದಿಲ್ಲ. ಹಳ್ಳಿಯ ನಿಟ್ಟುಸಿರುಗಳಿಗೆ ಯಾವ ಹೆದ್ದಾರಿಯೂ ಇಲ್ಲ. ಮಾಹಿತಿ ಹೆದ್ದಾರಿ ಸಾಧ್ಯ ಮಾಡಿದ್ದು ಇದನ್ನು ಮಾತ್ರ. ಹಾಗಾಗಿ ಹಣದಿ (ಕಾಲುದಾರಿ)ಗಳೇ ನಮ್ಮ ಬೆಳಕಿನ ದಾರಿ. ಚಿತ್ರಶೇಖರ ಕಂಠಿ ಅವರ 'ಕರುಳ ಬಳ್ಳಿಗೆ ನಂಜಿನ ಸೋನೆ'ಯನ್ನು ಈ ಅರ್ಥದಲ್ಲಿ ನಾನು ಹೆದ್ದಾರಿ ಅನ್ನುವುದಕ್ಕಿಂತಲೂ ನಮ್ಮೊಳಗಿನ ನಮ್ಮನ್ನು ಹುಡುಕಿಕೊಳ್ಳುವ ಹಣದಿ ಎಂದು ಕರೆಯಲು ಇಷ್ಟಪಡುತ್ತೇನೆ.

ಕಂಠಿ ಅವರು ಐದು ಕಥಾಸಂಕಲನಗಳನ್ನು ಹೊರ ತಂದಿದ್ದಾರೆ. 'ಕರುಳ ಬಳ್ಳಿಗೆ ನಂಜಿನ ಸೋನೆ' ಇವರ ಐದನೆಯ ಕಥಾಸಂಕಲನ. ಕಂಠಿ ಅವರೊಳಗೊಬ್ಬ ಕಥೆಗಾರ ಇದ್ದಂತೆಯೇ ಒಬ್ಬ ವಿಮರ್ಶಕನೂ ಇದ್ದಾನೆ. ಈ ಕಾರಣದಿಂದಾಗಿ ಐದು ಸಂಕಲನಗಳ ಕಥೆಗಾರ ನಿಂತ ನೀರಾಗಲಿಲ್ಲ. ತನ್ನನ್ನು ತಾನೇ ವಿಮರ್ಶಿಸಿಕೊಳ್ಳುತ್ತಾ ಸಂಕಲನದಿಂದ ಸಂಕಲನಕ್ಕೆ ಬೆಳೆದಿದ್ದಾರೆ. 'ಪಟ್ಟಾ' ಇವರ ಸಂಕಲನಗಳ ಪೈಕಿ ಅತ್ಯಂತ ಮಹತ್ವದ್ದು. ಕಂಠಿ ಅವರ ಕಥೆಗಳಿಗೆ ಮುಖ್ಯ ಹೊರಳು ಸಿಕ್ಕಿದ್ದು ಪಟ್ಟಾದಲ್ಲಿ. ಇದರ ಮುಂದುವರಿಕೆ ಕರುಳಬಳ್ಳಿಗೆ ನಂಜಿನ ಸೋನೆ. ಹೈದ್ರಾಬಾದ್ ಕರ್ನಾಟಕ ಎಂಬ ಚೌಕಟ್ಟು ಹಾಕಿ ಕಂಠಿಯವರನ್ನಾಗಲೀ ಅಥವಾ ಆ ನೆಲದಿಂದೆದ್ದು ಬಂದ ಅನೇಕ ತರುಣ ಕಥೆಗಾರರನ್ನಾಗಲೀ ಸೀಮಿತಗೊಳಿಸಲು ಇಷ್ಟವಾಗುವುದಿಲ್ಲ. ಬದಲಿಗೆ ಕಂಠಿಯಂತಹ ಕಥೆಗಾರರು ಕನ್ನಡ ಕಥೆಗೆ ತಮ್ಮ ನೆಲದ ಸಾರವನ್ನು ಮೊಗೆದುಕೊಟ್ಟಿದ್ದಾರೆ. ಆ ಮೂಲಕ ಕನ್ನಡದ ಕಥಾಲೋಕ ಭಿನ್ನವಾಗುವಂತೆ ಮಾಡಿದ್ದಾರೆ. ಕಂಠಿ ಅವರ ಪಟ್ಟಾ ಹಾಗೂ ನಂತರದ ಈ ಕರುಳ ಬಳ್ಳಿಗೆ ನಂಜಿನ ಸೋನೆ ಕನ್ನಡ ಕಥಾಲೋಕದಲ್ಲಿ ತಮ್ಮದೇ ಸ್ಥಾನ ಪಡೆದಿದೆ.

ಕಂಠಿಯವರನ್ನು ಇತ್ತೀಚೆಗೆ ಗಾಢವಾಗಿ ಕಾಡುತ್ತಿರುವ ಸಂಗತಿ ಎಂದರೆ ಸ್ಥಿತ್ಯಂತರ. ಜಾಗತೀಕರಣದ ದಾಳಿ ಅನೇಕ ರೀತಿಯ ಸ್ಥಿತ್ಯಂತರಕ್ಕೆ ಕಾರಣವಾಗಿದೆ. ಸಮಾಜ, ವ್ಯಕ್ತಿ ಎಲ್ಲರನ್ನೂ ಬದಲು ಮಾಡಿದೆ. ಈ ಸ್ಥಿತ್ಯಂತರ ಉಂಟುಮಾಡಿರುವ ತಲ್ಲಣಗಳು ಈಗ ಮರುಶೋಧಕ್ಕೆ ಕಾರಣವಾಗಿವೆ. ಒಂದು ರೀತಿಯಲ್ಲಿ ಕಂಠಿ ಅವರು ನಡೆಸಿರುವ ಮರುಶೋಧವೇ ಕರುಳ ಬಳ್ಳಿಗೆ ನಂಜಿನ ಸೋನೆ.

ಜಗತ್ತು ಒಂದು ಹಳ್ಳಿಯಾಗುತ್ತದೆ ಎನ್ನುವಾಗ ಇದ್ದ ಸಂಭ್ರಮ ಅಳಿಸಿಹೋಗಲು ಹೆಚ್ಚು ದಿನ ಹಿಡಿಯಲಿಲ್ಲ. ಜಾಗತೀಕರಣದ ಬಿರುಗಾಳಿ ಪಂಜೆ ಮಂಗೇಶರಾಯರು ತಮ್ಮ ಕವಿತೆಯಲ್ಲಿ ಬಣ್ಣಿಸಿದ ಹಾಗೆ ಬುಸುಗುಟ್ಟುವ ಪಾತಾಳದ ಹಾವೋ... ಎನ್ನುವ ರೀತಿಯಲ್ಲಿ ತನ್ನ ತೆಕ್ಕೆಯಲ್ಲಿ ಪ್ರತಿಯೊಂದನ್ನೂ ಸುತ್ತಿಕೊಂಡು ಹೊರಟಿದೆ. ಈ ತವಕ ತಲ್ಲಣಗಳು ಕನ್ನಡ ಕಥಾಲೋಕವನ್ನು ಪ್ರವೇಶಿಸಿದ್ದು ಈ ಸಾಲಿನಲ್ಲಿ ಅತ್ಯಂತ ಮಹತ್ವದ ಸಂಕಲನ ಕರುಳ ಬಳ್ಳಿಗೆ ನಂಜಿನ ಸೋನೆ. ಕನ್ನಡ ಕಥಾಲೋಕ ಜಾಗತೀಕರಣದ ಬಿಸಿ ಅನುಭವಿಸಲಿಲ್ಲವೇ ಎನ್ನುವಷ್ಟರಮಟ್ಟಿಗೆ ಈ ನೆರಳಿನ ಕಥೆಗಳು ಕಡಿಮೆ. ಅಂತಹದ್ದರಲ್ಲಿ ಕಂಠಿ ಅವರು ಈ ಬಗ್ಗೆ ನಡೆಸಿರುವ ಚಿಂತನೆ ಸ್ವಾಗತಾರ್ಹ.



ಪುಟಗಳು : ೧೦೦ ರೂ. ೬೦
**ಗೆಳೆಯರ ಬಳಗ ಪ್ರಕಾಶನ, ಗುಲ್ಬರ್ಗಾ-೦೨**

ಕನ್ನಡದ ಖ್ಯಾತ ಸಾಹಿತಿ ಪಿ. ಲಂಕೇಶ್ ಜಾಗತೀಕರಣ ಮತ್ತು ಕಥಾಲೋಕದ ಬಗ್ಗೆ ಬರೆಯುತ್ತಾ ಕನ್ನಡದ ಕಥೆಗಳ ಮರುಓದಿಗೆ ಪ್ರೇರೇಪಿಸಿದ್ದರು. ಕನ್ನಡದ ಕಥೆಗಳನ್ನು ಜಾಗತೀಕರಣದ ಹಿನ್ನೆಲೆಯಲ್ಲಿ ಓದುತ್ತಾ ಹೋದರೆ ಹೊಸ ಅರ್ಥವನ್ನು ಸ್ಫುರಿಸುತ್ತವೆ ಎಂದಿದ್ದರು. ಕಂಠಿ ಅವರ ಕಥೆಗಳು ಜಾಗತೀಕರಣದ ಬಗ್ಗೆ ಇಂತಹ ವಿಶೇಷ ಅರ್ಥವನ್ನು ಕಟ್ಟಿಕೊಡುತ್ತವೆ. ಕಾಡುಬೆಕ್ಕು, ಕಚ್ಚದೇ ಹಾವು..., ಎಮ್ಮೆ– ನನ್ನನ್ನು ಕಾಡಿದ ಕಥೆಗಳು.

ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ.. ಎಂದಿದ್ದಾನೆ ಅಲ್ಲಮಪ್ರಭು. ಜಾಗತೀಕರಣ ಇದಲ್ಲದೆ ಬೇರೆ ಅಲ್ಲ. ಅಂದು ಅಲ್ಲಮ ಕಂಡ ಮುನ್ನೋಟ ಈಗ ನಿಜವಾಗಿದೆ. ಸಾಸಿವೆಯಷ್ಟು ಸುಖದ ಬೆನ್ನತ್ತಿದವರು ದುಃಖ ಸಾಗರದ ಮುಂದೆ ನಿಂತಿದ್ದಾರೆ. ಕಂಠಿ ಅವರ ಕಚ್ಚದೇ ಹಾವು... ಅನೇಕ ಒಳ ಅರ್ಥಗಳನ್ನು ಇಟ್ಟುಕೊಂಡಿರುವ ಕತೆ. ಬಹುಶಃ ಹಳ್ಳಿಯ ಬದುಕು ಗೊತ್ತಿಲ್ಲದ ಯಾರೂ ಈ ಕಥೆಗಳನ್ನು ಬರೆಯಲು ಸಾಧ್ಯವಿಲ್ಲ.

ಕಂಠಿ ಅವರ ದೊಡ್ಡ ಶಕ್ತಿ ಅವರ ಪ್ರತಿಮಾ ಲೋಕ. ಜಾಗತೀಕರಣದಂತಹ ವಸ್ತುವೂ ಇವರ ಕೈಯಲ್ಲಿ ಘೋಷಣೆಯಾಗಿ, ಒಣಮಾತುಗಳಾಗಿ ಬದಲಾಗುವುದಿಲ್ಲ. ಇವರ ಚಿತ್ರಕ ಶಕ್ತಿಯಿಂದಾಗಿ ಮಹತ್ವದ ಆಯಾಮ ಪಡೆಯುತ್ತದೆ. ಕಾಡುಬೆಕ್ಕು ಒಂದು ಹಳ್ಳಿಯಲ್ಲಿ ಎಬ್ಬಿಸುವ ದಾಂಧಲೆ ಮಾತ್ರ ಮೇಲ್ನೋಟಕ್ಕೆ ಕಾಣುತ್ತದೆ. ಆದರೆ ಈ ಕಾಡುಬೆಕ್ಕು ಭಾರತ ಮತ್ತು ಅಂತಹ ಅನೇಕಾನೇಕ ದೇಶದ ಬೆನ್ನೆಲುಬು ಮುರಿಯುತ್ತಿರುವ ಅಮೇರಿಕೀಕರಣದ ಮಹತ್ವದ ಚಿತ್ರವಾಗಿದೆ. ಕಂಠಿ ಅವರು ಆಶಾವಾದಿ. ಹೀಗಾಗಿಯೇ ಇವರ ಎಲ್ಲ ಕಥೆಗಳಿಗೂ ಒಂದು ಆಶಾವಾದವಿದೆ. ಅಮೆರಿಕಾದಂತಹ ಬೃಹತ್ ಶಕ್ತಿಯ ಎದುರು ಜವಾರಿ ಶಕ್ತಿಗಳು ಎದ್ದು ನಿಲ್ಲುತ್ತವೆ ಎಂಬ ನಂಬಿಕೆ ಇದೆ. ಇಂತಹ ದೇಸಿ ಸತ್ವ ಎಂತಹ ಆಕ್ರಮಣವನ್ನೂ ಹಿಮ್ಮೆಟ್ಟಿಸುತ್ತದೆ ಎನ್ನುವ ನಂಬಿಕೆ ಇದೆ. ಎಮ್ಮೆ ಕಥೆಯಾಗಲೀ, ಕಚ್ಚದೇ ಹಾವು ಕಥೆಯಾಗಲೀ ಈ ನಂಬಿಕೆಯನ್ನು ಪುನರುಚ್ಚರಿಸುತ್ತದೆ.

ಹೈದ್ರಾಬಾದ್ ಕರ್ನಾಟಕದ ನೆಲ ಇಂದು ಬತ್ತಿಹೋಗಿದೆ. ಹೊಲದ ಕ್ರಿಮಿಗಳ ಬದಲು ರೈತರ ಹೆಣಗಳು ನೆಲಕ್ಕುರುಳುತ್ತಿವೆ. ಕ್ರಿಮಿನಾಶಕ ಕ್ರಿಮಿಗಳನ್ನಲ್ಲ, ರೈತರನ್ನು ನುಂಗುತ್ತಿದೆ. ಕಂಠಿಯಂಥವರು ಮಾತ್ರ ಈ ಮನಕಲಕುವ ಸ್ಥಿತಿಗೆ ದೀಪ ಹಿಡಿಯಬಲ್ಲರು. ನಿಟ್ಟುಸಿರಿಗೆ ವಾಹಕವಾಗಬಲ್ಲರು.

**ಮೋಹನ್ ಕುಡ್ಲ**

---

*೫೦ನೇ ಪುಟದಿಂದ*

ನೋಯಿಸಲಿಲ್ಲ. ಅವರ ಆಶ್ರಮದಲ್ಲಿದ್ದ ಇತರ ಯಾರೇ ಆಗಲಿ, ಸೀತೆಯನ್ನು ಪ್ರೀತಿ ಗೌರವಗಳಿಂದಲೇ ಕಂಡರು, ಅವಳ ಮಕ್ಕಳನ್ನು ಮುದ್ದಾಡಿ ಲಾಲಿಸಿದರು. ಹೀಗೆ ವಿಚ್ಛೇದಿತೆಯೊಬ್ಬಳನ್ನು ಪ್ರೀತಿಯಿಂದ ಕಂಡು, ಅವಳಿಗೆ ಅಗತ್ಯವಿದ್ದ ಅನುಕೂಲಗಳನ್ನು ಮಾಡಿಕೊಟ್ಟು, ಅವಳಿಗೆ ಅಕ್ಕರೆಯ ಆಸರೆ, ನೆಮ್ಮದಿಯ ನೆಲೆ ಕಲ್ಪಿಸಿ, ಆಕೆಯ ಬದುಕು ಸಹನೀಯವಾಗಿ ಮಾಡಬಹುದು, ಆಕೆಗೆ ಮಕ್ಕಳಿದ್ದರೆ ಅವರನ್ನೂ ಸರಿಯಾಗಿ ಬೆಳೆಸಿ ಸತ್ಪ್ರಜೆಗಳನ್ನಾಗಿ ಮಾಡಬಹುದು ಎಂಬುದನ್ನು ವಾಲ್ಮೀಕಿ ತಮ್ಮ ಲೋಕೋತ್ತರವಾದ ನಡೆವಳಿಕೆಯಿಂದ ತೋರಿಸಿಕೊಟ್ಟಿದ್ದಾರೆ. ಅವರ ರೀತಿ ಇಂದಿಗೂ ಸಮಾಜದಲ್ಲಿ ಸಭ್ಯರು ಎನಿಸಿಕೊಳ್ಳುವ ಎಲ್ಲರೂ ಅನುಸರಿಸಬೇಕಾದ ನೀತಿ. ರಾಮಾಯಣ ಕಾವ್ಯ ಬರೆದು ವಾಲ್ಮೀಕಿ ಮಹರ್ಷಿಗಳು ಆದಿಕವಿ ಎನಿಸಿ ಶ್ರೇಷ್ಠರಾದರು. ಆದರೆ ಇದೆಲ್ಲಕ್ಕಿಂತಲೂ, ಅವರ ವ್ಯಕ್ತಿತ್ವದಲ್ಲಿ ಹಿರಿದಾದುದೆಂದರೆ, ಅವರು ಅಡವಿಯಲ್ಲಿ ಅಳುತ್ತಿದ್ದ ಅವನಿಸುತೆ ಸೀತೆಗೆ, ಪತಿ ಪರಿತ್ಯಕ್ತೆಗೆ, ಆದರದ ಆಶ್ರಯ ನೀಡಿದ್ದು. ಆತ್ಮಹತ್ಯೆ ಮಾಡಿಕೊಂಡೋ, ಅಡವಿ ಮೃಗಗಳಿಗೆ ಆಹಾರವಾಗಿಯೋ, ದೈಹಿಕ ಆಯಾಸ, ಮಾನಸಿಕ ಆಘಾತಗಳಿಂದಲೋ ಸೀತೆಯ ಸಾವು ಸುಲಭ ಸಂಭವನೀಯ ಸಂಗತಿಯಾಗಿತ್ತು. ಮೃತ್ಯುಮುಖಿಯಾಗಿದ್ದ ಅವಳನ್ನು ತಮ್ಮ ಆದರದ ಅಮೃತಸಿಂಚನದಿಂದ ರಕ್ಷಿಸಿ, ವಾಲ್ಮೀಕಿ ಮಹರ್ಷಿಗಳು ತೋರಿದ ದಾರಿ, ಇಂದಿಗೂ ಒಂದು ಮಾದರಿ.

**ಬಿ. ಜಿ. ಕುಸುಮಾ**
೧೯೪. ೫ನೇ ಮುಖ್ಯರಸ್ತೆ, ೪ನೇ ಬ್ಲಾಕ್, ೩ನೇ ಫೇಸ್
ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ [illegible]

# ಮಂಗಳದ ಆಸುಪಾಸು



ಕಳೆದೆರಡು ತಿಂಗಳಿಂದ ಆಕಾಶದಲ್ಲಿ ಅತಿ ಪ್ರಕಾಶಮಾನವಾದ ವಸ್ತು ಎಂಬ ಪಟ್ಟ ದೊರಕಿಸಿಕೊಂಡಿದ್ದ ಮಂಗಳ ಈ ತಿಂಗಳು ಅದನ್ನು ಉಳಿಸಿಕೊಳ್ಳುತ್ತದೆ – ತಿಂಗಳ ಕೊನೆಯ ವಾರದವರೆಗೆ ಮಾತ್ರ. ಮೋಡಗಳು ಕಣ್ಣುಮುಚ್ಚಾಲೆ ನಡೆಸಿ ಅದರ ವೈಭವವನ್ನು ಮರೆ ಮಾಡಿದ್ದವು. ಕಳೆದ ೯ರಂದು ಅದು ಚಂದ್ರನ ಹಿಂದೆ ಅಡಗಿ ಹೊರಬಂದದ್ದನ್ನು ರಾತ್ರಿ ಇಡೀ ಸುರಿದ ಮಳೆ ಮುಚ್ಚಿಹಾಕಿ ಎಲ್ಲರನ್ನೂ ನಿರಾಶೆಗೊಳಿಸಿತ್ತು. ಆದರೆ ಚಿಂತೆಗೆ ಕಾರಣವಿಲ್ಲ. ಈ ತಿಂಗಳ ಆರರಂದು ಅಂತಹುದೇ ಇನ್ನೊಂದು ಅವಕಾಶ ಕೂಡಿಬಂದಿದೆ. ಸೂರ್ಯಾಸ್ತವಾಗುವಾಗ ಪೂರ್ವದಿಗಂತದಿಂದ ಸಾಕಷ್ಟು ಎತ್ತರದಲ್ಲಿ ಕಾಣುವ ಮಂಗಳವನ್ನು ಹುಡುಕುವುದು ಪ್ರಯಾಸವೇನೂ ಆಗುವುದಿಲ್ಲ. ಅದಕ್ಕಿಂತ ದಕ್ಷಿಣಕ್ಕೊಂದು ನಕ್ಷತ್ರ ಕಾಣುವುದು. ಇದೇ ಫಾಮಲ್‌ಹೌಟ್ – ದಕ್ಷಿಣಮೀನ ಎಂಬ ಹೆಸರಿನ ನಕ್ಷತ್ರಪುಂಜದ ಮೀನಾಕ್ಷಿ ಎಂಬ ಹೆಸರಿನದು. ದುರ್ಬೀನಿನಿಂದ ಮಂಗಳದ ಆಸುಪಾಸಿನಲ್ಲಿ ಕಣ್ಣಾಡಿಸಿದರೆ ಇನ್ನೊಂದೆರಡು ಮೂರು ನಕ್ಷತ್ರಗಳನ್ನು ಗುರುತಿಸಬಹುದು. ಮಕರದ ತ್ರಿಕೋಣಾಕಾರದ ಅಂಚಿಗೂ, ಮಂಗಳಕ್ಕೂ ನಡುವೆ ಯುರೇನಸ್ ಗ್ರಹವಿದೆ. ಇದನ್ನು ಗುರುತಿಸಲು ದೂರದರ್ಶಕ ಬೇಕೇ ಬೇಕು. ವಿದ್ಯುದ್ದೀಪದ ಅಡಚಣೆಯಿಲ್ಲದ ಸ್ಥಳದಿಂದ ಈ ಭಾಗದ ಚಿತ್ರ ತೆಗೆದಿರಾದರೆ, ಮಂಗಳದೊಡನೆ ಯುರೇನಸ್ ಕೂಡ ದಾಖಲಾಗುವುದು. ಮಂಗಳದಿಂದ ಉತ್ತರಕ್ಕೆ ಇರುವ ಚೌಕವೇ ನಕುಲ (ಪೆಗಸಸ್). ಇನ್ನೂ ಉತ್ತರಕ್ಕೆ ಕಣ್ಣು ಹಾಯಿಸಿದರೆ ಕುಂತಿ (ಕಾಸಿಯೋಪಿಯ), ದ್ರೌಪದಿ (ಆಂಡ್ರೋಮಿಡಾ) ಇವು ಕಾಣುತ್ತವೆ. ಆಕಾಶ ಶುಭ್ರವಾಗಿದ್ದಾಗ ಆಂಡ್ರೋಮಿಡಾ ನಕ್ಷತ್ರಪುಂಜದಲ್ಲಿರುವ ಗ್ಯಾಲಕ್ಸಿಯನ್ನೂ ಕಾಣಬಹುದು. ಪಶ್ಚಿಮದಂಚಿನಲ್ಲಿ ಸಂಜೆಗೆಂಪಿನಲ್ಲಿ ವೃಶ್ಚಿಕ ಕಾಣುವುದು ದುರ್ಲಭ. ಆದರೆ ಧನು, ಅದಕ್ಕಿಂತ ಉತ್ತರಕ್ಕೆ ಭೀಮಸೇನ (ಹರ್ಕ್ಯುಲೆಸ್) ಕಾಣುತ್ತವೆ. ಗರುಡ (ಅಕ್ವಿಲಾ), ರಾಜಹಂಸ (ಸಿಗ್ನಸ್), ವೀಣಾ (ಲೈರಾ) ಇವನ್ನೂ ಸುಲಭವಾಗಿ ಗುರುತಿಸಬಹುದು.




ಶುಕ್ರಗ್ರಹ ಪಶ್ಚಿಮದಂಚಿನಲ್ಲಿ ಸಂಜೆ ಕಾಣುವುದಾದರೂ ಸಂಜೆಗೆಂಪಿನ ಪ್ರಕಾಶದಲ್ಲಿ ಅದನ್ನು ಹುಡುಕುವುದು ಕಷ್ಟವೇ ಎನ್ನಬಹುದು. ಮೂರರಂದು ಸಂಜೆ ಅದರ ಪಕ್ಕ ಚಿತ್ತಾ ನಕ್ಷತ್ರವನ್ನು ಹುಡುಕುವುದಂತೂ ಇನ್ನೂ ಕಷ್ಟ. ಆದರೆ ತಿಂಗಳ ಕೊನೆಗೆ ೨೬ರಂದು ಚಂದ್ರ ಶುಕ್ರದ ಜೊತೆಗೂಡುವ ಸಂದರ್ಭ ಉಪಯೋಗಿಸಿ ಇದನ್ನು ಪತ್ತೆ ಮಾಡಬಹುದು. ಆದರೆ ೨೬ರಂದು ಬಲಿಪಾಡ್ಯಮಿಯ ಬಾಣಬಿರುಸುಗಳ ಸಂದರ್ಭದಲ್ಲಿ ಇವೆರಡೂ ನಾಚಿ ಮಾಯವಾಗಿಬಿಡಬಹುದು.

ಗುರು ಮತ್ತು ಬುಧ ಇವೆರಡೂ ಬೆಳಗಿನ ಜಾವ ಕಾಣುವುವು. ಒಂದನೆಯ ತಾರೀಖಿನಂದು ಇವೆರಡೂ ಪಕ್ಕಪಕ್ಕದಲ್ಲಿದ್ದಂತೆ ಪೂರ್ವದ ಅಂಚಿನಲ್ಲಿ ಕಾಣುವುವು. ಕ್ರಮೇಣ ಬುಧ ದಿಗಂತದ ಅಂಚಿಗೆ ಸರಿದು, ತಿಂಗಳ ಕೊನೆಯ ಹೊತ್ತಿಗೆ ಗುರುಗ್ರಹ ಮಾತ್ರ ಕಾಣುವುದು. ೨೧ರಂದು ಚಂದ್ರ ಮತ್ತು ಗುರು ಅಕ್ಕಪಕ್ಕದಲ್ಲಿರುವಂತೆ ಕಾಣುವುದು.



ದಕ್ಷಿಣ ಮೀನ ನಕ್ಷತ್ರಪುಂಜದ ಅತಿ ಪ್ರಕಾಶಮಾನ ನಕ್ಷತ್ರವೇ ಮೀನಾಕ್ಷಿ

ಶನಿಗ್ರಹ ನಡುರಾತ್ರಿಯಲ್ಲಿ ಉದಯಿಸಿ, ಬೆಳಗಿನ ಜಾವಕ್ಕೆ ನೆತ್ತಿಯ ಮೇಲೆ ಬಂದಿರುತ್ತದೆ. ಮಿಥುನ ರಾಶಿಯಲ್ಲಿ ಪ್ರಕಾಶಮಾನ ನಕ್ಷತ್ರಗಳ ಮಧ್ಯೆ ಇದೂ ಒಂದು ನಕ್ಷತ್ರದಂತೆಯೇ ಅಡಗಿಹೋಗಿರುವುದು. ೧೬ ರಂದು ಚಂದ್ರ ಇದರ ಪಕ್ಕದಲ್ಲಿ ಕಾಣುವ ಸಂದರ್ಭವನ್ನು ಉಪಯೋಗಿಸಿ ಇದನ್ನು ಪತ್ತೆ ಮಾಡಬಹುದು. ೨೫ರಂದು ತಟಸ್ಥವಾಗಿ ಹಿನ್ನಡೆಯ ಆರಂಭವಾಗುತ್ತದೆ.

ಎನ್ಕೆ ಎಂಬ ಹೆಸರಿನ ಧೂಮಕೇತುವೊಂದು ೩ ವರ್ಷ ೪ ತಿಂಗಳಿಗೊಮ್ಮೆ ಸೂರ್ಯನನ್ನು ಸುತ್ತಿ ಬರುತ್ತಿದೆ. ಇಷ್ಟು ಚಿಕ್ಕ ಅವಧಿಯ ಧೂಮಕೇತು ಇನ್ನೊಂದಿಲ್ಲ. ಆದರೆ ಸಾಕಷ್ಟು ಪ್ರದಕ್ಷಿಣೆಗಳನ್ನು ಮುಗಿಸಿರುವ ಇದು ತನ್ನ ಬಾಲ ಬೆಳೆಯಿಸಿಕೊಳ್ಳಲು ಅಗತ್ಯವಾದ ಸರಕನ್ನು ಕಳೆದುಕೊಂಡಿದೆ. ಧೂಮಕೇತುವೇ ಮಂದ ಬೆಳಕಿನದು ; ಬಾಲವಂತೂ ಇನ್ನೂ ಕ್ಷೀಣ. ಆದ್ದರಿಂದ ಇದು ಬರಿಗಣ್ಣಿಗೆ ಸಿಕ್ಕುವುದೇ ಇಲ್ಲ. ಈ ಬಾರಿ ಭೂಮಿಯ ಸ್ಥಾನ ಇದರ ವೀಕ್ಷಣೆಗೆ ಅನುಕೂಲಕರವಾದದ್ದರಿಂದ ಬರಿಗಣ್ಣಿಗೇ ನೋಡಲು ಸಿಗಬಹುದು ಎಂದು ಅನೇಕ ಹವ್ಯಾಸೀ ವೀಕ್ಷಕರು ಕಾಯುತ್ತಿದ್ದಾರೆ. ಆಂಡ್ರೋಮಿಡಾ ನಕ್ಷತ್ರಪುಂಜದಲ್ಲಿ ಸಾಗುವ ಇದು ದುರ್ಬೀನಿಗೂ ಲಭ್ಯವಾಗುವುದು. ೨೫ರ ಅಮಾವಾಸ್ಯೆಯ ಕತ್ತಲಲ್ಲಿ ಆಂಡ್ರೋಮಿಡಾ ಗ್ಯಾಲಕ್ಸಿಯತ್ತ ಕಣ್ಣು ಹಾಯಿಸಿ. ಅದರ ಪಕ್ಕ ಇನ್ನೊಂದು ಗ್ಯಾಲಕ್ಸಿ ಇದೆಯೇ ಎಂಬ ಭ್ರಮೆ ಉಂಟುಮಾಡುವ ಧೂಮಕೇತು ಅಲ್ಲಿ ಕಾಣುತ್ತದೆ. ಎರಡೇ ದಿನಗಳಲ್ಲಿ ದೂರ ಸರಿದು ಹೋಗುತ್ತದೆ.

೨೨ರಂದು ಓರಿಯನಿಡ್ ಉಲ್ಕಾವೃಷ್ಟಿಯ ಚಟುವಟಿಕೆ ಗರಿಷ್ಠವಾಗುತ್ತದೆ. ಹ್ಯಾಲೀ ಧೂಮಕೇತುವಿನ ತುಣುಕುಗಳನ್ನು ಭೂಮಿ ಸಮೀಪಿಸಿದಾಗ ಅವು ಹೊತ್ತಿ ಉರಿದು ಬೀಳುವ ಘಟನೆಯೇ ಈ ಉಲ್ಕಾವೃಷ್ಟಿ. ಬೆಳಗಿನ ಜಾವ ಗಂಟೆಗೆ ಸುಮಾರು ೨೦-೨೫ ಉಲ್ಕೆಗಳು ಕಾಣಬಹುದು. ಉಲ್ಕೆಗಳೆಲ್ಲವೂ ಒರ್ರೈಯನ್ ನಕ್ಷತ್ರಪುಂಜದಿಂದ ಹೊರಟಂತೆ ಕಾಣುವುದರಿಂದ ಓರಿಯನಿಡ್ ಎಂಬ ಹೆಸರಿದೆ.

ಹತ್ತನೇ ತಾರೀಖು ಹುಣ್ಣಿಮೆ. ಆ ದಿನ ಚಂದ್ರನಿಂದ ಸ್ವಲ್ಪ ಉತ್ತರಕ್ಕೆ ಕಾಣುವ ಚಿಕ್ಕ ತ್ರಿಕೋಣವೇ ಮೇಷರಾಶಿ. ಅದರಲ್ಲಿಯ ಪ್ರಕಾಶಮಾನ ನಕ್ಷತ್ರ ಅಶ್ವಿನಿ. ಆದ್ದರಿಂದ ಈ ತಿಂಗಳ ಹೆಸರು ಆಶ್ವಯುಜ.

ಖಗೋಳ ದಿನಚರಿ (ಅಕ್ಟೋಬರ್)

೧ ಗುರು-ಬುಧಗಳ ನಡುವೆ ಕನಿಷ್ಠಕೋನ (ಬೆಳಗಿನ ಜಾವ ಪೂರ್ವದಂಚಿನಲ್ಲಿ ಎರಡನ್ನೂ ಅಕ್ಕಪಕ್ಕದಲ್ಲಿ ಕಾಣಬಹುದು)
೨ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)
೩ ಶುಕ್ರದ ಪಕ್ಕದಲ್ಲಿ ಚಿತ್ತಾ ನಕ್ಷತ್ರ (ಸಂಜೆಗೆಂಪಿನಲ್ಲಿ ಎರಡೂ ಕರಗಿಹೋಗಬಹುದು)
೬ ಮಂಗಳ ಮತ್ತು ಚಂದ್ರ - ಎರಡರ ನಡುವೆ ಕನಿಷ್ಠಕೋನ (ಛಾಯಾಗ್ರಾಹಕರಿಗೆ ಅತ್ಯುತ್ತಮ ಅವಕಾಶ)
೧೦ ಹುಣ್ಣಿಮೆ (ಚಂದ್ರನ ಪಕ್ಕದಲ್ಲಿ ಕಾಣುವ ಪ್ರಖರ ನಕ್ಷತ್ರವೇ ಅಶ್ವಿನಿ)
೧೬ ಶನಿ ಮತ್ತು ಚಂದ್ರ - ಎರಡರ ನಡುವೆ ಕನಿಷ್ಠ ಕೋನ
೧೮ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
೨೧ ಚಂದ್ರ ಮತ್ತು ಗುರು ನಡುವೆ ಕನಿಷ್ಠ ಕೋನ
೨೨ ಓರಿಯನಿಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೫ ಅಮಾವಾಸ್ಯೆ. ಶನಿಗ್ರಹದ ಹಿನ್ನಡೆ ಆರಂಭ
೨೬ ಚಂದ್ರ-ಶುಕ್ರಗಳ ನಡುವೆ ಕನಿಷ್ಠಕೋನ. (ಸಂಜೆಗೆಂಪಿನಲ್ಲಿ ಹುಡುಕಲು ಪ್ರಯತ್ನಿಸಿ)
೩೦ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)

ಬಿ. ಎಸ್. ಶೈಲಜಾ
ಜವಾಹರಲಾಲ ನೆಹರೂ ತಾರಾಲಯ
ಬೆಂಗಳೂರು - ೫೬೦ ೦೦೧

# ಸಂಸ್ಕೃತಿಯ ಆರಾಧಕರೇ ನೀವು ಯಾವ ಕಡೆಗಿದ್ದೀರಿ?

**ಈ** ಪ್ರಶ್ನೆ ಮುಂದಿಟ್ಟು ಕಲೆಯ ಉದ್ದೇಶ ಏನೆಂದು ನೋಡೋಣ.

ಕಲೆಯು ಕಲಾವಿದನ ಕುಂಚದಿಂದ ರಚಿತವಾದರೂ ಅದಕ್ಕೂ ಸಮಾಜಕ್ಕೂ ಇರುವ ಬಂಧ ಗಾಢವಾದುದು. ಆದರೆ ಕಲೆಗೂ ಸಮಾಜಕ್ಕೂ ನಡುವೆ ಇರುವ ಸಂಬಂಧ ಯಾವ ರೀತಿಯದು ಎಂಬ ಪ್ರಶ್ನೆ ಒಂದು ನಿರ್ದಿಷ್ಟ ಹಂತದ ಬೆಳವಣಿಗೆಯನ್ನು ಹೊಂದಿದ ಎಲ್ಲ ಕಲಾಪ್ರಕಾರಗಳಲ್ಲೂ ಉದ್ಭವಿಸಿದೆ. ಬಹುತೇಕವಾಗಿ ಈ ಪ್ರಶ್ನೆಗೆ ದೊರೆತ ಉತ್ತರಗಳು ಪರಸ್ಪರ ವೈರುಧ್ಯದಿಂದ ಕೂಡಿದವುಗಳಾಗಿವೆ.

ಒಂದು ಅಭಿಪ್ರಾಯದಂತೆ: ಸಮಾಜವು ಕಲಾವಿದನಿಗಾಗಿ ಇರುವುದಲ್ಲ; ಕಲಾವಿದನಿರುವುದು ಸಮಾಜಕ್ಕಾಗಿ. ಅಂದರೆ ಕಲೆ ಮಾನವ ಪ್ರಜ್ಞೆಯ ವಿಕಾಸದ, ಸಾಮಾಜಿಕ ಅನಿಷ್ಟಗಳ ನಿವಾರಣೆಯ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.

ಈ ಅಭಿಪ್ರಾಯವನ್ನು ಒಪ್ಪದೆ ಕಲೆಗೆ ಕಲೆಯೇ ಗುರಿ ಎನ್ನುವವರು ಇದ್ದಾರೆ. ಇವರು 'ಶುದ್ಧವಾದ ಕಲೆ'ಯನ್ನು ಪ್ರತಿಪಾದಿಸುತ್ತಾರೆ. ಅದನ್ನು ಸಾಧನವನ್ನಾಗಿಸಿ ಬೇರೆ ಯಾವುದೇ ಗುರಿಯನ್ನು ಸಾಧಿಸಲು ಬಳಸುವುದು ಅದರ ಘನತೆಯನ್ನು ಕುಗ್ಗಿಸಿದಂತೆ ಎನ್ನುತ್ತಾರೆ.

'ಕಲೆಗಾಗಿ ಕಲೆ' ಎಂಬ ವಾದವು 'ವಿಜ್ಞಾನಕ್ಕಾಗಿ ವಿಜ್ಞಾನ' ಎಂದು ಹೇಳುವಷ್ಟೇ ವಿಚಿತ್ರವಾದುದು. ಮನುಷ್ಯನ ಕೆಲಸ ಕಾರ್ಯಗಳು ನಿಷ್ಪ್ರಯೋಜಕವಾಗಬಾರದು ಎನ್ನುವುದನ್ನು ಒಪ್ಪುವುದಾದರೆ ಅವುಗಳು ಮನುಕುಲಕ್ಕೆ ಉಪಯೋಗಕಾರಿಯಾಗಿರಬೇಕು. ವಿಜ್ಞಾನ ಇರುವುದು ಮನುಷ್ಯನ ಮಾರ್ಗದರ್ಶಕನಾಗಿದ್ದು ಆತನ ತಪ್ಪು ತಿಳುವಳಿಕೆಯನ್ನು ಸರಿಪಡಿಸಲು ; ಬೇರೆ ಮಾತಿನಲ್ಲಿ ಹೇಳುವುದಾದರೆ ಮೂಢನಂಬಿಕೆ, ಅಂಧಶ್ರದ್ಧೆಗಳನ್ನು ನಿವಾರಿಸುವುದಕ್ಕೆ. ಕೇವಲ ಅಭಿವೃದ್ಧಿಯನ್ನು ಸಾಧಿಸುವ ಬದಲು ಸರ್ವಾಂಗೀಣ ಬೆಳವಣಿಗೆಯನ್ನು ಹೊಂದುವುದಕ್ಕೆ.

ಅಸೂಯೆಯು ಪ್ರತಿಯೊಬ್ಬ ಮನುಷ್ಯನಲ್ಲೂ ಇರುವ ಗುಣ. ಸಹಜವಾಗಿಯೇ ಪ್ರತಿಯೊಬ್ಬನಲ್ಲೂ ಇರುತ್ತದೆ. ಅದು ಆತನ ವ್ಯಕ್ತಿತ್ವದ ಮೇಲೆ ಇತ್ಯಾತ್ಮಕ ಪರಿಣಾಮ ಬೀರಿದರೆ ಒಳ್ಳೆಯದೇ. ಇನ್ನೊಬ್ಬನ ಏಳಿಗೆಯನ್ನು ಕಂಡು ತಾನೂ ಏಳಿಗೆಯನ್ನು ಹೊಂದಬೇಕೆಂದು ಅದರಿಂದ ಪ್ರೇರೇಪಿಸಲ್ಪಟ್ಟು ಆ ನಿಟ್ಟಿನಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ವ್ಯಕ್ತಿಯು ಬೆಳವಣಿಗೆಯನ್ನು ಸಾಧಿಸುತ್ತಾನೆ. ಇದು ವ್ಯಕ್ತಿಯಲ್ಲಿ ಸ್ವಾಭಿಮಾನವನ್ನು ಬೆಳೆಸುತ್ತದೆ. ಅಸೂಯಾರಹಿತನಾಗಿ ಸೇವೆ ಸಲ್ಲಿಸುವ ಗುಲಾಮ ಪ್ರವೃತ್ತಿಗೆ ಕಡಿವಾಣ ಹಾಕುತ್ತದೆ. ಒಬ್ಬ ವ್ಯಕ್ತಿಗೆ ತನ್ನದೇ ಆದ ವ್ಯಕ್ತಿತ್ವವನ್ನು ಒದಗಿಸಿಕೊಡುತ್ತದೆ. ಪ್ರತಿಯೊಬ್ಬರೂ ಇಂಥವರೇ ಆದಾಗ – ವಿನಾಕಾರಣ ಇತರರನ್ನು ದೂಷಿಸುವುದು ಅಥವಾ ಉತ್ತೇಕ್ಷಿಸುವುದನ್ನು ಬಿಟ್ಟು ಸ್ವಪ್ರಯತ್ನದಲ್ಲಿ ತೊಡಗಿದಾಗ – ಇಡೀ ಸಮಾಜ, ತನ್ಮೂಲಕ ಇಡೀ ದೇಶ ಬೆಳವಣಿಗೆಯತ್ತ ಮುಖಮಾಡಿ ನಿಲ್ಲುತ್ತದೆ.

ಆದರೆ ಇದು ಮಿತಿಮೀರಿ ಬೆಳೆದಾಗ – ಅಸೂಯೆ, ಅಹಂಕಾರಗಳೇ ನಮ್ಮನ್ನು ಆಳುವಂತಾದಾಗ – ವ್ಯಕ್ತಿತ್ವದ ಮೇಲೆ ನೇತ್ಯಾತ್ಮಕ ಪರಿಣಾಮ ಉಂಟಾಗುತ್ತದೆ. ಹೀಗಾದಾಗ ಇನ್ನೊಬ್ಬರ ಏಳಿಗೆಯನ್ನು ಅಲ್ಲಗಳೆಯುತ್ತೇವೆ; ಅವರ ಪ್ರಾಮಾಣಿಕ ಪ್ರಯತ್ನಕ್ಕೆ ತಡೆ ಒಡ್ಡುತ್ತೇವೆ. ಏಕೆಂದರೆ ಅವು ನಮ್ಮ ಉದ್ದೇಶ ಸಾಧನೆಗೆ ವಿರುದ್ಧವಾಗಿ ಇರಬಹುದು. ಈ ನಿರಾಕರಣೆಗಾಗಿ ಇಲ್ಲಸಲ್ಲದ ಕಾರಣಗಳನ್ನು ಪ್ರಚುರಪಡಿಸತೊಡಗುತ್ತೇವೆ. ಆ ಮೂಲಕ ಸಮಾಜದಲ್ಲಿ - ಸ್ವಕಲ್ಪಿತ - ಸ್ಥಾನಮಾನವನ್ನು ಉಳಿಸಿಕೊಂಡೆವೆಂದು ಭಾವಿಸಿ ತೃಪ್ತಿಪಡುತ್ತೇವೆ. ಆದರೆ ಇದು ಭ್ರಮೆಯಾಗಿರುವ ಕಾರಣ ನಮ್ಮ ಗೋರಿಯನ್ನು ನಮಗೆ ತಿಳಿಯದಂತೆ ನಾವೇ ತೋಡಿಕೊಳ್ಳುತ್ತೇವೆ. ಪ್ರಾಚೀನ ಭಾರತದಲ್ಲಿ ಪುರೋಹಿತಶಾಹಿಗಳು ಲೋಕಾಯತರ ವಿರುದ್ಧ ಮಾಡಿದ್ದರೆ, ಇಂದು ಬಂಡವಾಳಶಾಹಿಗಳು ಸಮಾಜವಾದಿಗಳ ವಿರುದ್ಧ ಮಾಡುತ್ತಿರುವುದೂ ಇದನ್ನೇ!

ಈ ರೀತಿಯ ಬೆಳವಣಿಗೆ ಮನಸ್ಸನ್ನು ಸಂಕುಚಿತಗೊಳಿಸಿ ವ್ಯಕ್ತಿಯನ್ನು, ಆತನ ವಿಚಾರಗಳನ್ನು, ಒಂದು ನಿರ್ದಿಷ್ಟ ವ್ಯಾಪ್ತಿಗೆ ಸೀಮಿತಗೊಳಿಸುತ್ತದೆ. ವ್ಯಕ್ತಿ 'ಯುಟಿಲಿಟೇರಿಯನ್' ಆಗುತ್ತಾನೆ. 'ವಿಜ್ಞಾನಕ್ಕಾಗಿ ವಿಜ್ಞಾನ'ದಂತಹ ತತ್ವಗಳು 'ಹಣಕ್ಕಾಗಿ ವಿಜ್ಞಾನ' ಎಂದಾಗುತ್ತವೆ. ವಿಜ್ಞಾನ ಕ್ಷೇತ್ರಕ್ಕೆ ನಮ್ಮ ಕೊಡುಗೆ ಏನು ಎಂದಿದ್ದ ಉತ್ಕಟತೆ, ಅದರಿಂದ ನಮ್ಮ ಗಳಿಕೆ ಎಷ್ಟು ಎನ್ನುವತ್ತ ಸಾಗುತ್ತದೆ. ವ್ಯಕ್ತಿ ತನ್ನ ಸುತ್ತ ಬೇಲಿಯನ್ನು ನಿರ್ಮಿಸಿಕೊಳ್ಳುತ್ತಾನೆ. ಇತರರ ವಿಚಾರ ಗೌಣವಾಗಿ ಅವರ ಭಾವನೆಯನ್ನು ನಿರ್ಲಕ್ಷಿಸತೊಡಗುತ್ತಾನೆ; ಇತರರ ಸೌಖ್ಯವನ್ನು ತನ್ನ ಸಂತೋಷಕ್ಕಾಗಿ ಬಲಿ ಕೊಡುತ್ತಾನೆ. ಇತರರನ್ನು ಹಿಡಿತದಲ್ಲಿರಿಸಿಕೊಳ್ಳುವ ಮಾರ್ಗವನ್ನು ಯೋಚಿಸುತ್ತಾನೆ. ಸಮಾಜದ ಇಡೀ ಒಂದು ವರ್ಗವು ಈ ಮನೋಭಾವಕ್ಕೆ ಬಲಿಯಾದಾಗ ಇತರರನ್ನು ಗುಲಾಮರನ್ನಾಗಿಸಲು ಕೆಲವು ವಿಶಿಷ್ಟ 'ಸಂಸ್ಥೆ'ಗಳನ್ನು, ನಂಬಿಕೆಗಳನ್ನು ಹುಟ್ಟುಹಾಕುತ್ತದೆ. ಇದನ್ನು ಧಿಕ್ಕರಿಸಿದವರನ್ನು ನಿರ್ನಾಮ ಮಾಡಲು ಯತ್ನಿಸುತ್ತದೆ. ಈ ಹಂತದಲ್ಲಿರುವ ವಿಜ್ಞಾನಿಯ ವರ್ತನೆ

ಶ್ರೀಶ ಉಡುಪ

ಬಲು ವಿಚಿತ್ರ. ವಿಜ್ಞಾನಿಯೆಂದು ಹೇಳಿಕೊಂಡೇ ಆತ ತಾನೇ, ಅಂದರೆ ತನ್ನ ಮನೋಭಾವದ ವರ್ಗವೇ, ಸೃಷ್ಟಿಸಿದ ಮೂಢನಂಬಿಕೆಗಳ ದಾಸನಾಗಿಬಿಟ್ಟಿರುತ್ತಾನೆ. ವಾಸ್ತವತೆಯನ್ನು ತ್ಯಜಿಸಿ ಭ್ರಮೆಯತ್ತ ಸೆಳೆಯಲ್ಪಡುತ್ತಾನೆ – ಸ್ವಾಭಿಮಾನ ಶೂನ್ಯನಾಗಿ!

* * *

''ಹೋಗಿ ಹೋಗಿ! ಏನು ಕೆಲಸ ನಿಮ್ಮೊಂದಿಗೆ  
ಶಾಂತಿಯುತ ಕವಿಗೆ?  
ಪಾಪಕೂಪದಲ್ಲಿ ನೀವು ಧೈರ್ಯದಿಂದ ಮುಳುಗಿರಿ;  
ಉಲ್ಲಾಸಗೊಳಿಸದು ನಿಮ್ಮನ್ನು ಲೈರ್ ವಾದ್ಯದ  
ಧ್ವನಿಯು!  
ಆತ್ಮಕ್ಕೆ ಅಸಹಾಯಕರಾಗಿರುವಿರಿ ನೀವು, ಶವ  
ಪೆಟ್ಟಿಗೆಯಂತೆ;  
ನಿಮ್ಮ ಮೌಢ್ಯಕ್ಕಾಗಿಯೂ ಕೇಡಿಗತನಕ್ಕಾಗಿಯೂ  
ಪಡೆದಿರಿ ನೀವು ಇದುವರೆಗೂ  
ಛಡಿ ಹೊಡೆತ, ಸೆರೆಮನೆ, ಚಿತ್ರಹಿಂಸೆಗಳ –  
ಇರುವವು ಇವು ನಿಮ್ಮೊಂದಿಗೆ ಚಿರಕಾಲ  
ಗುಲಾಮ ತಿಳಿಗೇಡಿಗಳೇ.''

ಇಲ್ಲಿನ ಕವಿ ಪುಷ್ಕಿನ್‌ರ 'ಕವಿ ಮತ್ತು ಜನಜಂಗುಳಿ'ಯ 'ಕವಿ' ಸಮಾಜದಿಂದ ವಿಮುಖನಾಗಿ ತನ್ನದೇ ಆದ ಲೋಕದಲ್ಲಿ ವಿಹರಿಸುತ್ತಿರುತ್ತಾನೆ. ಸಾಮಾನ್ಯ ಜನರು - ಪಾಪಕೂಪದಲ್ಲಿ ಮುಳುಗಿ, ಹಣವಂತರ ಸೇವೆಯನ್ನು ಮಾಡುತ್ತಾ, ಅವರು ಕೊಡುವ ಚಿತ್ರಹಿಂಸೆಗಳಿಂದ ನರಳುತ್ತಾ, ಕಷ್ಟ ಕಾರ್ಪಣ್ಯಗಳನ್ನು ಎದುರಿಸುತ್ತಾ, ಜೀವನವನ್ನು ಸವೆಸುತ್ತಿರ ಬೇಕು ಎನ್ನುತ್ತಾನೆ. ಇಲ್ಲಿ ಸಾಮಾನ್ಯ ಜನ ಜೀವನವನ್ನು ಆತ ಲಕ್ಷಿಸಿಲ್ಲ. ಸಮಾಜದಿಂದ ತನ್ನನ್ನು ಪ್ರತ್ಯೇಕಿಸಿಕೊಂಡಿದ್ದಾನೆ. ಇಲ್ಲಿ 'ಕಲೆಗಾಗಿ ಕಲೆ' ಎಂಬ ತತ್ವ ಉಜ್ವಲವಾಗಿ ನಿರೂಪಿತಗೊಂಡಿದೆ.

* * *

ಕಲೆಯ ಮೌಲ್ಯವು, ಸಾಮಾಜಿಕ ಸನ್ನಿವೇಶಕ್ಕೆ, ಬದುಕಿನ ವಾಸ್ತವತೆಗೆ ಅದರ ಸ್ಪಂದನದ ರೀತಿಯನ್ನು ಅವಲಂಬಿಸಿರುತ್ತದೆ. ಕಲೆಯು ಜೀವನವನ್ನು ಯಥಾವತ್ತಾಗಿ ಬಿಂಬಿಸುತ್ತದಷ್ಟೇ ಅಲ್ಲ; ಅದನ್ನು ವಿವರಿಸುತ್ತದೆ ಕೂಡ. ಕಲೆಗಳು ಬಹುವೇಳೆ ಜೀವನದ ಆಗುಹೋಗುಗಳ ಕುರಿತು ನಿರ್ಣಾಯಕವೆನಿಸಬಹುದಾದ ತೀರ್ಪು ನೀಡಬಲ್ಲವು.

ಸಮಾಜದ ಅತ್ಯುನ್ನತ ಹಾಗೂ ಅತ್ಯಂತ ಪವಿತ್ರ ಆಸಕ್ತಿಯೆಂದರೆ ತನ್ನ ಎಲ್ಲ ಸದಸ್ಯರಿಗೂ ಸಮಾನವಾಗಿ ಲಭ್ಯವಾಗುವ ತನ್ನ ಸ್ವಂತ ಸಂಕ್ಷೇಮ. ಈ ಸಂಕ್ಷೇಮ ಸಾಧನೆಯ ಮಾರ್ಗವೆಂದರೆ ಜಾಗೃತಿ; ವೈಚಾರಿಕ ಜಾಗೃತಿ. ಕಲೆಯು ವಿಜ್ಞಾನಕ್ಕೆ ಏನೂ ಕಮ್ಮಿಯಿಲ್ಲದಂತೆ ಇದಕ್ಕೆ ಉತ್ತೇಜನ ನೀಡಬಲ್ಲದು. ಈ ವಿಷಯದಲ್ಲಿ ವಿಜ್ಞಾನವೂ, ಕಲೆಯೂ ಒಂದೇ ಸಮನಾಗಿ ಅವಶ್ಯವಾದವುಗಳು. ಕಲೆಯು ಜೀವನದ ಕುರಿತು ಚಿಂತನೆ ನಡೆಸುವ ಮೂಲಕ ಮನುಷ್ಯನಲ್ಲಿ ಪ್ರಜ್ಞೆಯನ್ನು ವಿಕಾಸಗೊಳಿಸಬಲ್ಲುದು.

ರಷ್ಯನ್ ಕವಿ ನೆಕ್ರಾಸೋವ್‌ರ 'ಕವಿ ಮತ್ತು ಪೌರ' ಕವನದಲ್ಲಿ 'ಪೌರ'ನು 'ಕವಿ'ಗೆ ಈ ಮಾತುಗಳನ್ನು ಹೀಗೆ ಹೇಳುತ್ತಾನೆ.

''ಮತ್ತೆ ನೀನು, ಎಲೆ ಕವಿಯೆ, ದೈವಾನುಗ್ರಹೀತನೆ,  
ಸನಾತನ ಸತ್ಯವ ಸಾರಿ ಹೇಳುವವನೆ  
ನಂಬದಿರು, ಜನರೆಲ್ಲ ಪತಿತರಾಗಿಹರೆಂದು:  
ಸತ್ತಿಲ್ಲ ದೈವತ್ವ ಅವರಾತ್ಮಗಳಲಿ  
ಆಸಿಕರ ಹೃದಯದಿಂದೊಮ್ಮುವಾ ಕರೆಯು  
ತಲುಪುವುದು ಅವರ ಅಂತರಂಗವನ್ನು ಎಂದೆಂದೂ!  
ಆಗು ಪೌರ! ಸಲ್ಲಿಸು ಸೇವೆಯನು  
ಬಾಳು ಸಹಜೀವಿಗಳ ಸಂತೋಷಕಾಗಿ

ಇರಿಸು ಮುಡಿಪಾಗಿ ನಿನ್ನೆಲ್ಲ ಪ್ರತಿಭೆಯನು
ಸರ್ವವ್ಯಾಪಕವಾದ ಪ್ರೇಮ ಭಾವನೆಗೆ.''

ಕವಿಯೇನು ಸಾಮಾನ್ಯನಿಗಿಂತ ಬೇರೆಯವನಲ್ಲ. ಆತನು ಎಲ್ಲರೊಳಗೊಂದಾಗಿ ಬದುಕಬೇಕು. ಇತರರ ಕಷ್ಟಸುಖಗಳಿಗೆ ಸ್ಪಂದಿಸಬೇಕು. ತನ್ನ ಪ್ರತಿಭೆಯನ್ನು ವೈಯಕ್ತಿಕ ಲಾಭಕ್ಕಿಂತಲೂ ಹೆಚ್ಚಾಗಿ ಸಮಾಜದ ಉನ್ನತಿಗಾಗಿ ಬಳಸಬೇಕು :

''ಸಭ್ಯ ಕೊಲೆಗಡುಕರನ್ನು
ಕಾನೂನುಬದ್ಧ ದರೋಡೆಕೋರರನ್ನು
ಗೌರವಸ್ಥ ಲಂಚಕೋರರನ್ನು
ಮೆಚ್ಚಿ ಎಲ್ಲರೂ ತಲೆಬಾಗುವಾಗ
ನನ್ನ ಕವಿತೆ ಮರುಗುತ್ತದೆ.
ಸನ್ಮಾನದ ಉನ್ಮಾದಕ್ಕೆ
ಸತ್ಯವಂತಿಕೆಯ ಪೊಳ್ಳು ಜಾಹಿರಾತುಗಳಿಗೆ
ಹಣದ ಥೈಲಿಯ ಸದ್ದುಗಳಿಗೆ
ಎಲ್ಲರೂ ದನಿಗೂಡಿಸಿದಾಗ
ನನ್ನ ಕವಿತೆ ನಿಶ್ಶಬ್ದವಾಗುತ್ತದೆ''
(ಡಾ॥ ಸಿದ್ಧಲಿಂಗಯ್ಯ : 'ಕನವರಿಕೆ')

ಈ ರೀತಿ, ಸಾಮಾಜಿಕ ಅನಿಷ್ಟಗಳಿಗೆ ಸಮಾಜ ಕೈಗೂಡಿಸಿದಾಗ ತಾನು ಎಲ್ಲರೊಳಗೊಂದಾಗದೇ ವಿವೇಕ ಯುತವಾಗಿರುತ್ತದೆ.

''ಕೊಲೆಯ ಹಿಂದಿನ ರಾತ್ರಿ ಸೂರ್ಯಚಂದ್ರರ ಹಿಡಿದು
ಹಣದ ಪೆಟ್ಟಿಗೆಯಲ್ಲಿ ಕೂಡಿಟ್ಟರು
ಭಾರತದ ಬಾವುಟವ ಸುತ್ತಿ ಬಾಯಿಗೆ ತುರುಕಿ
ಕಿತ್ತುಕೊಂಡರು ಅವಳ ಮಾತುಗಳನು......

''ಅವಳ ಬಾಳಿನ ಬಳ್ಳಿ ಉಕ್ಕಿನಪ್ಪುಗೆಯಲ್ಲಿ
ರಕ್ತವನು ಬಸಿಬಸಿದು ನೆಲಕುರುಳಿತು
ಕತ್ತಲೆಯ ರಾಕ್ಷಸರು ಪಣಕಟ್ಟಿಯಾಡಿದರು
ಕಣ್ಣಿನುಂಡೆಗಳಲ್ಲಿ ಗೋಲಿಯಾಟ''
(ಡಾ॥ ಸಿದ್ಧಲಿಂಗಯ್ಯ : ಕಂಡೆ ನನ್ನವಳ ಒಂದು ದಿವಸ)

''ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಟಾಟಾ ಬಿರ್ಲಾ ಜೋಬಿಗೆ ಬಂತು/ಜನಗಳ ತಿನ್ನುವ
ಬಾಯಿಗೆ ಬಂತು
ಕೋಟ್ಯಾಧೀಶನ ಕೋಣೆಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
..........
.........
ಪೋಲೀಸರ ಬೂಟಿಗೆ ಬಂತು
ಮಾಲೀಕರ ಚಾಟಿಗೆ ಬಂತು
ಬಂದೂಕದ ಗುಂಡಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಪಾರ್ಲಿಮೆಂಟಿನ ಕುರ್ಚಿಯ ಮೇಲೆ
ವರ್ಷಗಟ್ಟಲೆ ಚರ್ಚೆಗೆ ಕೂತು
ಬಡವರ ಬೆವರು ರಕ್ತವ ಕುಡಿದು
ಏಳಲೆ ಇಲ್ಲ ಸ್ವಾತಂತ್ರ್ಯ
ನಲವತ್ತೇಳರ ಸ್ವಾತಂತ್ರ್ಯ
(ಡಾ॥ ಸಿದ್ಧಲಿಂಗಯ್ಯ : 'ನಲವತ್ತೇಳರ ಸ್ವಾತಂತ್ರ್ಯ')

ಈ ರೀತಿ ಬದುಕಿನ ಕಟು ವಾಸ್ತವವನ್ನು, ಕ್ರೂರ ವ್ಯಂಗ್ಯ ವನ್ನು, ಅವ್ಯಾಹತವಾಗಿ ನಡೆಯುವ ಶೋಷಣೆಯನ್ನು ಹಸಿ ಹಸಿಯಾಗಿ ನಮ್ಮೆದುರು ಬಿಚ್ಚಿಡಬಲ್ಲಷ್ಟು ಶಕ್ತವಾಗಿದೆ ಕಲೆ.

''ಗುಡಿಸಲುಗಳು ಗುಡುಗುತಿವೆ ಬಂಗಲೆಗಳು ನಡುಗುತಿವೆ
ಎಲ್ಲೆಲ್ಲಿಯು ಮೊಳಗುತ್ತಿದೆ ಕ್ರಾಂತಿಯ ಗಾನ
ಮತಗಳು ಹತವಾಗುತಿವೆ ಜನ ಪಥಗಳು ಮೂಡುತಿವೆ
ಅಸಮಾನತೆ ಆಗುತ್ತಿದೆ ಕ್ರಾಂತಿಗೆ ಸೋಪಾನ
(ಡಾ॥ ಸಿದ್ಧಲಿಂಗಯ್ಯ : 'ಕ್ರಾಂತಿಪದ')

ಹೀಗೆ ಆಶಾವಾದಿಯೂ ಆಗಿರುತ್ತದೆ.

ಗೋರ್ಕಿಯವರು 'ಓದುಗ'ದಲ್ಲಿ ಓದುಗನಿಂದ ಹೇಳಿಸುವಂತೆ – ''ತನ್ನನ್ನು ತಾನು ಅರಿತುಕೊಳ್ಳಲು ಮಾನವನಿಗೆ ನೆರವಾಗುವುದು, ಅವನ ಆತ್ಮವಿಶ್ವಾಸವನ್ನು ದೃಢವಾಗಿಸುವುದು, ಸತ್ಯಾನ್ವೇಷಣೆಯ ಅವನ ಪ್ರಯತ್ನಗಳನ್ನು ಬೆಂಬಲಿಸುವುದು, ಜನರಲ್ಲಿ ಅಡಗಿರುವ ಒಳ್ಳೆಯತನ ಹೊರಬರುವಂತೆ ಮಾಡುವುದು ಹಾಗೂ ಕೆಟ್ಟತನವನ್ನು ಬುಡಸಹಿತ ಕಿತ್ತೊಗೆಯುವುದು, ಜನರ ಹೃದಯದಲ್ಲಿ ನಾಚಿಕೆ, ಕೋಪ ಹಾಗೂ ಸಾಹಸಗಳ ಕಿಡಿ ಹತ್ತಿಕೊಂಡು ಉರಿಯುವಂತೆ ಮಾಡುವುದು, ಉದಾತ್ತ ಧ್ಯೇಯಗಳಿಗಾಗಿ ಶಕ್ತಿಯನ್ನು ಒಗ್ಗೂಡಿಸಿಕೊಳ್ಳಲು ಅವರಿಗೆ ನೆರವು ನೀಡುವುದು ಹಾಗೂ ಸೌಂದರ್ಯದ ಪವಿತ್ರ ಭಾವನೆಯಿಂದ ಅವರ ಬಾಳು ಶುಭವಾಗುವಂತೆ ಮಾಡುವುದು'' – ಇವೇ ಕಲೆಯ ಉದ್ದೇಶಗಳು.

*  *  *

ಒಂದು ಕಲೆಯಲ್ಲಿ ಸಾತತ್ಯವನ್ನು ಪರಂಪರೆ ರೂಪಿಸುತ್ತದೆ ಹಾಗೂ ಒಂದು ಪರಂಪರೆಯನ್ನು ಬೆಳೆಸುವುದು ಕಲಾಚರಿತ್ರೆ. ಇಂದಿನ ದಿನಗಳಲ್ಲಿ 'ಪರಂಪರೆ' ಹಾಗೂ 'ಸಂಪ್ರದಾಯ' ಶಬ್ದಗಳು ಬಹುವಾಗಿ ಚರ್ಚಿತವಾಗುತ್ತಿರುವುದರಿಂದ ಇವುಗಳನ್ನು ಇಲ್ಲಿ ಆದಷ್ಟು ಸಂಕ್ಷಿಪ್ತವಾಗಿ ಸ್ಪಷ್ಟಪಡಿಸುವುದು ತುರ್ತು ಅಗತ್ಯವಾಗಿದೆ ಎಂದು ಭಾವಿಸುತ್ತೇನೆ. ಸಾಹಿತ್ಯವೂ ಸೇರಿದಂತೆ ಎಲ್ಲ ಕಲೆಗಳೂ ಒಳಗೊಂಡಿರುವ ಹಾಗೂ ಕಾಲದಿಂದ ಕಾಲಕ್ಕೆ ಬದಲಾಗುವ ಸಂಪ್ರದಾಯಗಳು ಮೂರ್ತಸ್ವರೂಪದವುಗಳು. ಅವುಗಳನ್ನು ವಸ್ತುನಿಷ್ಠವಾಗಿ ಕಂಡುಕೊಳ್ಳುವುದು ಸಾಧ್ಯ. ಆದರೆ ಸಂಪ್ರದಾಯಗಳಿಗಿಂತ ಭಿನ್ನವಾದ ಪರಂಪರೆ ಒಂದು ಅಮೂರ್ತ ಪರಿಕಲ್ಪನೆ. ಪರಂಪರೆ ಒಂದು ನಿರ್ದಿಷ್ಟವಾದ ಕಾಲಘಟ್ಟದಲ್ಲಿ ಸಮುದಾಯವೊಂದು ತನ್ನ ತತ್ಕಾಲದ ಅವಶ್ಯಕತೆ, ಒತ್ತಡಗಳಿಗನುಸಾರವಾಗಿ ಕಟ್ಟಿಕೊಳ್ಳುವ ಒಂದು ಅಮೂರ್ತ ರಚನೆ ಎಂದು ಸಿ. ಎನ್. ರಾಮಚಂದ್ರನ್ ಅಭಿಪ್ರಾಯಪಡುತ್ತಾರೆ.

ಆದರೆ ಯಾವುದೇ ಒಂದು ಪರಂಪರೆಯನ್ನು ಒಮ್ಮಿಂದೊಮ್ಮೆಗೆ ಕಟ್ಟಿಕೊಳ್ಳುವುದು ಅಸಾಧ್ಯ. ಅದೇ ರೀತಿ ಪರಂಪರೆಯನ್ನು ಯಾವುದೇ ಬದಲಾವಣೆ ಮಾಡದೇ, ಅದರ ಮೂಲ ಸ್ವರೂಪದಲ್ಲಿ ಉಳಿಸಬೇಕೆನ್ನುವುದೂ ಅರ್ಥಹೀನವಾದ ಮಾತು. ಆಂಗ್ಲ ಸಾಹಿತಿ, ವಿಮರ್ಶಕ ಎಲಿಯಟ್ ಪರಂಪರೆಯನ್ನು ಏಕ ಮುಖವಾಗಿ ಗ್ರಹಿಸುತ್ತಾನೆ. ಶ್ರೇಷ್ಠ ಕಲೆಗಳು ಸಮಾಜದ ಅಲ್ಪಸಂಖ್ಯಾತ ಉಚ್ಚ ವರ್ಗದವರಿಗೆ ಮಾತ್ರ ಲಭ್ಯವೇ ಹೊರತು ಜನ ಸಾಮಾನ್ಯರಿಗಿಲ್ಲ ಎಂಬ ನಿಲುವು ಅವನದು.

ಇಲ್ಲಿ ನಮಗೆ ರಷ್ಯನ್ ಮಹಾಕವಿ ಪುಷ್ಕಿನ್‌ರ ಮಾತು ನೆನಪಾಗುತ್ತದೆ.

''ಹೋಗಿ ಹೋಗಿ ! ಏನು ಕೆಲಸ ನಿಮ್ಮೊಂದಿಗೆ
ಶಾಂತಿಯುತ ಕವಿಗೆ ?''

– ಎಂಬಲ್ಲಿ ಆತ ತಾಳುವುದು ಕಲೆಯು ಜನಸಾಮಾನ್ಯರಿಗಲ್ಲ ಎಂಬ ನಿಲುವನ್ನೇ. ಅಂದರೆ ಅವರು ಪ್ರತಿಪಾದಿಸುವುದು ಶುದ್ಧಕಲೆಯ ನಿಲುವು. ಆದರೆ ೧೮೨೫ರ 'ಡಿಸೆಂಬ್ರಿಸ್ಟ್'ರ ಕ್ರಾಂತಿಯ ಮೊದಲು ಆತ ಈ ರೀತಿಯ ಅಭಿಪ್ರಾಯವನ್ನು ಹೊಂದಿರಲಿಲ್ಲ. ಜನರತ್ತ ಕಲೆಯನ್ನು ಒಯ್ಯುವ ಅಭಿಪ್ರಾಯವನ್ನು ಹೊಂದಿದ್ದರು. ಜನರ ಕಷ್ಟಗಳು ಅವರ ಕವಿತೆಯಲ್ಲಿ ಪ್ರತಿಧ್ವನಿಸುತ್ತಿದ್ದವು. ಅವರ ಈ ಮನೋಭಾವ ಈ ಕೆಳಗಿನ 'ಸ್ವಾತಂತ್ರ್ಯ' ಎಂಬ ಕವಿತೆಯಲ್ಲಿ ವ್ಯಕ್ತವಾಗುತ್ತದೆ.

''ಅಯ್ಯೋ, ಎತ್ತ ದೃಷ್ಟಿ ಹರಿಸಿದರೂ,
ಎಲ್ಲೆಲ್ಲೂ ಛಡಿ ಹೊಡೆತ, ಎಲ್ಲೆಲ್ಲೂ ಸಂಕೋಲೆ,
ವಿನಾಶಕರ, ಅಪಮಾನಕರ ಕಾನೂನುಗಳು
ದಾಸ್ಯ, ರೋಗ ರುಜಿನ, ಕಣ್ಣೀರು;
ಎಲ್ಲೆಲ್ಲೂ ಅನ್ಯಾಯದ ಅಧಿಕಾರ

ಪೂರ್ವಾಗ್ರಹಗಳ ದಟ್ಟ ನೆರಳು.....''

–ಹಾಗಾದರೆ 'ಕಲೆಗಾಗಿ ಕಲೆ' ಅಥವಾ 'ಜನರಿಗಾಗಿ ಕಲೆ' ಇತ್ಯಾದಿ ಸಿದ್ಧಾಂತಗಳು ಯಾಕೆ, ಯಾವಾಗ ಹುಟ್ಟಿಕೊಳ್ಳುತ್ತವೆ ? ಅವುಗಳು ಉದ್ಭವಿಸಲು ಕಾರಣವಾಗುವ ಸಾಮಾಜಿಕ ಸ್ಥಿತಿಗಳು, ಅವಶ್ಯಕತೆಗಳು ಅಥವಾ ಒತ್ತಡಗಳು ಯಾವುವು ?

ಇದನ್ನು ಸಂಕ್ಷಿಪ್ತವಾಗಿ ಈ ರೀತಿ ತೀರ್ಮಾನಿಸಬಹುದು.

ಎಲ್ಲಿ ಕಲಾವಿದನು ತನ್ನ ಸಾಮಾಜಿಕ ಪರಿಸರದೊಂದಿಗೆ ನಿರಾಶಾದಾಯಕ ರೀತಿಯಲ್ಲಿ ವಿಸಂಗತನಾಗುತ್ತಾನೋ ಅಲ್ಲಿ ಕಲೆಯು ಶುದ್ಧ ಕಲೆಯಾಗಿ ಹೊರಹೊಮ್ಮುತ್ತದೆ. ಯಾವಾಗ ಕಲಾಕಾರನು ಜನರತ್ತ ಸ್ಪಂದಿಸಲು ಅಸಮರ್ಥನಾಗುತ್ತಾನೋ, ಆತನ ಮಿಡಿತವು ಕಲೆಯಾಗುವುದನ್ನು ಯಾವುದಾದರೂ ಬಾಹ್ಯ ಅಥವಾ ಆಂತರಿಕ ಒತ್ತಡ ಪ್ರತಿಬಂಧಿಸುತ್ತದೋ ಆಗ ಕಲೆಗಾಗಿ ಕಲೆ ಎಂಬ ಸಿದ್ಧಾಂತದಲ್ಲಿ ನಂಬಿಕೆ ಹುಟ್ಟಿಕೊಳ್ಳುತ್ತದೆ.

ಸೃಜನಾತ್ಮಕ ಕಲೆಯಲ್ಲಿ ಹೆಚ್ಚುಕಮ್ಮಿ ಇಡೀ ಸಮಾಜ ಕ್ರಿಯಾಶೀಲತೆಯನ್ನು ಸಾಧಿಸಿದಾಗ, ಸಮಾಜದಲ್ಲಿ ಪರಸ್ಪರ ಸಹಾನುಭೂತಿ ಉಂಟಾದಾಗ ಕಲೆಯ ಉಪಯುಕ್ತತೆಯ ಸಿದ್ಧಾಂತವು ಉದ್ಭವಿಸುತ್ತದೆ. ವಿಮರ್ಶಕರಿಗಾಗಿ ಕಲಾವಿದ ಕಲೆಯನ್ನು ಮೀಸಲಿಡದೆ ಕಲೆಯ ಗಮನವನ್ನು ಜನರತ್ತ ಕೇಂದ್ರೀಕರಿಸುವಂತಾಗುತ್ತದೆ.

* * *

ಶುದ್ಧ ಕಲೆಯು ಜನರೊಂದಿಗೆ ಸಂಪರ್ಕವನ್ನು ಕಳೆದುಕೊಳ್ಳುತ್ತದೆ. ಜನಸಾಮಾನ್ಯರೊಂದಿಗೆ ಸಂಪರ್ಕದ ಕೊಂಡಿಯನ್ನು ಮುರಿದುಕೊಂಡ ವ್ಯಕ್ತಿಯೊಬ್ಬ ಜನಪರವಾಗಿ ಇರುತ್ತಾನೆಂದು ಭಾವಿಸುವುದು ತಪ್ಪಾದೀತು. 'ಕಲೆಗಾಗಿ ಕಲೆ' ಎಂಬ ಪೂರ್ವಾಗ್ರಹ ಪೀಡೆಗೆ ಒಳಗಾಗಿ ಬದುಕಿನ ಕ್ರೂರ ವಾಸ್ತವವನ್ನು ಗಣಿಸದ, ಸ್ಥಾಪಿತ ಹಿತಾಸಕ್ತಿಯ ರಕ್ಷಣೆ, ಸ್ವಾರ್ಥ ಜನಪರವಲ್ಲದ ನಿಲುವು, ಉಚ್ಚ ವರ್ಗದ ಪೋಷಣೆಯಲ್ಲಿ ನಿರತನಾಗಿ ಅದರ ಅಗತ್ಯಗಳನ್ನು ಪೂರೈಸುವ ದಲ್ಲಾಳಿಯಂತೆ ವರ್ತಿಸುವ ಕಲಾವಿದನಲ್ಲಿ ಹೇಗೆ ತಾನೇ ಜನಪರ ಪ್ರಜ್ಞೆಯನ್ನು ಅರಸಬಹುದು ? ಸಾಮಾನ್ಯರ ನಡುವಿನ ಒಳ್ಳೆಯ-ಕೆಟ್ಟ ವಿಚಾರಗಳ ಬಗೆಗೆ ಸಂವೇದನಾ ಶಕ್ತಿಯನ್ನು ಆತ ಕಡಿದುಕೊಳ್ಳುತ್ತಾನೆ. ತಾನು ಕಳೆದುಕೊಂಡ ವಿಚಿತ್ರ ಸುಂದರ ಜಗತ್ತನ್ನು ಮನುಷ್ಯರೊಡನಾಟದ ಮೂಲಕ ದಕ್ಕಿಸಿಕೊಳ್ಳಲು ಸಮರ್ಥನಲ್ಲದ ವ್ಯಕ್ತಿಯೊಬ್ಬ ಮಹದದ್ಭುತಕ್ಕಾಗಿ, ಪವಾಡಕ್ಕಾಗಿ – ಈ ಜಗತ್ತಿನಲ್ಲಿ ಇಲ್ಲದೇ ಇರುವ ವಸ್ತುವಿಗಾಗಿ – ಹಂಬಲಿಸುವುದನ್ನು ಬಿಟ್ಟು ಬೇರೇನೂ ಮಾಡಲಾರ. ಏಕೆಂದರೆ ಈ ಜಗತ್ತಿನಲ್ಲಿ ಇರುವ ಯಾವುದೂ ಆತನಲ್ಲಿ ಆಸಕ್ತಿಯನ್ನು ಮೂಡಿಸದು. ಈ ಜಗತ್ತಿನಲ್ಲಿಲ್ಲದಿರುವ ಯಾವುದೋ ವಸ್ತುವಿಗಾಗಿ ಹಂಬಲಿಸುವಂತಹ ಕಲೆಯನ್ನು ಉತ್ಪಾದಿಸುವುದು ಒಂದು ಬಗೆಯ 'ರಕ್ತಹೀನತೆ' ಎನ್ನಬಹುದೇನೋ ?! ಈ ಕಲೆಯು ಸಾಮಾಜಿಕ ಸಂಬಂಧಗಳು ಶೈಥಿಲ್ಯ ಹೊಂದಿರುವುದರ, ಇಡೀ ವ್ಯವಸ್ಥೆಯು ಅವನತಿಗೊಂಡುದರ ಲಕ್ಷಣವಾಗಿದೆ. ಆದ್ದರಿಂದ ಇದನ್ನು ಜಿ. ವಿ. ಪ್ಲೆಖಾನೋವ್ 'ಕಲೆ ಮತ್ತು ಸಾಮಾಜಿಕ ಜೀವನ'ದಲ್ಲಿ 'ಅವನತಿಯ ಕಲೆ' ಎನ್ನುತ್ತಾರೆ.

'ಅವನತಿಯ ಕಲಾವಿದ' ತಾನು ಈ ಜಗತ್ತಿನಲ್ಲಿ ಇರದಿರುವ ವಸ್ತುವನ್ನು ಆವಿಷ್ಕರಿಸಲು 'ಚಿಂತನೆ'ಯಲ್ಲಿ ತೊಡಗಿರುವಾಗ ಸಾಮಾನ್ಯರು ತನ್ನ ಸೇವೆ ಮಾಡುವುದು ನ್ಯಾಯವಾದುದೆಂದು ಭಾವಿಸುತ್ತಾನೆ. ತನ್ನನ್ನು 'ಅತಿಮಾನವ'ರ ಆದರ್ಶಕ್ಕೆ ಸಮೀಕರಿಸಿಕೊಳ್ಳುತ್ತಾನೆ. ಹಿತಾಸಕ್ತಿಗಳಿಂದ ಪ್ರೇರಿತರಾದ ವ್ಯಕ್ತಿಗಳು ಈ ಅತಿಮಾನವ ಪ್ರತಿಭಾವಂತನು ತನ್ನ ಇಚ್ಛಾಶಕ್ತಿಯಿಂದ ಆಗಲೇ ಮುರಿದುಬೀಳುತ್ತಿರುವ ಸಮಾಜ ವಿಭಜನೆಯ ಮಹಾ ಸ್ತಂಭಗಳನ್ನು ಎತ್ತಿಹಿಡಿಯುತ್ತಾನೆಂದು ಭ್ರಮಿಸುತ್ತಾರೆ. ತಾವೂ ಆತನ ಅನುಯಾಯಿಗಳೆಂದು ಹೇಳಿಕೊಂಡು 'ಉದಾತ್ತ ಸುಖಾನುಭವ'ಗಳಿಗೆ ತಮ್ಮನ್ನು ಮೀಸಲಿರಿಸಿಕೊಂಡಾಗ ತಮಗಾಗಿ ಕೆಲಸ ಮಾಡುವಂತೆ ಸಾಮಾನ್ಯ ವರ್ಗವನ್ನು ಒತ್ತಾಯಿಸುವ ಒಂದು ವ್ಯವಸ್ಥೆ ಏರ್ಪಡಬೇಕೆಂದು ಕರೆಕೊಡುತ್ತಾರೆ. ಇದು ಸಂಕುಚಿತ ಮನೋವೃತ್ತಿಯ ಹೊರತಾಗಿ ಇನ್ನೇನನ್ನು ಪ್ರತಿಬಿಂಬಿಸುತ್ತದೆ ?

ಆದರೆ ಹೃದಯವೈಶಾಲ್ಯವಿಲ್ಲದ ವ್ಯಕ್ತಿ ಕಲಾವಿದನಾಗಲಾರ, ಆತನ ಕೃತಿಯು ನಿಜವಾದ ಅರ್ಥದಲ್ಲಿ ಕಲೆಯಾಗಲಾರದು, ಅದೊಂದು ಹಣಗಳಿಕೆಯ ಮಾರ್ಗವಾಗಬಹುದಷ್ಟೆ. ಹೀಗಾಗಿ ಇಂತಹ ಕಲಾಕಾರರು ಕಲಾಕ್ಷೇತ್ರದಲ್ಲಿನ ಚಲನೆಯೆಂದು ಏನನ್ನು ಹೇಳುತ್ತಾರೋ ಅದು ವಾಸ್ತವವಾಗಿ ಕಲೆ ಹಾಗೂ ಹಣದ ನಡುವೆ ಏರ್ಪಟ್ಟಿರುವ ಸಂಬಂಧದ ಏರಿಳಿತ. ಇಲ್ಲಿ ಪ್ರತಿಭೆಯ ಸಟ್ಟಾ ವ್ಯಾಪಾರವೂ ಜರುಗುತ್ತದೆ. ಪ್ರತಿಭೆಗಳ ವ್ಯಾಪಾರ ನವ್ಯತೆಗಾಗಿ ಇರುವ ಹಂಬಲಿಕೆಯಿಂದಲ್ಲ; ಅವರ ಸ್ವಂತ ಅಹಮಿಕೆಯ ಬಗೆಗಿನ ಪ್ರೀತಿಯಿಂದಾಗಿ. ಆದರೆ ಇಂತಹ ಪ್ರೀತಿ ಕಲಾವಿದನನ್ನು ಸ್ಫೂರ್ತಿಗೊಳಿಸದೇ ಸ್ವಂತ ಪ್ರಯೋಜನದ ದೃಷ್ಟಿಯಿಂದಲೇ ನೋಡುವಂತೆ ಮಾಡುತ್ತದೆ. ಹಣವು ಕಲೆಗೆ ಎಷ್ಟೊಂದು ನಿಕಟವಾಗಿ ಇರುತ್ತದೆಂದರೆ ವಿಮರ್ಶೆಯು ನೆಪಮಾತ್ರಕ್ಕಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಉತ್ತಮ ವಿಮರ್ಶಕರೂ ಸಹ ಏನನ್ನು ಹೇಳಬೇಕೆಂದುಕೊಳ್ಳುತ್ತಾರೋ, ಅದನ್ನು ಹೇಳಲು ಅಸಮರ್ಥರಾಗುತ್ತಾರೆ. ಸಂದರ್ಭಕ್ಕೆ ತಕ್ಕಂತೆ ಜಾರಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಏಕೆಂದರೆ ಅವರೂ ಸಹ ಕಲೆಯಿಂದಾಗಿಯೇ ಸಮಾಜದಲ್ಲಿ ಸ್ಥಾನಮಾನವನ್ನು ಪಡೆದಿರುತ್ತಾರೆ. ಹೀಗಾಗಿ ಕಲೆ ವ್ಯಾವಹಾರಿಕ ಸ್ವರೂಪವನ್ನು ಪಡೆಯುತ್ತದೆ.

ಇಂದಿನ ಯಾಂತ್ರಿಕ ಯುಗದಲ್ಲಿ ಎಲ್ಲವೂ ಯಾಂತ್ರಿಕವಾಗುತ್ತಾ, ವ್ಯಾವಹಾರಿಕವಾಗುತ್ತಾ ಇರುವಾಗ ವ್ಯಕ್ತಿಯಲ್ಲಿ ಭಾವನೆಗಳು ನಶಿಸದಂತೆ ತಡೆಹಿಡಿಯುವ ಕೆಲಸವನ್ನು ಕಲೆ ಮಾಡುತ್ತಿದೆಯೆಂದರೆ ತಪ್ಪಾಗಲಾರದು. ಭ್ರಮೆಯನ್ನು ಬೆನ್ನಟ್ಟುವ ವ್ಯಕ್ತಿ ಹೇಗೆ ನಿಷ್ಪ್ರಯೋಜಕನಾಗುತ್ತಾನೊ, ಭಾವನಾಹೀನನೂ ಹಾಗೆಯೇ ಕಟುಕನಾಗುತ್ತಾನೆ. ಇಂದು ನಡೆಯುತ್ತಿರುವ ಸಾಮಾಜಿಕ ಅನ್ಯಾಯಗಳಿಗೆ ಇಲ್ಲಿ ಕಾರಣವನ್ನು ಕಾಣಬಹುದು. ಹಣದ ಹುಚ್ಚು, ವ್ಯಕ್ತಿಯನ್ನು ವಿವೇಚನಾರಹಿತನನ್ನಾಗಿಸಬಲ್ಲದು. ಇಲ್ಲಿ ಹೆಚ್ಚಾಗಿ ಕಂಡುಬರುವುದು ಎಲ್ಲವನ್ನೂ ತಕ್ಕಡಿಯಲ್ಲಿಟ್ಟು ತೂಗಿ ನೋಡುವ ಪ್ರವೃತ್ತಿ. ಅದೂ ಸಮತೋಲನ ತಪ್ಪಿದ ತಕ್ಕಡಿಯಲ್ಲಿ. ಈ ಸಮತೋಲನವನ್ನು ನಾವು ದಿನನಿತ್ಯದ ಆಗುಹೋಗುಗಳಿಗೆ ಸ್ಪಂದಿಸುವ ಕಲೆಯಲ್ಲಿ ಕಾಣಬಹುದು.

ಈ ರೀತಿಯಾಗಿ 'ಕಲೆಗಾಗಿ ಕಲೆ' ಎನ್ನುವುದು 'ಹಣಕ್ಕಾಗಿ ಕಲೆ' ಎಂದು ಪರಿವರ್ತಿತವಾಗಿ ಅವಾಂತರಕಾರಿಯಾಗಿ ಪರಿಣಮಿಸುವುದನ್ನು ಕಾಣಬಹುದು. ಮಾರ್ಕ್ಸ್‌ರು ಇದನ್ನು ಹೀಗೆ ಹೇಳುತ್ತಾರೆ:

''ಮಧ್ಯಯುಗದಲ್ಲಿದ್ದಂತೆ ಕೇಳಿಕೆಗೂ ಮೀರಿ ಉತ್ಪಾದನೆಯಾಗಿ ಈ ಹೆಚ್ಚಿನ ಉತ್ಪನ್ನಗಳನ್ನಷ್ಟೆ ವಿನಿಮಯ ಮಾಡಿಕೊಳ್ಳುವ ಕಾಲವೊಂದಿತ್ತು :

''ಇದಲ್ಲದೆ ಇನ್ನೂ ಒಂದು ಕಾಲವಿತ್ತು, ಆಗ ಬಳಕೆಗೆ ಮೀರಿದುದಷ್ಟೆ ಅಲ್ಲ, ಎಲ್ಲ ಉತ್ಪನ್ನಗಳೂ ಎಲ್ಲ ಕೈಗಾರಿಕಾ ಜೀವನವೂ ವಾಣಿಜ್ಯ ಕ್ಷೇತ್ರಕ್ಕೆ ಹೋದವು. ಇಡೀ ಉತ್ಪಾದನೆಯೇ ವಿನಿಮಯದ ಮೇಲೆ ಅವಲಂಬಿಸಿರುವಂತಾಯಿತು....

''ಕೊನೆಗೆ ಮತ್ತೊಂದು ಕಾಲ ಬಂದಿತು. ಆಗ ಜನ ಯಾವುದನ್ನು ಮಾರುಕಟ್ಟೆಗೆ ತರಲು ಸಾಧ್ಯವಿಲ್ಲವೆಂದು ಪರಿಗಣಿಸಿದ್ದರೋ ಅವೆಲ್ಲವೂ ವಿನಿಮಯದ, ಕ್ರಯ ವಿಕ್ರಯದ ವಸ್ತುಗಳಾದವು; ಪರಭಾರೆ ಮಾಡಲು ಸಾಧ್ಯವಾದ ವಸ್ತುಗಳಾದವು. ಇದು ಯಾವ ಕಾಲವೆಂದರೆ, ಇದುವರೆಗೂ ಯಾವುದನ್ನು ಕೇವಲ ಅರುಹಲಾಗುತ್ತಿದ್ದಿತೋ, ಆದರೆ ಎಂದೂ ವಿನಿಮಯ ಮಾಡಿಕೊಳ್ಳಲಾಗುತ್ತಿರಲಿಲ್ಲವೋ; ಯಾವುದನ್ನು ಪಡೆದುಕೊಳ್ಳಲಾಗುತ್ತಿದ್ದಿತೋ, ಆದರೆ ಕೊಳ್ಳಲಾಗುತ್ತಿರಲಿಲ್ಲವೋ; ಯಾವುದನ್ನು ನೀಡಲಾಗುತ್ತಿದ್ದಿತೋ, ಆದರೆ ಮಾರಲಾಗುತ್ತಿರಲಿಲ್ಲವೋ, ಅವೆಲ್ಲ – ಸದ್ಗುಣ, ಪ್ರೀತಿ, ಮನೋ ನಂಬಿಕೆ, ಜ್ಞಾನ, ಅಂತಸ್ಸಾಕ್ಷಿ ಇತ್ಯಾದಿಗಳೆಲ್ಲ – ಸ್ವಲ್ಪದರಲ್ಲಿ ಪ್ರತಿಯೊಂದೂ ವಾಣಿಜ್ಯೀಕರಣಗೊಳ್ಳುತ್ತಿರುವ ಕಾಲ. ಇದು ಸಾರ್ವತ್ರಿಕ ಭ್ರಷ್ಟಾಚಾರದ, ಸಾರ್ವತ್ರಿಕ ಲಂಚಕೋರತನದ ಕಾಲ; ಅಥವಾ ರಾಜಕೀಯ ಅರ್ಥಶಾಸ್ತ್ರದ ಮಾತುಗಳಲ್ಲಿ ಹೇಳುವುದಾದರೆ ಇದು ನೈತಿಕವಾದ ಅಥವಾ ಭೌತಿಕವಾದ ಪ್ರತಿಯೊಂದು ವಸ್ತುವೂ ವ್ಯಾಪಾರದ ಮೌಲ್ಯವಾದ ಕಾಲ. ಪ್ರತಿಯೊಂದು ವಸ್ತುವನ್ನೂ ಅದಕ್ಕೆ ಸರಿಯಾದ ಮೌಲ್ಯ ಎಷ್ಟೆಂದು ನಿರ್ಧರಿಸಲು ಮಾರುಕಟ್ಟೆಗೆ ತಂದ ಕಾಲ.'' (ತತ್ವಜ್ಞಾನದ ದಾರಿದ್ರ್ಯತೆ)

ಮ್ಯಾಕ್ಸಿಂ ಗೋರ್ಕಿಯವರ 'ಮುದುಕಿ ಇಜೆರ್ಗಿಲ್' ಕಥೆಯ 'ಲಾರ್‍ರ' ಹಾಗೂ 'ದಾಂಕೊ' ಪಾತ್ರಗಳು ಈ ಎರಡು ಮನಸ್ಥಿತಿಯನ್ನು ಮನಮುಟ್ಟುವಂತೆ ತಿಳಿಸುತ್ತವೆ.

ಶುದ್ಧಕಲೆಯು ಸೌಂದರ್ಯಾಭಿವ್ಯಕ್ತಿಗೆ ಮಹತ್ವ ನೀಡಿದರೆ ಸಾಮಾಜಿಕ ಜವಾಬ್ದಾರಿಗಳನ್ನು ವಹಿಸಿಕೊಂಡಿರುವ 'ಜನರತ್ತ ಕಲೆ'ಯು ಸಾಮಾಜಿಕ ವಸ್ತುನಿಷ್ಠತೆಯನ್ನು ಕಲಾತ್ಮಕ ರೀತಿಯಲ್ಲಿ ಪ್ರತಿಬಿಂಬಿಸುತ್ತದೆ.

* * *

ಅಮೆರಿಕದ ಖ್ಯಾತ ಕಲಾವಿಮರ್ಶಕ ಲೀ ಬ್ಯಾಕ್ಸಂಡಾಲ್ 'ಸಾಹಿತ್ಯ ಮತ್ತು ವಿಚಾರಗಳು' ಎಂಬ ಲೇಖನವನ್ನು ಆರಂಭಿಸುವುದು ಹೀಗೆ :

**ಪ್ರಶ್ನೆ :** ಜನಾಂಗೀಯ, ಕಾಮುಕ, ಅನ್ಯಾಕ್ರಮಣ ಶೀಲ, ಗಣ್ಯರ ಪರ ಕಡೆಗೆ ಫ್ಯಾಸಿಸ್ಟ್ ಕೂಡ ಆಗಿರುವಂತಹ ಕಲೆಯನ್ನು ಯಾರು ಮೆಚ್ಚುತ್ತಾರೆ ?

**ಉತ್ತರ :** ಬಹುಶಃ ಎಲ್ಲರೂ.

ಇದು ಇಂದಿಗೂ ಬಹು ಪ್ರಸ್ತುತ : ಯುರೋಪಿನಲ್ಲಿ ಫ್ಯಾಸಿಸ್ಟ್ ವಿಷ ಏರುತ್ತಿದ್ದಾಗ ಗೋರ್ಕಿ ಕೇಳಿದ ಪ್ರಶ್ನೆ ಇದು. ಮನುಕುಲದ ಬದುಕಿನ ಪ್ರಶ್ನೆಯೂ ಇದೇ. ಅದಕ್ಕೆ ಕಲೆ, ಕಲಾವಿದ ಹೊರತಲ್ಲ: ''ಸಂಸ್ಕೃತಿಯ ಆರಾಧಕರೇ, ಸೃಷ್ಟಿಕರ್ತರೇ, ನೀವು ಯಾವ ಕಡೆಗಿದ್ದೀರಿ ?''

ಶ್ರೀಶ ಉಡುಪ
ಕೈಕಂಬದ ಬಳಿ, ಅಜೆಕಾರು
ಕಾರ್ಕಳ - ೫೭೪ ೧೦೧

# ಜ್ಯೂ ವಿರೋಧಿ ಪೋಪ್‌ಗಳು

**ಕ್ರಿಶ್ಚಿಯನ್ನರು ಜ್ಯೂಗಳೆಲ್ಲರನ್ನು ಯೇಸುವಿನ ಹತ್ಯೆ ಮಾಡಿದ ಜನರೆಂದು ಹೀನಾಯಿಸುತ್ತಿರುವುದು ಯೇಸುವಿನ ಸಾವಿನ ದಿನಗಳಿಂದ ನಡೆದುಬರುತ್ತಿದೆ. ಯೇಸುವೂ ಒಬ್ಬ ಜ್ಯೂ ಎಂಬುದನ್ನು ಕ್ರಿಶ್ಚಿಯನ್ನರೆಲ್ಲ ಮರೆಯುತ್ತಾರೆ. ''ಜ್ಯೂಗಳು ಸೈತಾನನ ಶಿಷ್ಯರು. ಕೇವಲ ಬ್ಯಾಪ್ಟಿಸಂನಿಂದ ಅವರ ಉದ್ಧಾರ ಸಾಧ್ಯ. ಇಲ್ಲದಿದ್ದರೆ ಅವರ ಸಂಪರ್ಕದಿಂದ ಪವಿತ್ರ ಕ್ರಿಶ್ಚಿಯನ್ ಜನ ಹಾಳಾಗಿ ಹೋಗುತ್ತಾರೆ.'' ಇದು ಎಲ್ಲ ಕ್ರಿಶ್ಚಿಯನ್ನರ ಸನಾತನ ನಂಬಿಕೆ.**

**ಡಾ|| ಎಂ. ಎಸ್. ಕೇಶವರಾವ್**

**ಮೂ**ರನೆಯ ಸಹಸ್ರಮಾನದ ಶುಭಾರಂಭದ ಮಾರ್ಚ್ ೨೦೦೦ದ ವಾರ್ಷಿಕ ಕ್ಷಮಾಯಾಚನೆಯ ದಿನದಂದು, ಪೋಪ್ ಇಮ್ಮಡಿ ಜಾನ್ ಪಾಲ್, ಕ್ಯಾಥೊಲಿಕ್ ಚರ್ಚುಗಳು ಸಾವಿರ ವರ್ಷಗಳಿಗೂ ಹಿಂದಿನಿಂದಲೆ ಸ್ವಂತ ಮತ್ತು ಅನ್ಯ ಮತದವರ ಮೇಲೆ ನಡೆಸಿದ ಅತ್ಯಾಚಾರಗಳಿಗೆಲ್ಲ ಕ್ಷಮೆ ಯಾಚಿಸಿದರು. ವಿಶ್ವವನ್ನೆಲ್ಲ ಕುರಿತು ಬಹಿರಂಗವಾಗಿ ಮಾಡಿದ ಈ ಪಾಪ ನಿವೇದನೆಗೆ ಅಂತರಂಗದ ಅಥವಾ ಅಂತರಾತ್ಮನದ್ದೇ ಆದ ಪ್ರೇರಣೆಗಳೇನೂ ಇರಲಿಲ್ಲ.

ವಿಶ್ವದಾದ್ಯಂತ ವ್ಯಾಪಿಸಿಕೊಂಡು ಒಂದು ಕಟ್ಟುನಿಟ್ಟಿನ ಮಹಾಶಕ್ತಿ ಘಟಕವಾದಂತಹ ಕ್ಯಾಥೊಲಿಕ್ ಮತದ ಸಾರ್ವಭೌಮರಿಂದ ನಡೆದ ಈ ಘಟನೆ ಖಂಡಿತವಾಗಿಯೂ ಐತಿಹಾಸಿಕವೆ. ಇದರ ಅಧ್ಯಯನ ಬರಿಯ ಚರಿತ್ರಕಾರರ ಉಪಯೋಗ ಮಾತ್ರಕ್ಕೆ ಸೀಮಿತವಾಗಬಾರದು. ಯಾವ, ಎಂತಹುದೇ ಮತಸಂಸ್ಥೆಯ ಆಗುಹೋಗುಗಳಲ್ಲಿ ಆತಂಕ ಆಸಕ್ತಿಗಳಿರುವವರೆಲ್ಲ, ಈ ಘಟನೆಯ ಹಿನ್ನೆಲೆಯಲ್ಲಿನ ಚರಿತ್ರೆಯನ್ನು ತಿಳಿದು, ಪಾಠ ಕಲಿಯಬಹುದು.



ಈ ಮಹೋನ್ನತ ಮಟ್ಟದ ಕ್ಷಮಾಯಾಚನೆಗೆ ಅರ್ಹತೆ ಪಡೆಯಲು ಯೋಗ್ಯವಾದ ಪಾಪಗಳು ಸಾವಿರಾರು. ಇವುಗಳನ್ನು ವಿಭಾಗಿಸಿದರೆ, ವಿಶ್ವದ ಚರಿತ್ರೆಯಲ್ಲಿ ಕುಪ್ರಸಿದ್ಧವಾದ ಮೂರು ಪಾಪರಾಶಿಗಳು ಎದ್ದು ಕಾಣುತ್ತವೆ:

೧) ಲಕ್ಷಾಂತರ ಇಸ್ಲಾಮಿಯರ ಮತ್ತು ಕ್ಯಾಥೊಲಿಕ್ಕೇತರರ ಮೇಲೆ ೧೦೯೫ರಿಂದ ೧೨೭೦ರವರೆಗೆ ನಡೆಸಿದ ಅತ್ಯಾಚಾರ ಮತ್ತು ನರಹತ್ಯೆಗಳು – ಕ್ರುಸೇಡ್ಸ್‌ನ ಹೆಸರಿನಲ್ಲಿ.

೨) ಹತ್ತಾರು ಸಾವಿರದಷ್ಟು ನಿರ್ಗತಿಕ ನಿರಪರಾಧಿ ಕ್ರಿಶ್ಚಿಯನ್ ವ್ಯಕ್ತಿಗಳ ಮೇಲೆ ಶತಮಾನಗಳ ಕಾಲ, ಕ್ಯಾಥೊಲಿಕ್ ಮಠಾಧಿಪತಿಗಳು ಮತ್ತು ಇದಕ್ಕಾಗಿಯೆ ನಿಯುಕ್ತ ಉನ್ನತಾಧಿಕಾರಿಗಳು ಈ ಧರ್ಮೋದ್ಧಾರಕ್ಕಾಗಿಯೆ ಸಂಯೋಜಿತರಾಗಿ, ಪಾಂಡಿತ್ಯ, ನೈಪುಣ್ಯ, ದಕ್ಷತೆಗಳಿಂದ ನಡೆಸಿದ ಮಾರಣಾಂತಕ ಚಿತ್ರಹಿಂಸೆಗಳು – 'ಇನ್‌ಕ್ವಿಸಿಷನ್' ಹೆಸರಿನಲ್ಲಿ.

೩) ಕ್ರಿಶ್ಚಿಯನ್ ಮತಪ್ರಸಾರಕ್ಕಾಗಿ ವ್ಯಾಟಿಕನ್ ಮತ್ತು ಚರ್ಚುಗಳು ಪ್ರೇರೇಪಿಸಿದ ಯುರೋಪಿನ ಅನೇಕ ಸಾಮ್ರಾಜ್ಯಶಾಹಿಗಳಿಂದ, ವಿಶ್ವದ ಎಲ್ಲ ಖಂಡಗಳಲ್ಲಿ, ಬಹುತೇಕ ದೇಶಗಳಲ್ಲಿ, ಅಲ್ಲಿನ ಬುಡಕಟ್ಟು ಜನಾಂಗಗಳ ಮೇಲೆ ನಡೆದ ಬರ್ಬರ ಹತ್ಯೆ, ಲೂಟಿ, ಬಲವಂತ ಮತಾಂತರ, ಮತ್ತು ಕೆಲವೆಡೆ ಪೂರ್ಣ ಜನನಾಶ – ಧರ್ಮಪ್ರಸಾರದ ಹೆಸರಿನಲ್ಲಿ.

ಈ ಹಳೆಯ ಮಹಾಪಾಪಗಳಿಗೆ, ಇಪ್ಪತ್ತನೆಯ ಶತಮಾನದಲ್ಲಿ ಕ್ಷಮೆ ಕೇಳಬೇಕಾದ ಒತ್ತಡದ ತುರ್ತುಪರಿಸ್ಥಿತಿ ೨೦೦೦ದಲ್ಲಿ ಇರಲಿಲ್ಲ, ಈಗ ಉಲ್ಬಣಗೊಂಡದ್ದು, ಸುಮಾರು ಎರಡು ಸಾವಿರ ವರ್ಷಗಳ ಕಾಲ, ದಿನನಿತ್ಯ, ಪ್ರಪಂಚದ ಹಲವು ದೇಶ ಪ್ರದೇಶಗಳಲ್ಲಿ, ಧರ್ಮದ ಹೆಸರಿನಲ್ಲಿಯೆ ನಡೆದ ಜ್ಯೂಗಳ ದಮನ ಮತ್ತು ಅವರ ಮೇಲಿನ ಅತ್ಯಾಚಾರಗಳು; ಹಾಗೂ ಸಮಾಪನ ಸಮಾರಂಭವಾದ ಜ್ಯೂಮೇಧ, ''ಹಾಲೊಕಾಸ್ಟ್'' – ಹಿಟ್ಲರನ ನಾಯಕತ್ವದಲ್ಲಿ ನಡೆದ ಘನಘೋರ ಆಧುನಿಕ ಹತ್ಯಾಚಾರ.

ಏನು ಮಾಡಿದರೂ ಧರ್ಮದ ಮತ್ತು ದೇವರ ಹೆಸರಿನಲ್ಲಿಯೆ ಮಾಡುತ್ತಿದ್ದ ಪೋಪ್‌ಗಳು ಯಾವಾಗಲೂ ಯಶವನ್ನೇ ಗಳಿಸುತ್ತಿದ್ದರು. ವಿಶ್ವ ಮಹಾಯುದ್ಧದ ಈಚೆಗಿನ ಪ್ರಜಾತಂತ್ರ, ಧರ್ಮನಿರಪೇಕ್ಷತೆ, ವೈಚಾರಿಕತಾವಾದ ಇವುಗಳಿಂದ ಪುಷ್ಟಿಗೊಂಡ ವಿಶ್ವಜನತೆ ಯೆಹೂದಿಗಳ ಪರವಾಗಿ ಪ್ರತಿಭಟಿಸಿದಾಗ, ಒತ್ತಡಕ್ಕೆ ಮಣಿದು ಈ ಪಾಪ ನಿವೇದನೆಯನ್ನು ಮಾಡಬೇಕಾಯಿತು. ಈ ಪ್ರಾಯಶ್ಚಿತ್ತದಲ್ಲು, ಇಮ್ಮಡಿ ಜಾನ್ ಪಾಲ್, ಹಿಂದಿನ ಪೋಪ್ ಮತ್ತು ಚರ್ಚುಗಳಿಂದ ಈ ಅನಾಚಾರಗಳೆಲ್ಲ 'ಸತ್ಯದ ಸೇವೆ'ಯಲ್ಲೆ ನಡೆದುಹೋದವೆಂದು ಸಮಾಧಾನಪಟ್ಟಿದ್ದಾರೆ. ಈ ಸತ್ಯಸೇವೆಯ ಮಾತುಗಳ ಸತ್ಯಪರೀಕ್ಷೆಯೂ ಇಲ್ಲಿ ಅಗತ್ಯವಾಗಿದೆ.

ಈ ವಿಷಯದ ಇತ್ತೀಚಿನ ಎರಡು ಪುಸ್ತಕಗಳಲ್ಲಿ ಮೊದಲು ಪ್ರಕಟವಾದದ್ದು, ೧೯೯೯ರಲ್ಲಿ ಜಾನ್‌ಕಾರ್ನೈಲ್ ಬರೆದ, 'ಹಿಟ್ಲರನ ಪೋಪ್.' ಇದರಲ್ಲಿ, ಜ್ಯೂ ನರಮೇಧದಲ್ಲಿ ಆಗಿನ ಪೋಪ್‌ನ ಪಾತ್ರ ಏನಿತ್ತು ಎಂಬುದರ ವಿದ್ಯಮಾನ, ವಿಚಾರಗಳಿವೆ. ನಂತರ ೨೦೦೧ರಲ್ಲಿ ಪ್ರಕಟವಾದ ಕರ್ಟ್‌ಜರ್‌ನ 'ಜ್ಯೂ ವಿರೋಧಿ ಪೋಪ್‌ಗಳು' ಪುಸ್ತಕದಲ್ಲಿ, ಹಿಟ್ಲರನ ಸಮಕಾಲೀನನಾದ, ೨೪ನೆಯ ಪೋಪ್ ಒಬ್ಬನದೇ ಈ ಹೊಣೆಯಲ್ಲವೆಂಬ ಮಂಡನೆಯಿದೆ. ಮೊದಲನೆಯ ಪೋಪ್, ಕ್ರಿಸ್ತಶಕ ೬೪ರ ಪೀಟರ್ ಆದಿಯಾಗಿ, ಹೆಚ್ಚು ಕಡಿಮೆಯಾಗಿ, ಎಲ್ಲಾ ಪೋಪರೂ ಎಲ್ಲಾ ಚರ್ಚುಗಳ ಮಠಾಧಿಪತಿಗಳೂ ನಡೆಸಿದ ದ್ವೇಷ ಸಾಧನೆಯ ಪರಮಾವಧಿಯಲ್ಲಿ ಜರ್ಮನಿಯ ಜ್ಯೂಮೇಧ ನಡೆಯಿತೆಂದು ಕರ್ಟ್‌ಜರ್ ಪ್ರತಿಪಾದಿಸಿದ್ದಾರೆ. ಅದರಲ್ಲಿಯೂ ಇತ್ತೀಚಿನ ಮೂರು ಶತಮಾನಗಳ ವಿದ್ಯಮಾನಗಳಿಗೆ ಹೆಚ್ಚು ಒತ್ತುಕೊಟ್ಟಿದ್ದಾರೆ.

**ಕೊಳಗೇರಿ ಘೆಟ್ಟೊಗಳಲ್ಲಿನ ಜೀವನ**

ಕ್ರಿಶ್ಚಿಯನ್ನರು ಜ್ಯೂಗಳೆಲ್ಲರನ್ನು ಯೇಸುವಿನ ಹತ್ಯೆ ಮಾಡಿದ ಜನರೆಂದು ಹೀನಾಯಿಸುತ್ತಿರುವುದು ಯೇಸುವಿನ ಸಾವಿನ ದಿನಗಳಿಂದ ನಡೆದುಬರುತ್ತಿದೆ. ಯೇಸುವೂ ಒಬ್ಬ ಜ್ಯೂ ಎಂಬುದನ್ನು ಕ್ರಿಶ್ಚಿಯನ್ನರೆಲ್ಲ ಮರೆಯುತ್ತಾರೆ. ''ಜ್ಯೂಗಳು ಸೈತಾನನ ಶಿಷ್ಯರು. ಕೇವಲ ಬ್ಯಾಪ್ಟಿಸಂನಿಂದ ಅವರ ಉದ್ಧಾರ ಸಾಧ್ಯ. ಇಲ್ಲದಿದ್ದರೆ ಅವರ ಸಂಪರ್ಕದಿಂದ ಪವಿತ್ರ ಕ್ರಿಶ್ಚಿಯನ್ ಜನ ಹಾಳಾಗಿ ಹೋಗುತ್ತಾರೆ.'' ಇದು ಎಲ್ಲ ಕ್ರಿಶ್ಚಿಯನ್ನರ ಸನಾತನ ನಂಬಿಕೆ. ಈ ನಂಬಿಕೆ ಎಷ್ಟು ಬಲವಾಗಿತ್ತೆಂದರೆ, ಯೂರೋಪಿನ ಬಹಳ ದೇಶಗಳ ಊರುಗಳಲ್ಲಿಯೂ, ಊರಾಚೆ ಜ್ಯೂಗಳಿಗಾಗಿಯೆ ಒಂದು ಕೊಳಗೇರಿಯಿರುತ್ತಿತ್ತು. ಸುತ್ತಲೂ ಎತ್ತರದ ಗೋಡೆಗಳು, ಒಂದೆರಡು ಭಾರಿ ಕಾವಲಿನ ಬಾಗಿಲುಗಳು. ಬೆಳಿಗ್ಗೆ ಸುಮಾರು ಆರುಗಂಟೆಯಿಂದ ರಾತ್ರಿ ಒಂಬತ್ತು ಗಂಟೆಯವರೆಗೆ ಮಾತ್ರ ಜ್ಯೂಗಳು ಯಾವುದೇ ಕೆಲಸಗಳಿಗೆ ಹೊರಗೆ ಇರಬಹುದು. ಹೀಗೆ ಜ್ಯೂಗಳಿಗೆ ಇಡೀ ಜೀವನಪೂರ ರಾತ್ರಿ ಸಮಯದ ಸೆರೆವಾಸ. ಕೆಲವು ಊರುಗಳ ಘೆಟ್ಟೊಗಳು ೨-೩ ಶತಮಾನಗಳಷ್ಟು ಹಳೆಯದಾಗಿದ್ದವು. ಒಂದೆರಡು ಕೊಠಡಿಗಳ ಮನೆಯಲ್ಲಿ ಮೂರು ತಲೆಮಾರುಗಳ ೧೫-೨೦ ಜನ ಜೀವಿಸಬೇಕಾಗುತ್ತಿತ್ತು. ಘೆಟ್ಟೊಗಳ ಒಳಗಾಗಲಿ ಹೊರಗಾಗಲಿ ಎಲ್ಲ ಜ್ಯೂಗಳೂ ಹಳದಿ ಬಣ್ಣದ ಗುರುತಿರುವ ಬಟ್ಟೆಯ ತುಂಡನ್ನೊ, ಡೇವಿಡ್‌ನ ಗುರುತಿರುವ ಬಿಲ್ಲೆಗಳನ್ನೊ ಹಾಕಿಕೊಂಡೆ ಇರಬೇಕು. ಯಾರೂ ಕ್ರಿಶ್ಚಿಯನ್ನರ ಮನೆಗಳಿಗೆ, ಅಂಗಡಿಗಳಿಗೆ, ಹೋಟೆಲುಗಳಿಗೆ ಪ್ರವೇಶಿಸುವ ಹಾಗಿರಲಿಲ್ಲ. ಸ್ನೇಹ ಬೆಳಸಿದ ಜ್ಯೂ ಮತ್ತು ಕ್ರಿಶ್ಚಿಯನ್ ಇಬ್ಬರಿಗೂ ಜುಲ್ಮಾನೆ ಮತ್ತು ಸೆರೆವಾಸದ ಶಿಕ್ಷೆ ವಿಧಿಸಲಾಗುತ್ತಿತ್ತು. ಜ್ಯೂಗಳು ಘೆಟ್ಟೊವಿನ ಹೊರಗಡೆ ಎಲ್ಲಿಯೂ ಮನೆಮಠ ಮಾಡುವ ಹಾಗಿರಲಿಲ್ಲ. ಅವರಿಗೆ ಕಾದಿರಿಸಿಟ್ಟ ಕೆಲಸಗಳು – ಹಳೆಬಟ್ಟೆ ವ್ಯಾಪಾರ, ಕ್ರಿಶ್ಚಿಯನ್ನರು ಮಾಡಬಾರದ ಸಣ್ಣಪುಟ್ಟ ಸಾಲ ಬಡ್ಡಿ ವ್ಯವಹಾರ ಇತ್ಯಾದಿ – ಎಲ್ಲರೂ ಹೀನಾಯವೆನ್ನುತ್ತಿದ್ದ ಕೆಲಸಗಳು.

ಇಂತಹ ಪರಿಸ್ಥಿತಿ ಸುಮಾರು ಒಂಬತ್ತನೆಯ ಶತಮಾನದಿಂದ ಪ್ರಾರಂಭವಾಗಿ, ಹತ್ತೊಂಬತ್ತನೆಯ ಶತಮಾನದಲ್ಲಿಯೂ, ವಿಶ್ವದ ಉಚ್ಚ ಸಂಸ್ಕೃತಿಯ ಮೇರು ಎಂದು ಗರ್ವಿಸುತ್ತಿದ್ದ ಯೂರೋಪಿನಲ್ಲಿಯೆ ನಡೆಯುತ್ತಿದ್ದಿತೆಂದರೆ ನಂಬುವುದು ಕಷ್ಟ. ಕ್ಯಾಥೊಲಿಕ್ ರಾಜ್ಯಗಳಲ್ಲೆಲ್ಲ ಪ್ರಬಲವಾಗಿ, ಪ್ರಾಟೆಸ್ಟಂಟ್ ರಾಜ್ಯಗಳಲ್ಲಿ ಕಡಿಮೆಯಾಗಿ ನಡೆಯು

ತ್ತಿದ್ದ ಈ ದಬ್ಬಾಳಿಕೆ, ಬಿಷಪ್‌ಗಳು, ಕಾರ್ಡಿನಲ್‌ಗಳು, ಪೋಪನಿಂದ ನಿಯುಕ್ತ 'ಇನ್‌ಕ್ವಿಸಿಟರ್' ಅಧಿಕಾರಿಗಳು ಇಂತಹವರ ರಾಜಕೀಯ ನಡೆಯುತ್ತಿದ್ದ ಊರುಗಳಲ್ಲಿ ಅತ್ಯಂತ ಕ್ರೂರವಾಗಿತ್ತು. ಕ್ರೌರ್ಯದ ಪಾರಮ್ಯ ಪೋಪ್‌ನ ರಾಜಧಾನಿ ರೋಮ್‌ನಲ್ಲಿತ್ತೆಂಬುದನ್ನು ವ್ಯಾಟಿಕನ್ ದಾಖಲೆಗಳು ಖಚಿತಗೊಳಿಸುತ್ತವೆ. ಜ್ಯೂಗಳ ಮೇಲೆ ಪೂರ್ಣ ಹತೋಟಿ ಸ್ಥಾಪಿಸಿದವರು, ಮತ್ತು ಚಾಡಿ ಹೇಳುವಾಗ ಇಲ್ಲದ್ದನ್ನು ಸೃಷ್ಟಿಸಿ ಇದ್ದದ್ದನ್ನು ಅತಿಶಯಗೊಳಿಸಿ ಹೇಳಿದವರು ಇಂತಹವರೆಲ್ಲ ಪ್ರಸಿದ್ಧರಾಗಿ ವ್ಯಾಟಿಕನ್ ಕಡತಗಳಲ್ಲಿ ದಾಖಲಾತಿ ಪಡೆದು, ಪದವಿಗಳನ್ನು ಗಿಟ್ಟಿಸಿಕೊಳ್ಳುತ್ತಿದ್ದರು.

ಕ್ರಾಂತಿಯ ನಂತರ ೧೭೯೮ರಲ್ಲಿ ಫ್ರೆಂಚ್ ಸೈನಿಕರು ರೋಮ್ ನಗರದ ಮೇಲೆ ದಾಳಿಮಾಡಿ ಪೋಪ್‌ನನ್ನು ಸೆರೆ ಹಿಡಿದುಕೊಂಡು ಹೋದರು. ಪೋಪ್ ಆರನೆಯ ಪಯಸ್ ತನ್ನ ವಿಜೃಂಭಣೆಯ ಹೂಳಾಟದ ಉತ್ಸವದಿಂದ ವಂಚಿತನಾಗಿ ಸಾಧಾರಣ ಗೋರಿಯಲ್ಲಿ ಮಣ್ಣಾದ. ೧೮೧೫ರಲ್ಲಿ ಮುಂದಿನ ಪೋಪ್, ಮತ್ತೆ ರೋಮ್‌ನಲ್ಲಿ ರಾಜ್ಯಕ್ಕೆ ಬಂದಾಗ, ಅಲ್ಲಿಯ ಜ್ಯೂಗಳ ಜೀವನ ಉತ್ತಮಗೊಳ್ಳುತ್ತಿದ್ದುದನ್ನು ನೋಡಿ ಕೋಪದಿಂದ ಬೆಂಕಿಯಾದ. ಜ್ಯೂಗಳು ಘೆಟ್ಟೋದಿಂದ ಹೊರಬಂದಿದ್ದರು. ಹಳೆಯ ಸಾಲಬಡ್ಡಿ ವ್ಯವಹಾರವನ್ನು ಬ್ಯಾಂಕಿಂಗ್ ಮಟ್ಟಕ್ಕೆ ಏರಿಸಿದ್ದರು. ಕ್ರಿಶ್ಚಿಯನ್ನರ ಸ್ನೇಹ ಬೆಳೆಸಿ, ಉದ್ದಿಮೆಗಳನ್ನು ಸ್ಥಾಪಿಸಿ, ಅನೇಕ ಕ್ರಿಶ್ಚಿಯನ್ನರನ್ನು ಕೆಲಸಕ್ಕೆ ಇಟ್ಟುಕೊಂಡಿದ್ದರು. ಜ್ಯೂ ಮಕ್ಕಳು ಶಾಲೆ ಕಾಲೇಜುಗಳನ್ನು ಸೇರಿ ಮೇಧಾವಿಗಳೆನ್ನಿಸಿಕೊಳ್ಳುತ್ತಿದ್ದರು. ಹಲವರಂತು ಹೆಸರು ಪಡೆದ ವೈದ್ಯರಾಗಿದ್ದರು. ಕ್ರಿಶ್ಚಿಯನ್ ಧರ್ಮದ ಇಂತಹ ಅಧಃಪತನವನ್ನು ಕೊನೆಗಾಣಿಸಲು ಪೋಪ್ ಪಣತೊಟ್ಟ. ತನ್ನ ಎಲ್ಲ ಉಚ್ಚಾಧಿಕಾರಿಗಳ, ಕಡೆಗೆ ಆಸ್ಟ್ರಿಯಾದ ರಾಜನ, ಮನವಿಗಳನ್ನು ತಿರಸ್ಕರಿಸಿ, ಜ್ಯೂಗಳನ್ನೆಲ್ಲ ಘೆಟ್ಟೋಗಳಿಗೆ ತಳ್ಳಿ , ಅವರ ಚಟುವಟಿಕೆಗಳನ್ನು ಕತ್ತರಿಸಿಹಾಕಿ, ರೋಮ್‌ನಲ್ಲಿ ತನ್ನ ಸಾಮ್ರಾಜ್ಯವನ್ನು ಉಳಿಸಿಕೊಂಡ. ಮುಂದೆ ಓಷ್‌ವಿಟ್ಸ್‌ನ ನರಹೋಮದಲ್ಲಿ ಇದೇ ರೋಮ್‌ನ ಘೆಟ್ಟೋಗಳ ಹತ್ತಾರು ಸಾವಿರದಷ್ಟು ಜನಗಳು ಭಸ್ಮವಾದರೆಂಬುದನ್ನು ಯಾರೂ ಎಂದಿಗೂ ಮರೆಯಬಾರದು.

**ಮತಾಂತರಗೊಳಿಸಲು ಬ್ಯಾಪ್ಟಿಸಂ ಹಿಂಸೆ**

ಜ್ಯೂಗಳನ್ನು ಬಲವಂತವಾಗಿ ಕ್ರಿಶ್ಚಿಯನ್ನರನ್ನಾಗಿ ಮಾಡಿದ ಅತ್ಯಾಚಾರಗಳಲ್ಲಿ, ಬ್ಯಾಪ್ಟಿಸಂನ ಪದ್ಧತಿ ಬಹಳ ದುಷ್ಟ ಹಾವಳಿಯಾಗಿಹೋಗಿತ್ತು. ಇದಕ್ಕಾಗಿ ಪೋಪರು ಮತ್ತು ಇತರ ಮತಾಧಿಕಾರಿಗಳು ಮಾಡಿಸುತ್ತಿದ್ದ ಚಿತ್ರಹಿಂಸೆಗಳ ವಿವರಗಳನ್ನು ವ್ಯಾಟಿಕನ್ ಬಹಳ ಗರ್ವದಿಂದ ಪ್ರಶಂಸಾತ್ಮಕವಾಗಿ ತನ್ನ ಕಡತಗಳಲ್ಲಿ ದಾಖಲಿಸಿಟ್ಟಿದೆ. ಎಲ್ಲ ಜ್ಯೂಗಳೂ ಕ್ರಿಶ್ಚಿಯನ್ನರಾದಾಗ ಯೇಸು ಭೂಲೋಕಕ್ಕೆ ಮರಳುವನೆಂದು ಬೈಬಲ್‌ನಲ್ಲಿ ಹೇಳಿದೆ. ಈ ಪುಣ್ಯ ಸಾಧನೆಗಾಗಿ ಅವರು ಉಪಯೋಗಿಸುತ್ತಿದ್ದ ರೀತಿ, ನೀತಿ, ಯುಕ್ತಿ, ಭಯೋತ್ಪಾದನೆ, ಹಿಂಸೆ, ಹತ್ಯೆಗಳು ಎಂತಹವರ ಮನಸ್ಸನ್ನೂ ಕದಡುವಂತಹವು.

೧೮೧೪ರಲ್ಲಿ ಅಂಟಿಕೊಲಿ ಎಂಬ ಜ್ಯೂ ಯುವಕ ತನ್ನ ಕಷ್ಟಜೀವನಕ್ಕೆ ಬೇಸತ್ತು, ಕ್ರಿಶ್ಚಿಯನ್ ಯುವಕರ ಏಳಿಗೆಯನ್ನು ಕಂಡು ಕರುಬಿ, ಆ ಮತಕ್ಕೆ ಸೇರುವುದಕ್ಕೆಂದೆ ಇದ್ದ ರೋಮ್‌ನಗರದ ಕಛೇರಿಯೊಂದರ ಬಾಗಿಲು ಬಡಿದ. ಎಲ್ಲವನ್ನು ವಿಚಾರಿಸಿದ ಪಾದರಿಯಿಂದ ವಿಷಯ ತಿಳಿದ ಆರ್ಚ್ ಬಿಷಪ್, ಮ್ಯಾಜಿಸ್ಟ್ರೇಟರಿಗೆ ಹೇಳಿ ಅಂಟಿಕೊಲಿಯ ಏನೂ ಅರಿಯದ ಹೆಂಡತಿಯನ್ನು ಅವಳ ಏಳು ತಿಂಗಳ ಮಗುವಿನ ಸಹಿತ ಕಛೇರಿಗೆ ಎಳೆದು ತರಿಸಿದ. ಆ ಪುಟ್ಟ ತಾಯಿಯನ್ನು ಮತಾಂತರಕ್ಕೆ ಒಪ್ಪಿಸುವ ಮೂರು ದಿನಗಳ ಸತತ ಪ್ರಯತ್ನ ವಿಫಲವಾದಾಗ, ಆ ಮಗುವನ್ನು ಉಳಿಸಿಕೊಂಡು, ತಾಯಿಯನ್ನು ಕಳುಹಿಸಿಬಿಟ್ಟರು. ತಾನೊಬ್ಬನೆ ಮತಾಂತರಗೊಳ್ಳೆನೆಂದು ಅಂಟಿಕೊಲಿಯೂ ಹೊರಟುಹೋದ. ತಂದೆತಾಯಿಯರು ಮತ್ತು ಆ ಊರಿನ ಜ್ಯೂಗಳೆಲ್ಲರು ಪ್ರತಿಭಟಿಸಿದರೂ ಆ ಮಗುವಿನ ಬ್ಯಾಪ್ಟಿಸಂ ನಡೆದೇಹೋಯಿತು. ಸಾಮಾನ್ಯವಾಗಿ ಮಗುವನ್ನು ಬಿಡಲಾರದೆ ತಂದೆತಾಯಿಯರು ಮತಾಂತರಗೊಳ್ಳುವರೆಂಬ ಚರ್ಚಿನ ಅನೇಕ ವರ್ಷಗಳ ಅನುಭವ ಇವರ ಮಟ್ಟಿಗೆ ಸುಳ್ಳಾಯಿತು. ಬಡ ಜ್ಯೂ ರೋಗಿಗಳು ಕ್ರಿಶ್ಚಿಯನ್ ಆಸ್ಪತ್ರೆಗೆ ಬಂದರೆ, ಅವರ ಮೇಲೆ ಮತಾಂತರದ ಒತ್ತಡವಿರುತ್ತಿತ್ತು. ಆ ರೋಗಿ ಸಾಯತೊಡಗಿದರೆ, ತಮ್ಮ ಪದ್ಧತಿಯಂತೆ ಆತ್ಮೋದ್ಧಾರಕ ಮಂತ್ರಗಳಿಂದ ಮತ್ತು ಬ್ಯಾಪ್ಟಿಸಂ ತಂತ್ರದಿಂದ ಅವನ ಪರಿವರ್ತನೆ ಮಾಡುವುದು ಪ್ರತಿಯೊಬ್ಬ ಪಾದರಿಯ ಧರ್ಮವಾಗಿತ್ತು. ಅಂತಹ ರೋಗಿ ಸತ್ತರೂ ಅವನ ದೇಹ ಅವನ ಹೆಂಡತಿ ಮಕ್ಕಳ ಕಣ್ಣಿಗೆ ಬಿದ್ದು, ಅಪವಿತ್ರವಾಗುತ್ತಿರಲಿಲ್ಲ. ಕ್ರಿಶ್ಚಿಯನ್ ಸ್ಮಶಾನದಲ್ಲೆ ಅವನು ಹೂತು ಹೋಗುತ್ತಿದ್ದ. ನೆಂಟರ ಪಾಲಿಗೆ ಉಳಿಯುತ್ತಿದ್ದುದು ಅವನು ಕ್ರಿಶ್ಚಿಯನ್ ಸ್ವರ್ಗಕ್ಕೆ ಸೇರಿದ ಸಂತಸದ ಸುದ್ದಿ ಮಾತ್ರ. ಇಂತಹ ಬಲವಂತ ಮತಾಂತರದ ನೂರಾರು ಘಟನೆಗಳಲ್ಲಿ ಒಂದು, ಕ್ರಾಂತಿಗಳಿಂದ ಎಚ್ಚೆತ್ತ ಯೂರೋಪಿನ ರಾಷ್ಟ್ರಗಳಲ್ಲಿನ ಬುದ್ಧಿಜೀವಿಗಳನ್ನು ಬಹಳವಾಗಿ ಪ್ರಚೋದಿಸಿತು. ಇಟಲಿಯ ಬೋಲೊನ್ಯ ನಗರದ ಒಂದು ಮಧ್ಯಮ ವರ್ಗದ ಜ್ಯೂ ಮನೆಗೆ, ೧೮೫೮ರ ಒಂದು ದಿನ, ಪೋಲಿಸ್ ಹಠಾತ್ತನೆ ನುಗ್ಗಿ, ಆರು ವರುಷದ ಒಂದು ಮಗುವನ್ನು ಹಿಡಿದುಕೊಂಡು ಹೋಯಿತು. ಐದು ವರ್ಷಗಳ ಹಿಂದೆ ಆ ಮಗುವಿಗೆ ಕಾಯಿಲೆಯಾಗಿದ್ದಾಗ, ತಾಯಿಗೆ ಸಹಾಯ ಮಾಡಲು ಕ್ರಿಶ್ಚಿಯನ್ ಅನಕ್ಷರಸ್ಥ ಹುಡುಗಿಯೊಬ್ಬಳು ಕೆಲಸದವಳಾಗಿ ಬಂದಿದ್ದಳು. ಆ ಹುಡುಗಿ ಸಹಜ ಕರುಣೆಯಿಂದ, ತನ್ನ ನಂಬಿಕೆಯಂತೆ, ಆ ಶಿಶುವಿನ ಮೇಲೆ, ಅಡುಗೆಯ ಮನೆಯ ಮಡಕೆಯೊಂದರ ನೀರೆರಚಿ, 'ಸ್ವರ್ಗದಲ್ಲಿಯಾದರೂ ನಿನ್ನ ಆತ್ಮಕ್ಕೆ ಶಾಂತಿ ಸಿಕ್ಕಲಿ' ಎಂದು ಹರಸಿದ್ದಳು. ಆ ನತದೃಷ್ಟೆ ಹುಡುಗಿ ಐದು ವರುಷಗಳ ಕಾಲ ಮನಸ್ಸಿನಲ್ಲಿಯೆ ಪರಿತಪಿಸುತ್ತಿದ್ದು, ಕಡೆಗೆ ಪಾದರಿಯೊಬ್ಬನಿಗೆ ತನ್ನ ಪ್ರಾಯಶ್ಚಿತ್ತದ ನಿವೇದನೆಯಲ್ಲಿ ಈ ವಿಷಯ ಹೇಳಿಬಿಟ್ಟಳು. ಆ ಮಗು ಕ್ರಿಶ್ಚಿಯನ್ ಎಂದು ನಿಶ್ಚಯಿಸುವುದಕ್ಕೆ ಇನ್ನು ಯಾವ ಕಾರಣಗಳೂ ಬೇಕಾಗಿರಲಿಲ್ಲ.

ಆ ಮಗುವನ್ನು ತಂದೆ ತಾಯಿಯರಿಗೆ ಹಿಂದಿರುಗಿಸುವುದಕ್ಕಾಗಿ ಬೋಲೊನ್ಯದ ಜ್ಯೂಗಳೆಲ್ಲ ಸಂಘಟಿತರಾಗಿ ಮನವಿ ಮಾಡಿದರು; ಇತರ ಸುಧಾರಿತ ದೇಶಗಳ ಪ್ರತಿಷ್ಠಿತರಿಂದಲೂ, ರಾಜಕಾರಣಿಗಳಿಂದಲೂ, ಹಲವು ದೇಶಗಳ ರಾಯಭಾರಿಗಳ ಮೂಲಕ ಪೋಪನ ಮೇಲೆ ಒತ್ತಡ ತಂದರು. ಬಹಳ ದೇಶಗಳ ಹೆಸರಾಂತ ಬುದ್ಧಿಜೀವಿಗಳು ಪೋಪನಿಗೆ ಕಾಗದಗಳನ್ನು ಬರೆದರು. ಪೋಪ್ ಪಯಸ್-೯ ಸ್ವಲ್ಪವೂ ಜಗ್ಗದೆ, ''ಕ್ರಿಶ್ಚಿಯನ್ ಸ್ವರ್ಗದಲ್ಲಿ ನೋಂದಣಿಯಾದ ಆತ್ಮಗಳನ್ನು ಹಿಂದಕ್ಕೆ ತರುವುದು ಪೋಪನಿಂದಲೂ ಸಾಧ್ಯವಿಲ್ಲ'' ಎಂದು ಆದೇಶ ಕೊಟ್ಟು, ಎಲ್ಲರ ಕೋರಿಕೆಯನ್ನು ಧಿಕ್ಕರಿಸಿಬಿಟ್ಟ!

**ರಕ್ತಾಹುತಿಯ ಸಂಸ್ಕಾರದವರೆನ್ನುವ ಮಿಥ್ಯಾರೋಪ**

ಜ್ಯೂಗಳ ಮೇಲೆ ವಿಷ ಕಾರುವ ಕ್ಯಾಥೊಲಿಕ್ ಚರ್ಚಿನ ಸಾವಿರ ವರುಷಗಳ ಕಾರ್ಯಸರಣಿಗಳಲ್ಲಿ ಬಹಳ ಪರಿಣಾಮಕಾರಿಯಾದ ಕಾರ್ಯ, ಜ್ಯೂಗಳು ಕ್ರಿಶ್ಚಿಯನ್ನರ ರಕ್ತದಿಂದ ತಮ್ಮ ದೇವರ ಪೂಜೆ ಮಾಡುವ ಮತಾಚಾರದವರೆಂಬ ಕಟ್ಟುಕತೆಯ ನಿರಂತರ ಅಪಪ್ರಚಾರ. ಜ್ಯೂಗಳು ಕ್ರಿಶ್ಚಿಯನ್ ಮಕ್ಕಳ ರಕ್ತ ಹರಿಸಿ ದೇವರಿಗೆ ಅರ್ಪಿಸಿ, ಪ್ರಸಾದವಾಗಿ ತಾವೂ ಸೇವಿಸುವರೆಂದೂ, ಜ್ಯೂಗಳ ಮತಗ್ರಂಥ 'ತಾಲ್ಮುಡ'ದಲ್ಲಿ ಇಂತಹ ಆದೇಶವಿದೆಯೆಂದೂ ಎಲ್ಲ ಪಾದರಿಗಳು ನಂಬಿದ್ದರು. ಆದರೆ, ಬೈಬಲ್ಲಿನ ಹಳೆಯ ಅರ್ಧಭಾಗವು ಜ್ಯೂಗಳ ಚರಿತ್ರೆ ಮತ್ತು ಜ್ಯೂಗಳ ಮತಗ್ರಂಥವೂ ಆಗಿರುವ ಕಾರಣಕ್ಕಾಗಿ, ಎಲ್ಲ ಕ್ರಿಶ್ಚಿಯನ್ ವಿದ್ವಾಂಸರುಗಳೂ ಜ್ಯೂಗಳ ತಾಲ್ಮುಡವನ್ನು ಓದಿಯೆ ಇರುತ್ತಿದ್ದರು. ಪೋಪ್, ಬಿಷಪ್ ಮತ್ತು ಇತರ ಮಠಾಧಿಪತಿಗಳು ಈ ಕಟ್ಟುಕತೆಯನ್ನು ಸುಳ್ಳೆಂದು ತಿಳಿದಿದ್ದರೂ ತಮ್ಮ ದ್ವೇಷಸಾಧನೆಗೆ ಇದನ್ನು ಉಪಯೋಗಿಸಿಕೊಂಡರು. ವ್ಯಾಟಿಕನ್‌ನ ಇಂತಹ ನೂರಾರು ಅಪಪ್ರಚಾರಗಳ ಅಧಿಕೃತ ಹೇಳಿಕೆಗಳನ್ನು ಎತ್ತಿ ತೋರಿಸಿಯೆ, ಹಿಟ್ಲರನ ನಾಜಿಗಳೂ, ಮುಸೋಲಿನಿಯ ಫ್ಯಾಸಿಸ್ಟರೂ ಹಾಗೂ ಆ ಕಾಲದ ರಷ್ಯನ್ ರಾಜಸ್ವಾಮ್ಯವಾದಿಗಳೂ ತಮ್ಮ ತಮ್ಮ ಜ್ಯೂ ಹತ್ಯೆಗಳನ್ನು ಸಮರ್ಥಿಸಿಕೊಳ್ಳುತ್ತಿದ್ದರು.

ಇಂತಹ ನೂರಾರು ಘಟನೆಗಳಲ್ಲಿ ಮತ್ತೊಂದು ಪ್ರಸಿದ್ಧಿಯಾದ ಪ್ರಕರಣ, ೧೮೪೦ರಲ್ಲಿ ಸಿರಿಯಾದ ಟಮಾಸೊ ಎಂಬ ಪಾದರಿ, ಎಂದಿನಂತೆ ಮತಾಂತರ ಉಪದೇಶಕ್ಕೆ ಘೆಟ್ಟೋವಿಗೆ ಹೋದವನು ಹಿಂದಿರುಗದೆ ಇದ್ದದ್ದು. ಹತ್ತಾರು ಚರ್ಚುಗಳ ನೂರಾರು ಪಾದರಿಗಳು ಪೋಲಿಸರಿಗೆ, ಜ್ಯೂಗಳು ಹೇಗೆ ರಕ್ತಬಲಿ ನಡೆಸಿರಬೇಕೆಂದು ತಮ್ಮ ತಮ್ಮದೆ ಕಥೆಗಳನ್ನು ಹೇಳಿದರು. ಪೋಲಿಸರು ಬಹಳಷ್ಟು ಜನರನ್ನು ಹಿಡಿದು, ಚಿತ್ರಹಿಂಸೆಯ ವಿಚಾರಣೆ ನಡೆಸಿ, ಆ ಎಲ್ಲ ಅಸಂಬದ್ಧ ಕಥೆಗಳಿಗೆ ಬೇರೆ ಬೇರೆಯಾಗಿ ಅನ್ವಯಿಸುವ ಅನೇಕ ತಪ್ಪೊಪ್ಪಿಗೆಗಳನ್ನು ಬರೆಸಿಕೊಂಡರು. ಅನೇಕರಿಗೆ ಮರಣದಂಡನೆ, ಕೆಲವರಿಗೆ ಜೀವಾವಧಿ ಶಿಕ್ಷೆಗಳಾದವು. ಕೆಲವು ವರ್ಷಗಳ ನಂತರ, ಟಮಾಸೊ ಅರಬ್ಬನೊಬ್ಬನಿಗೆ ಹೆದರಿ ಓಡಿಹೋದನೆಂಬುದು ತಿಳಿಯಿತು. ಸೆರೆಯಲ್ಲಿದ್ದವರನ್ನು ಬಿಡಿಸಲು ಜ್ಯೂಗಳ ಒತ್ತಡಕ್ಕೆ ಒಪ್ಪಿ, ಇಂಗ್ಲೆಂಡ್ ಮತ್ತು ಆಸ್ಟ್ರಿಯಾದ ರಾಯಭಾರಿಗಳು ಪೋಪನೊಂದಿಗೆ ಭೇಟಿಗೆ ಹೋದಾಗ, ಪೋಪ್ ದರ್ಶನ ಕೊಡಲೂ ನಿರಾಕರಿಸಿಬಿಟ್ಟರು.

**ಜ್ಯೂಗಳ ಸಂಸ್ಕೃತಿಯ ಮೇಲೆ ದಾಳಿ**

ರಕ್ತ ಕುಡಿಯುವ ಮತ್ತು ದೇಹ ತಿನ್ನುವ ಮಾತು, ಕ್ರಿಶ್ಚಿಯನ್ನರದೆ ಆದ ಮತ್ತು ಜ್ಯೂಗಳು ಒಪ್ಪದ, ಬೈಬಲ್ಲಿನ ಹೊಸ ಒಡಂಬಡಿಕೆಯಲ್ಲಿದೆ; ಜಾನ್ ಅಧ್ಯಾಯದಲ್ಲಿ ಜೀಸಸ್‌ನಿಂದ, 'ಯಾರು ನನ್ನ ರಕ್ತ ಕುಡಿದು, ನನ್ನ ದೇಹ ತಿನ್ನುವನೊ ಅವನು ಅಮರನಾಗುತ್ತಾನೆ; ಅವನಲ್ಲಿ ನಾನಿರುತ್ತೇನೆ' ಎಂದು ಹೇಳಿಸಿದ್ದಾರೆ. ಹೀಗಿದ್ದರೂ, ಬೀಭತ್ಸ ರಸದ ನೆರವಿನಿಂದ ಜ್ಯೂ ಸಂಸ್ಕೃತಿಯನ್ನು ತುಚ್ಛಗೊಳಿಸುವ ಯುಕ್ತಿ ಚೆನ್ನಾಗಿ ಫಲಿಸಿತು. ಪೋಪರು, ಬಿಷಪ್ಪರು, ಮತ್ತಿತರ ಕ್ಯಾಥೊಲಿಕ್ ಮತಶಾಸ್ತ್ರ ಪಂಡಿತರು ಈ ಸೈತಾನಿಕ ಕ್ರಿಯೆಯನ್ನು ಎಷ್ಟು ವಿವರವಾಗಿ, ಖಡಾಖಂಡಿತವಾಗಿ, ಗ್ರಂಥಗಳಲ್ಲಿ ಮತ್ತು ವ್ಯಾಟಿಕನ್ ಪತ್ರಿಕೆಗಳಲ್ಲಿ ವರ್ಣಿಸಿದರೆಂದರೆ, ಯೂರೋಪಿಯನ್ ಸಾಹಿತಿಗಳಲ್ಲನೇಕರು ಇದನ್ನು ನಿಜವೆಂದು ನಂಬಿ, ತಮ್ಮ ಓದುಗರಿಗೂ ಭಯ ಮತ್ತು ಬೀಭತ್ಸ ರಸಮಿಶ್ರಣವನ್ನು ತಮ್ಮ ಕತೆ, ಕಾದಂಬರಿಗಳಲ್ಲಿ

ಉಣಬಡಿಸಿದರು. ಇವರಲ್ಲಿ ಮೊಪಾಸಾ, ಬೋದಲೇರ್, ಅಲೆಕ್ಸಿಸ್ ಟಾಲ್‌ಸ್ಟಾಯ್, ತುರ್ಗೆನೇವ್, ಕೋಲರಿಜ್, ಬೈರನ್, ಬ್ರಾಂಟೆ, ಡಿ. ಎಚ್. ಲಾರೆನ್ಸ್ ಅಂತಹ ಪ್ರತಿಷ್ಠಿತರು ಸೇರಿದ್ದರು. ಯೂರೋಪಿನ ಅನೇಕ ಸಮಾಜಗಳಲ್ಲಿ ಇದು ಮಿತಿಯಿಲ್ಲದ ಜ್ಯೂ ಹಿಂಸೆಗೆ ಉತ್ತೇಜನ ಕೊಟ್ಟಿತು. ೧೮೮೧ರಲ್ಲಿ ರಷ್ಯಾದಲ್ಲಿ ನಡೆಯುತ್ತಿದ್ದ 'ಪೊಗ್ರೊಂ'ಗಳಲ್ಲಿ, ಒಂದರಲ್ಲಿಯೇ ೪೯ ಜನ ಗಂಡಸರು, ಹೆಂಗಸರು ಮತ್ತು ಮಕ್ಕಳು ಹತರಾದರು ; ಐನೂರು ಜನ ಅಂಗವಿಕಲರಾದರು. ವ್ಯಾಟಿಕನ್ನಿನ ಅಧಿಕೃತ 'ಸಿವಿಲ್ ಟಾ' ಪತ್ರಿಕೆಯಲ್ಲಿ, ಜ್ಯೂಗಳ ಸಂಸ್ಕೃತಿಯ ಮೇಲಿನ ಕಿಡಿಗೇಡಿ ನಿಂದನೆಗಳು, 'ಜ್ಯೂ ಜನಾಂಗವೇ ನಿಕೃಷ್ಟ ಜಾತಿ' ಎನ್ನುವ ಲೇಖನಗಳು ಪ್ರಕಟವಾಗುತ್ತಿದ್ದವು; ವ್ಯಾಟಿಕನ್ ಮತ್ತು ಪೋಪರು ಅವನ್ನು ಪ್ರಶಂಸಿಸಿ ಬರೆಯುತ್ತಿದ್ದರು. ಇವೆಲ್ಲ ಈಗ ಮುಚ್ಚಿಡಲಾಗದ ದಾಖಲೆಗಳಾಗಿವೆ.

ಮತ್ತೊಬ್ಬರ ಸಂಸ್ಕೃತಿ ಇಷ್ಟವಾಗದಾಗ ಅವರ ಗ್ರಂಥಗಳನ್ನು ಸುಟ್ಟು ನಿರ್ನಾಮಗೊಳಿಸುವ ಪದ್ಧತಿಯನ್ನು ಹುಟ್ಟುಹಾಕಿ ಬೆಳೆಸಿದವರು ಕ್ಯಾಥೊಲಿಕ್ಕರು. ೧೩ನೆಯ ಶತಮಾನದ ಪೋಪ್ ಗ್ರಿಗರಿ-೯ ತಾಲ್ಮುಡ ಗ್ರಂಥಗಳನ್ನು ಸುಡುವ ಚಟುವಟಿಕೆಗಳಲ್ಲಿ ಅಗ್ರಗಣ್ಯ. ೧೫೫೭ರಲ್ಲಿ ಪೋಪ್ ಪಾಲ್-೪ ರೋಮ್‌ನ ಘೆಟ್ಟೊಗಳಲ್ಲಿದ್ದ ಎಲ್ಲಾ ತಾಲ್ಮುಡ ಗ್ರಂಥಗಳನ್ನೂ ಸುಡಿಸಿದ. ನಂತರದ ಪೋಪರು ಕ್ರಮೇಣ ಜೆಸ್ಯೂಟ್, ಫ್ರಾನ್ಸಿಸ್ಕನ್, ಮತ್ತು ಡಾಮಿನಿಕನ್ ಪಂಥಗಳವರಿಂದ ಇಂತಹ ವಿಧ್ವಂಸಕ ಕೆಲಸಗಳನ್ನು ಮಾಡಿಸುತ್ತಿದ್ದರು. ಜ್ಯೂಗಳನ್ನು ಹಿಂಸಿಸಿ, ತಾಲ್ಮುಡವನ್ನು ಸುಡಿಸಿದ ರಾಜರುಗಳೆಲ್ಲ ಪೋಪ್‌ನ ಕೃಪಾಪಾತ್ರರಾಗುತ್ತಿದ್ದರು. ಫ್ರಾನ್ಸ್‌ನ ರಾಜ ಇಪ್ಪತ್ತು ಸಾವಿರ ಪ್ರತಿಗಳನ್ನು ಸುಡಿಸಿ ಪುಣ್ಯ ಕಟ್ಟಿಕೊಂಡು, ಸೆಯಿಂಟ್ ಲೂಯಿ-೯ ಎಂದು ಪ್ರಸಿದ್ಧನಾದ.




**ಜ್ಯೂಗಳದು ಒಂದು ಅತಿಹೀನ ಜನಾಂಗ ?**

ಜ್ಯೂಗಳು ಒಂದು ಅತಿಹೀನ ಜನಾಂಗದವರು ಎಂದು ನಾಜಿಗಳು ಅವರ ಹತ್ಯೆಗೆ ತೊಡಗುವುದಕ್ಕೆ ಪೀಠಿಕೆ ಹಾಕಿಕೊಟ್ಟವರು ವ್ಯಾಟಿಕನ್ ಮತ್ತು ಪೋಪ್‌ಗಳು. ಮೂವತ್ತೆರಡು ವರ್ಷ ರಾಜ್ಯವಾಳಿದ ಪೋಪ್ ಪಯಸ್-೯ (೧೮೪೬-೭೮), ಈ ಮತೀಯ ನಂಬಿಕೆಗೆ ತಳಹದಿ ಹಾಕಿಕೊಟ್ಟರೆ, ಪೋಪ್ ಪಯಸ್-೧೧ (೧೯೨೨-೧೯೩೯) ಆಗಿನ ರಾಜಕೀಯಕ್ಕೆ ಸರಿಹೊಂದುವಂತೆ ನಾಜಿಗಳಿಗೆ ಒಂದು ಭವ್ಯ ಭವನ ಕಟ್ಟಿಸಿಕೊಟ್ಟ. ಆದರೆ ಇವರೆಲ್ಲ ಪುರಾತನ ಸೂತ್ರಗಳಿಗೆ ಮತ್ತೆ ಮತ್ತೆ ಹೊಸ ಭಾಷ್ಯ ಬರೆಯುತ್ತಿದ್ದವರಷ್ಟೆ.

ಜರ್ಮನಿಯಲ್ಲಿ, ಆರ್ಯರನ್ನರಲ್ಲದ್ದಕ್ಕಾಗಿ ಜ್ಯೂಗಳ ನರಮೇಧಕ್ಕೆ ನಾಂದಿಯಾಗಿ ಹಿಂಸೆ ಮತ್ತು ಉಚ್ಚಾಟನೆಗಳು ನಡೆಯುತ್ತಿದ್ದಾಗ, ಈ ಪೋಪ್ ಕೊಟ್ಟ ಬುದ್ಧಿವಾದ ಇದು : 'ಜರ್ಮನಿಗಿಂತಲೂ ಹೆಚ್ಚು ಜ್ಯೂಗಳನ್ನೊಳಗೊಂಡ ಪೋಲೆಂಡಿನಲ್ಲಿ ಈ ಕೆಲಸ ಮೊದಲು ನಡೆಯಬೇಕು.'

ತಾವೇ ಹುಟ್ಟುಹಾಕಿದ ಈ ಜ್ಯೂ ಜನ ಜಾತಿಯ ಸಮಸ್ಯೆಯಲ್ಲಿ ತಾವೇ ಸಿಲುಕಿಕೊಂಡು ಎಲ್ಲ ಚರ್ಚುಗಳೂ, ತಮ್ಮೊಡನಿದ್ದ ಪಾದರಿಗಳಲ್ಲಿ, ಐದು ತಲೆಮಾರುಗಳಿಂದೀಚೆಗೆ ಜ್ಯೂ ರಕ್ತದ ಸೋಂಕಿದ್ದವರನ್ನೆಲ್ಲ ತೆಗೆದುಹಾಕುವ ನಿಯಮವನ್ನು ತಮ್ಮ ಮೇಲೆಯೆ ಹೇರಿಕೊಳ್ಳಬೇಕಾಯಿತು.

೧೯೩೩ರಲ್ಲಿ ಈ ಪೋಪ್ ಹಿಟ್ಲರನೊಡನೆ ಒಂದು ಒಪ್ಪಂದ ಮಾಡಿಕೊಂಡ, ಚರ್ಚುಗಳು ಮತ್ತು ಹಿಟ್ಲರನ ಸರ್ಕಾರ ಒಬ್ಬರಿನ್ನೊಬ್ಬರ ವ್ಯವಹಾರಗಳಲ್ಲಿ ಕೈ ಹಾಕಬಾರದೆಂದು. ಇದರ ಪರಿಣಾಮವಾಗಿ ಎಂದೂ ಯಾವ ಜ್ಯೂ ವ್ಯಕ್ತಿಯೂ ಪ್ರಾಣ ಉಳಿಸಿಕೊಳ್ಳುವುದಕ್ಕೂ ಕ್ಯಾಥೊಲಿಕ್ ಚರ್ಚುಗಳ ಮೊರೆಹೋಗದಂತಾಯಿತು. (ವ್ಯಾಟಿಕನ್ನಿನ ಆದೇಶವನ್ನು ಮೀರಿಯೆ, ಜರ್ಮನಿಯ ಕೆಲವು ಚರ್ಚು ಮತ್ತು ಕಾನ್ವೆಂಟ್‌ಗಳು ಕದ್ದುಮುಚ್ಚಿ ಹಲವು ಜ್ಯೂಗಳಿಗೆ ಜೀವಾಸರೆ ನೀಡಿದ್ದರೆಂಬುದು ಬಹುಕಾಲಾನಂತರ ಹೊರಬಂದ ಸಂಗತಿ. ಇದು ಅಂದಿನ ಕ್ಯಾಥೊಲಿಕರಲ್ಲಿಯೂ ಯೇಸುವನ್ನು ಮರೆಯದವರಿದ್ದರೆನ್ನುವ ಸಮಾಧಾನ ಕೊಡುತ್ತದೆ.) ಜ್ಯೂಗಳ ಮೇಲಿನ ಅತ್ಯಾಚಾರವನ್ನು ನಿಲ್ಲಿಸಬೇಕೆಂದು ಹಿಟ್ಲರನಿಗೆ ಬುದ್ಧಿಮಾತು ಹೇಳಬೇಕೆಂದು ಇಂಗ್ಲೆಂಡ್ ಫ್ರಾನ್ಸ್, ಅಮೆರಿಕಾ ದೇಶಗಳ ಚರ್ಚುಗಳು ಪೋಪನಲ್ಲಿ ಮನವಿ ಮಾಡಿಕೊಂಡಾಗ, ಪೋಪ್ ತಾನು ಅಂತಹ ಮಾತನ್ನು ಲಿಖಿತ ರೂಪದಲ್ಲಿ ಹೇಳುವೆನೆಂದು ಹೇಳಿದ. ಆದರೆ ನಾಲ್ಕು ವರ್ಷಗಳಾದರೂ ಅಂತಹ ಲೇಖನ ಪೋಪನಿಗೊಪ್ಪುವಂತೆ ಸಿದ್ಧವಾಗಲೇ ಇಲ್ಲ. ■ ಅತ್ಯಾಚಾರಗಳನ್ನು ಕಣ್ಣಾರೆ ಕಂಡ ಅನೇಕರು ಖುದ್ದಾಗಿ ಬಂದು ಹಲುಬಿದಾಗಲೆಲ್ಲ ಅವನು ಹೇಳುತ್ತಿದ್ದುದು ಇಷ್ಟೆ: 'ಜ್ಯೂಗಳದು ಏನೇ ತಪ್ಪಿದ್ದರೂ ಕ್ರಿಶ್ಚಿಯನ್ ಧರ್ಮದವರಾದ ನಾವು ಅವರನ್ನು ಕ್ಷಮಿಸುವುದೇ ಸದ್ಧರ್ಮ.' ಆದರೆ ಇಷ್ಟು ಮಾತನ್ನು ಸಹ ಅವನು ಹಿಟ್ಲರನಿಗೆ ಎಂದಿಗೂ ಮುಟ್ಟಿಸಲಿಲ್ಲ.

೧೯೪೩ ಅಕ್ಟೋಬರ್‌ನಲ್ಲಿ, ಜರ್ಮನ್ ಸೈನ್ಯ ರೋಮ್‌ನಗರಕ್ಕೆ ನುಗ್ಗಿ, ಪೋಪ್ ಪಯಸ್-೧೧ರ ಮೂಗಿನ ಕೆಳಗಡೆಯೆ ಇದ್ದ ಘೆಟ್ಟೊವಿನಿಂದ ಒಂದು ಸಾವಿರದಷ್ಟು ಜ್ಯೂ ಗಂಡಸರು, ಹೆಂಗಸರು ಮತ್ತು ಮಕ್ಕಳನ್ನು ಮಿಲಿಟರಿ ಟ್ರಕ್ಕುಗಳಲ್ಲಿ ತುರುಕಿತುಂಬಿ, ಕುಖ್ಯಾತ ಒಶ್‌ವಿಟ್ಸ್ ನಗರದ ಕಡೆಗೆ ಹೊರಟರು. ಆಗ ಆತಂಕಗೊಂಡ ಜರ್ಮನ್ ರಾಯಭಾರಿ ವ್ಯಾಟಿಕನ್‌ಗೆ ಭೇಟಿಕೊಟ್ಟು, ಈ ವಿಷಯದಲ್ಲಿ ಪೋಪ್‌ನ ಪ್ರತಿಕ್ರಿಯೆ ಏನಿರಬಹುದೆಂದು ಕೇಳಿದ. ಅವನಿಗೆ ಸಿಕ್ಕ ಉತ್ತರ ಇದು : 'ಪೋಪರಿಗೆ ಇದು ಇಷ್ಟವೆಂದೇನೂ ಹೇಳಲಾಗುವುದಿಲ್ಲ. ಆದರೆ ಅವರು ಯಾರಿಗೂ ತಮ್ಮ ಈ ಬೇಸರವನ್ನು ಹೇಳಿಕೊಳ್ಳುವುದಿಲ್ಲ ಎಂಬುದು ನಮ್ಮ ನಂಬಿಕೆ'; ರಾಯಭಾರಿ ತತ್‌ಕ್ಷಣ ಬರ್ಲಿನ್‌ಗೆ ಈ ಸಂತಸದ ಸುದ್ದಿಯನ್ನು ಕಳುಹಿಸಿದ. ಎರಡು ದಿನಗಳಲ್ಲಿ ಆ ಸಾವಿರ ಜನ, ದೀರ್ಘ ಸರಣಿಯ ಮೊದಲ ಮಂದೆಯಾಗಿ ಒಶ್‌ವಿಟ್ಸ್ ಸೆರೆಮನೆ ತಲುಪಿದರು. ಯಾರ ಹೆಣವೂ ಸೆರೆಮನೆಯ ಹೊರಗೆ ಬರಲಿಲ್ಲ.

ಯೇಸುವಿನಂತಹ ಸರಳ, ನಿಷ್ಕಪಟ, ಕರುಣಾಳು, ಮಹಾವ್ಯಕ್ತಿಯ ಹೆಸರಿನಲ್ಲಿ ಒಂದು ವಿಶ್ವವ್ಯಾಪಕ, ಯುಗಕಾಲವಿಸ್ತಾರದ ಪ್ರಚಂಡ ಶಕ್ತಿಯನ್ನು ಗಳಿಸಿಕೊಂಡ ಈ ಮತದ ಚರ್ಚುಗಳು, ವ್ಯಾಟಿಕನ್ ಮತ್ತು ಅನೇಕ ಪೋಪರು ಹೇಗೆ ಹೇಗೆ ತಮ್ಮತಮ್ಮದೆ ಸ್ವಂತ ವಿಕಾರಗಳನ್ನು, ಮೂಲನೀತಿಗೆ ತದ್ವಿರುದ್ಧವಾಗಿದ್ದರೂ ಆಚರಿಸಿಯೇ ತೀರಿದರೆಂಬುದನ್ನು, ಇಂತಹ ಅಧ್ಯಯನಗಳ ಮೂಲಕ ಕಾಣಬಹುದು. ಪೂಜಾರಿಗಳು ಪೂಜ್ಯರೆನಿಸಿಕೊಂಡಾಗ ದೈವವು ಕ್ಷೀಣಿಸುತ್ತದೆ ಎಂಬ ಒಂದು ಕವನದ ಸಾಲು ನೆನಪಿಗೆ ಬರುತ್ತದೆ.

ದೇವರು ಮತ್ತು ಮತಧರ್ಮದ ಹೆಸರಿನಲ್ಲಿ ಗಳಿಸಿದ ಮಹಾಶಕ್ತಿಗಳ ದುರುಪಯೋಗ, ಸ್ವಮತೀಯ ದೀನದುರ್ಬಲರ ಮೇಲೆ ಹಿಂಸಾಚಾರ, ಸ್ವಮತೀಯ ಬಲಿಷ್ಠರ ಸ್ವೇಚ್ಛಾಚಾರಕ್ಕೆ ಸುಲಭಕ್ಷಮೆ – ಕೆಲವೊಮ್ಮೆ ಸಹಕಾರ, ಅನ್ಯಮತೀಯರಲ್ಲಿ ಹೀನಭಾವ ಮತ್ತು ಅಸಹಿಷ್ಣುತೆ – ಕೆಲವೊಮ್ಮೆ ದ್ವೇಷ, ಬಲವಂತವಾಗಿಯಾದರೂ ಮತಾಂತರಗೊಳಿಸಿ ತನ್ನ ಮತವೃದ್ಧಿಗೊಳಿಸಿಕೊಳ್ಳುವ ಗೀಳು, ತನ್ನದೇ ಮೂಲತತ್ವಕ್ಕೆ ವಿರುದ್ಧವಾದ ಸಮಯಸಾಧಕ ರೀತಿನೀತಿಗಳು, ಇವೆಲ್ಲದಕ್ಕಿಂತ ಹೆಚ್ಚಾಗಿ ದೇವರು, ಸತ್ಯ ಮತ್ತು ಧರ್ಮಗಳ ಹೆಸರಿನಲ್ಲಿ ಅಮಾನವೀಯತೆ : ಇವು ನಾವು ಕಾಣುವ ಮುಖ್ಯ ಮತೀಯ ದೋಷಗಳು. ಇಂತಹ ಯಾವ ಲೋಪದೋಷಗಳಿಂದ ತಾನೆ ಯಾವುದೇ ಮತದ ಹಿಂದಿನ ಮತ್ತು ಇಂದಿನ ಚರಿತ್ರೆಗಳು ಪೂರ್ಣ ಮುಕ್ತವಾಗಿವೆ ? ತನ್ನ ಚಟುವಟಿಕೆಗಳನ್ನು ಸತ್ಯವಾಗಿ, ನಿಷ್ಠವಾಗಿ ದಾಖಲಿಸಿಡುವ ಒಂದು ಸದ್ಗುಣದಿಂದ ಕ್ಯಾಥೊಲಿಕ್ ಮತ ಪರೀಕ್ಷೆಗೆ ಒಳಗಾಗಲು ಸಾಧ್ಯ. ಅನ್ಯ ಮತಗಳ ಚರಿತ್ರೆಗಳನ್ನು ಹೀಗೆಯೇ ಪರೀಕ್ಷಿಸುವ ಅವಶ್ಯಕತೆ ಒಂದು ಮುಚ್ಚಿಡಲಾಗದ, ಮುಂದೂಡಲಾಗದ, ಗಂಭೀರ ವಿಚಾರ.

ದೈವಭಕ್ತಿ, ಮತನಿಷ್ಠೆ, ಇನ್ನೂ ಹೆಚ್ಚಿನದಾಗಿ ಮತಶಾಸ್ತ್ರ ಪಾಂಡಿತ್ಯ, ಮತ ಗುರು ಪೀಠಾಧಿಪತ್ಯ ಇಂತಹ ಗುಣಗಳು, ಅನುಭವ, ಸಂಪನ್ನತೆಗಳು ಇದ್ದಮಾತ್ರಕ್ಕೆ ಒಬ್ಬ ಮನುಷ್ಯ, ಮಾನವೀಯತೆ, ಮಾನವ ಧರ್ಮನಿಷ್ಠೆ, ವಿಶ್ವಪ್ರೇಮ, ಲೋಕ ಕಲ್ಯಾಣದೃಷ್ಟಿ ಇಂತಹ ಸದ್ಗುಣಗಳನ್ನು ಪಡೆದಿರುತ್ತಾನೆಂಬ ರೂಢಿಗತ ಭ್ರಮೆ ವಿಶ್ವದಾದ್ಯಂತ ಎಲ್ಲ ಮತದವರಲ್ಲಿಯೂ ವ್ಯಾಪಕವಾಗಿದೆ. ಈ ಮತಲಕ್ಷಣಗಳು ಯಾವುವೂ ಮಾನವೀಯತೆಯನ್ನು ಉಂಟುಮಾಡುವ ಅಥವಾ ಪ್ರಚೋದಿಸುವ ಕಾರಕ ಅಥವಾ ಪ್ರೇರಕಗಳಲ್ಲ. ಇಂತಹ ಮತಗುರು, ಮತನಾಯಕರನ್ನೂ ನಿರಂಕುಶ ಅಧಿಕಾರ ಶಕ್ತಿಗಳು, ಅತಿಶಯದ ಐಶ್ವರ್ಯ, ವಿಜೃಂಭಣೆಗಳು, ಶಿಷ್ಯರ ದಾಸಭಕ್ತಿ, ಅಂಧಾನುಚರ್ಯೆಗಳು ಅಡ್ಡದಾರಿಗೆಳೆದೊಯ್ಯುತ್ತವೆ. ಈ ಸತ್ಯಗಳನ್ನು ಇಂತಹ ಮತಚರಿತ್ರೆಯ ಅಧ್ಯಯನಗಳ ಮೂಲಕ ತಿಳಿಯಬಹುದು.

■ ಎಂ. ಎಸ್. ಕೇಶವರಾವ್
೩೮೮, ವೆಂಕಟೇಶದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ಡಾಕು ಶಿವು

**ಯಾರೂ ಹುಟ್ಟು ಕಳ್ಳರಲ್ಲ. ಸನ್ನಿವೇಶ, ದಿನನಿತ್ಯದ ಘಟನೆಗಳು, ಸಾಮಾಜಿಕ ಪರಿಸರ ಒಬ್ಬ ವ್ಯಕ್ತಿಯು ಅಡ್ಡದಾರಿ ಹಿಡಿಯಲು ಕಾರಣವಾಗುತ್ತವೆ. ಎಷ್ಟೋ ಬಾರಿ ಇದೇ ಅಂಶಗಳು ಅಂತಹ ವ್ಯಕ್ತಿ ತನ್ನ ಮನೋಧರ್ಮವನ್ನು ತಿದ್ದಿಕೊಂಡು ಸಮಾಜದ ಮುಖ್ಯವಾಹಿನಿಗೆ ಮತ್ತೆ ಕಾಲಿರಿಸಿ ಬದುಕುವಂತೆ ಪ್ರೇರೇಪಿಸುತ್ತವೆ. ಆದರೆ ಸುತ್ತಮುತ್ತಲಿನವರ ಇಲ್ಲಸಲ್ಲದ ಸಂದೇಹಗಳು ಅನಿಶ್ಚಿತತೆಗಳು ಇಂಥ ಅವಕಾಶಗಳನ್ನು ಚಿವುಟಿ ಹಾಕುತ್ತವೆ. ಡಾಕು ಶಿವು ಅನುಭವವೂ ಅದೇ.**



**ಎ. ಶಿವಶಂಕರ ರಾವ್**

**ಶಿವು** ನನಗೆ ಪರಿಚಯವಾದದ್ದು ದಾವಣಗೆರೆ ಸಬ್ ಜೈಲಿನಲ್ಲಿ – ದಾವಣಗೆರೆ ಕಾಟನ್‌ಮಿಲ್ಲಿನ ಸುಮಾರು ೩೦ ಕಾರ್ಮಿಕರೊಂದಿಗೆ ನನ್ನನ್ನೂ ಬಂಧಿಸಿ ಸಬ್ ಜೈಲಿನಲ್ಲಿ ಕೂಡಿಹಾಕಿದ್ದ ದಿನಗಳಲ್ಲಿ. ೧೯೪೭ರ ಮೈಸೂರಿನ ಜವಾಬ್ದಾರಿ ಸರಕಾರಕ್ಕಾಗಿ ನಡೆಸಿದ ಚಳವಳಿ ಯಶಸ್ವಿಯಾದಾಗ ಕಾರ್ಮಿಕರಲ್ಲಿ ಹೊಸ ಹುರುಪು ಮೂಡಿತ್ತು. ಅದರ ಪರಿಣಾಮವಾಗಿ ಹೊಸ ಕೇಳಿಕೆಗಳನ್ನು ಮುಂದಿಟ್ಟು ಕಾರ್ಮಿಕ ಸಂಘ ಸ್ಥಾಪಿಸಿ ಸಂಘಟನಾ ಚಟುವಟಿಕೆ ಪ್ರಾರಂಭಿಸಿದ್ದರು. ಅದನ್ನು ಹೊಸಕಿ ಹಾಕಲು ಕಾಟನ್ ಮಿಲ್ಲಿನ ಮಾಲಿಕವರ್ಗ ಕಾರ್ಖಾನೆಯೊಳಗೆ ಗಲಭೆ ಹುಟ್ಟು ಹಾಕಿ, ಅನಂತರ ಲಾಕೌಟ್ ಮಾಡಿದ್ದರು. ಅದನ್ನು ಪ್ರತಿಭಟಿಸಿದ ಕಾರ್ಮಿಕ ಸಂಘದ ಮುಂದಾಳುಗಳನ್ನು ಬಂಧಿಸಿ ಕೇಸ್ ಹಾಕಲಾಗಿತ್ತು. ಕಾರ್ಮಿಕ ಸಂಘದ ಉಪಾಧ್ಯಕ್ಷನಾಗಿದ್ದ ನನ್ನನ್ನೂ ಅವರೊಂದಿಗೆ ಬಂಧನದಲ್ಲಿ ಇರಿಸಲಾಗಿತ್ತು.

ವಿಚಾರಣಾ ಖೈದಿಗಳಾಗಿದ್ದ ನಮ್ಮನ್ನು ಜೈಲಿನಲ್ಲಿ ದುಡಿಸುತ್ತಿರಲಿಲ್ಲ. ಹಾಗಾಗಿ ನಾನು ಅವರನ್ನೆಲ್ಲ ಒಟ್ಟುಗೂಡಿಸಿ, ರಾಜಕೀಯ ಕಾರ್ಮಿಕ ಚಳವಳಿ ಬಗ್ಗೆ ಪಾಠ ಮಾಡುತ್ತಿದ್ದೆ. ಇತರ ಖೈದಿಗಳೂ ಹತ್ತಿರ ಬಂದು ಕುಳಿತು ಪಾಠ ಕೇಳುತ್ತಿದ್ದರು. ಆಗ ನಮ್ಮ ಕಾರ್ಮಿಕರು ''ಹೋಗ್ರಲೇ, ನಾವು ನಿಮ್ಮ ಹಾಗೆ ಕಳ್ಳತನ ಮಾಡಿ ಬಂದದ್ದಲ್ಲ'' ಎಂದು ಅವರನ್ನು ದೂರ ಕಳಿಸಲು ಪ್ರಯತ್ನಿಸುತ್ತಿದ್ದರು.

**ಶಿವು ಸಾಮಾನ್ಯನಲ್ಲ**

ಆದರೆ ಒಬ್ಬ ಮಾತ್ರ ನಮ್ಮಿಂದ ದೂರ ಸರಿಯುತ್ತಿರಲಿಲ್ಲ. ಅವನೇ ಹೆಸರಾಂತ ಪಿಕ್‌ಪಾಕೆಟ್ ಕಳ್ಳ 'ಡಾಕು ಶಿವು' ಅಂತ ನನಗೆ ತಿಳಿಯಿತು. ಕಳ್ಳತನ ಮಾಡದಿದ್ದರೂ ಬಂಧಿಸಲ್ಪಟ್ಟ ನಮ್ಮಂತಹ ಖೈದಿಗಳನ್ನು ಅವನು ಅದೇ ಮೊದಲ ಬಾರಿ ಕಂಡಿದ್ದ. ಹಾಗಾಗಿ ಅವನು ಕುತೂಹಲದಿಂದ ನನ್ನ ಮಾತುಗಳನ್ನು ಆಲಿಸುತ್ತಿದ್ದ.

ಒಂದು ದಿನ ಅವನು ನನ್ನ ಬಳಿ ಬಂದು, ತನಗೊಂದು ಮಾಫಿ (ಕ್ಷಮಾದಾನ) ಅರ್ಜಿ ಬರೆದುಕೊಡಬೇಕೆಂದು ವಿನಂತಿಸಿದ. ನಾನು ಬರೆದುಕೊಟ್ಟೆ. ಅವನು ಅದನ್ನು ಮೇಲಧಿಕಾರಿಗಳಿಗೆ ಕಳಿಸಿದನಂತೆ.

ಶಿವು ಸಾಮಾನ್ಯ ಪಿಕ್‌ಪಾಕೆಟ್ ಕಳ್ಳನಲ್ಲ. ಸಂತೆಗಳಲ್ಲಿ, ಜಾತ್ರೆಗಳಲ್ಲಿ, ರೈಲಿನಲ್ಲಿ, ಬಸ್‌ನಿಲ್ದಾಣದಲ್ಲಿ ತನ್ನ ಕೈಚಳಕದಿಂದ ಸಂಪಾದನೆ ಮಾಡುತ್ತಿದ್ದ. ಒಮ್ಮೆ ಪೊಲೀಸರು ಅವನನ್ನು ಬಂಧಿಸಿ ಹೊಡೆದಾಗ ಅವನು ತನ್ನ ಬಾಯಿಯಲ್ಲಿ ಹಲ್ಲುಗಳು ಮತ್ತು ತುಟಿಯ ನಡುವೆ ಇಟ್ಟುಕೊಂಡಿದ್ದ ಅರ್ಧ ಬ್ಲೇಡನ್ನು ಹೊರತೆಗೆದು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮುಖಕ್ಕೇ ಬ್ಲೇಡ್ ಹಾಕಿದ್ದನಂತೆ. ಈ ಸುದ್ದಿ ಎಲ್ಲ ಕಡೆ ಹಬ್ಬಿ ಅವನು ಹೆಸರುವಾಸಿಯಾದ. ಅದಾದ ಬಳಿಕ ಅವನ ಹೆಸರಿಗೆ 'ಡಾಕು' ಎಂಬ 'ಬಿರುದು' ಸೇರಿಕೊಂಡಿತು. ಪೊಲೀಸ್ ದಾಖಲೆಗಳಲ್ಲೂ ಅವನ ಹೆಸರು ಡಾಕು ಶಿವು ಎಂದು ದಾಖಲಾಯಿತು. ಅವನ ತಮ್ಮನೂ ಅವನಂತೆಯೇ ಚಾಲಾಕಿ. ಶಿವುನ ಬಂಧನವಾಗಿ ಕೇಸ್ ಆದಾಗ, ಅವನ ತಮ್ಮ ಕಳ್ಳತನ ಮಾಡಿ ಹಣ ಸಂಗ್ರಹಿಸಿ ವಕೀಲರನ್ನಿಟ್ಟು ಕೇಸ್ ನಡೆಸುತ್ತಿದ್ದ. ತಮ್ಮ ಪೊಲೀಸರಿಗೆ ಸಿಕ್ಕಿಬಿದ್ದಾಗ ಶಿವು ಆ ಕೆಲಸ ಮಾಡುತ್ತಿದ್ದ. ಹೀಗಿತ್ತು ಅವರಿಬ್ಬರ ಪರಸ್ಪರ ಸಹಕಾರ.

**ಜೈಲಿನಿಂದ ಬಿಡುಗಡೆ**

ಅನಂತರ ಕೆಲವೇ ದಿನಗಳಲ್ಲಿ ಜೈಲಿನಿಂದ ನನ್ನ ಬಿಡುಗಡೆ ಆಯಿತು. ಕಾಟನ್‌ಮಿಲ್ಲಿನ ಕಾರ್ಮಿಕರು – ಮುಖ್ಯವಾಗಿ ಮಹಿಳಾ ಕಾರ್ಮಿಕರು – ರೈಲಿನಲ್ಲಿ ಬೆಂಗಳೂರಿಗೆ ಪ್ರಯಾಣಿಸಿ, ನಮ್ಮ ಬಿಡುಗಡೆಗೆ ಒತ್ತಾಯಿಸಿ, ಸರ್ಕಾರದ ಕಚೇರಿ ಎದುರು ಸತ್ಯಾಗ್ರಹ ಮಾಡಿದರು. ಜನಸಾಮಾನ್ಯರ ಚಳವಳಿಯ ಬಲದಿಂದ ಅಧಿಕಾರಕ್ಕೇರಿದ್ದ ಹೊಸ ಸರಕಾರ ಮುಜುಗರಪಟ್ಟು ನಮ್ಮನ್ನೆಲ್ಲ ಬಿಡುಗಡೆ ಮಾಡಿತು. ಅದಲ್ಲದೆ ಕಾರ್ಮಿಕರ ಬೇಡಿಕೆಗಳನ್ನು ಪರಿಶೀಲಿಸಲು ಒಂದು ಕಾರ್ಮಿಕ ಕೋರ್ಟನ್ನು ಸ್ಥಾಪನೆ ಮಾಡಿತು.

ನಾವು ಬಿಡುಗಡೆಯಾಗಿ ಬಂದೊಡನೆ ಕಾರ್ಮಿಕರನ್ನು ಪುನಃ ಒಂದುಗೂಡಿಸಲು ಪ್ರಾರಂಭಿಸಿದೆವು. ಆಗ ಜನ ಒಟ್ಟು ಸೇರದಂತೆ ಸೆಕ್ಷನ್ ೧೪೪ರನ್ವಯ ನಿಷೇಧಾಜ್ಞೆ ಜಾರಿಯಲ್ಲಿತ್ತು. ಆದ್ದರಿಂದ ನಮಗೆ ಕಾರ್ಮಿಕರನ್ನು ಒಂದುಗೂಡಿಸಲು ಕಷ್ಟವಾಗುತ್ತಿತ್ತು. ಆಗೊಂದು ದಿನ ಶಿವು ನನ್ನೆದುರಿಗೆ ಹಾಜರಾದ. ''ನೀನು ಹೇಗೆ ಜೈಲಿನಿಂದ ಹೊರಬಂದೆ ?'' ಎಂದು ನಾನು ಕೇಳಿದಾಗ ''ನೀವು ಬರೆದ ಮಾಫಿ ಅರ್ಜಿಯಿಂದಾಗಿ ನನ್ನ ಬಿಡುಗಡೆಯಾಯಿತು'' ಎಂದು ತಿಳಿಸಿದ. ತಾನು ಇನ್ನು ಮುಂದೆ ಕಳ್ಳತನ ಮಾಡುವುದಿಲ್ಲವೆಂದೂ ನನ್ನೊಂದಿಗೆ ಕೆಲಸ ಮಾಡುವೆನೆಂದೂ ದುಂಬಾಲು ಬಿದ್ದ. ಕೆಲವು ದಿನಗಳು ನನ್ನ ಅಂಗರಕ್ಷಕನಂತೆ ನನ್ನೊಂದಿಗೆ ತಿರುಗಾಡಿದ.

ಕಾರ್ಮಿಕರ ಒಗ್ಗಟ್ಟನ್ನು ಮುರಿಯಲಿಕ್ಕಾಗಿ, ಮಿಲ್ಲಿನ ಮಾಲೀಕರ ಪರ ಒಲಿಸಿಕೊಂಡ ಚೇಲಾಗಳನ್ನು ಒಟ್ಟುಗೂಡಿಸಿ, ದಿನದಿನವೂ ಪೇಟೆಯ ಬೀದಿಗಳಲ್ಲಿ ಅವರ ಮೆರವಣಿಗೆ ಮಾಡಿಸಿದರು. ಅದಲ್ಲದೆ ನಮ್ಮ ಮೇಲೆ ಹಲ್ಲೆ ಮಾಡಲು ಪ್ರಾರಂಭಿಸಿದರು. ಮಾಲೀಕರ ಚೇಲಾಗಳಿಗೆ ಸೆಕ್ಷನ್ ೧೪೪ ಅನ್ವಯವಾಗಲಿಲ್ಲ. ನಮ್ಮ ಕೆಲಸಗಳನ್ನು ಮಾತ್ರ ನಿಷೇಧಾಜ್ಞೆಯ ಹೆಸರಿನಲ್ಲಿ ಪ್ರತಿಬಂಧಿಸಲಾಗಿತ್ತು.

**ಮಾರಕ ಹಲ್ಲೆ**

ಒಂದು ದಿನ ಕೆಲವು ಕಾರ್ಮಿಕರು ಬಂದು ಅವರಗೆರೆ ಗ್ರಾಮದ ಕಾಟನ್‌ಮಿಲ್ ಕಾರ್ಮಿಕರು ನಮ್ಮ ಒಗ್ಗಟ್ಟನ್ನು ಮುರಿದು ಕೆಲಸಕ್ಕೆ ಹಾಜರಾಗುವರೆಂದೂ ನಾನು ಹೋಗಿ ಅವರೊಡನೆ ಮಾತನಾಡಬೇಕೆಂದೂ ಕೇಳಿಕೊಂಡರು. ಮರುದಿನ ಅಲ್ಲಿಗೆ ಹೋಗಲು ಒಪ್ಪಿಕೊಂಡೆ. ಅನಂತರ ನಮ್ಮ ಆಫೀಸಿನಿಂದ ಕೆಳಗಿಳಿದಾಗ ಚೇಲಾ ಕಾರ್ಮಿಕರು ನಮ್ಮ ಮೇಲೆ ಮುಗಿಬಿದ್ದರು. ಅವರಲ್ಲೊಬ್ಬ ನನ್ನ ಕುತ್ತಿಗೆಗೆ ಚಾಕುವಿನಿಂದ ಇರಿದ. ಆಗ ಸಾರ್ವಜನಿಕರು ಮತ್ತು ಪೊಲೀಸರು ಬಂದು ನನ್ನನ್ನು ರಕ್ಷಿಸಿದರು. ಇಲ್ಲದಿದ್ದರೆ ಅಂದೇ ನನ್ನ ಇತಿಶ್ರೀ ಆಗುತ್ತಿತ್ತು.

ಮರುದಿನ ಸಂಜೆ ನಾವು ೧೫ ಮಂದಿ ಕಾರ್ಯಕರ್ತರು ಅವರಗೆರೆ ಗ್ರಾಮದ ಕಾರ್ಮಿಕರೊಂದಿಗೆ ಮಾತನಾಡಲು ಹೋದೆವು. ಅಲ್ಲಿಗೆ ನಾವು ತಲಪಿದಾಗ ಮುನ್ನಾದಿನ ನಮ್ಮನ್ನು ಕರೆದಿದ್ದವರು ನಮ್ಮನ್ನೆಲ್ಲಾ ಒಂದು ಮನೆಯ ಅಂಗಳಕ್ಕೆ ಕರೆದೊಯ್ದರು. ಅಲ್ಲಿ ಕೆಲವು ಜನರು ಸೇರಿದಾಗ ನಾನು ಅವರೊಂದಿಗೆ ಮಾತನಾಡುತ್ತಿದ್ದಂತೆ, ಉದ್ದವಾದ ಕೋಲುಗಳನ್ನು ಹಿಡಿದುಕೊಂಡ ಕೆಲವರು ನಮ್ಮನ್ನು ಸುತ್ತುವರಿದು ನಮ್ಮ ಮೇಲೆ ಏಕಾಏಕಿ ಹಲ್ಲೆ ಮಾಡಿದರು. ನನಗೆ ಬಿದ್ದ ಏಟಿನಿಂದ ನಾನು ಮೂರ್ಛೆ ತಪ್ಪಿ ಬಿದ್ದೆ. ನನ್ನೊಂದಿಗೆ ಬಂದಿದ್ದವರು ಓಡಿಹೋದರು. ನಾನು ಸತ್ತು ಬಿದ್ದೆ ಎಂದು ಭಾವಿಸಿದ ಹಲ್ಲೆಕೋರರು ಮತ್ತೆ ನನ್ನ ಮೇಲೆ ಪ್ರಹಾರ ಮಾಡಲಿಲ್ಲ. ಆ ಹಲ್ಲೆಕೋರರು ನಮ್ಮ ಮುಂದಾಳು ಕಾಮ್ರೇಡ್ ಮುರಿಗಯ್ಯನವರನ್ನು ಬಡಿದು ಹಾಕಬೇಕೆಂದು ಬಂದಿದ್ದರು. ಅವರು ಸಿಕ್ಕಿದ್ದರೆ ಅವರನ್ನು ಅಂದು ಕೊಲೆ ಮಾಡುತ್ತಿದ್ದರು. ಆದರೆ ಅವರು ತಪ್ಪಿಸಿಕೊಂಡರು. ನನ್ನ ಹತ್ತಿರವೇ ನಿಂತಿದ್ದ ಹಲ್ಲೆಕೋರನೊಬ್ಬ, ''ನಮಗೆ ಮುರಿಗಯ್ಯ ಸಿಕ್ಕಬೇಕಿತ್ತು. ಪಾಪ, ಇವ ಯಾವ ಊರಿನವನೋ ಏನೋ ! ಇಲ್ಲಿ ಬಂದು ಸಾಯಬೇಕಾಯಿತು'' ಎಂದು ಹೇಳಿದ್ದು ನನಗೆ ಕೇಳಿಸಿತು.

ನನ್ನ ಮೇಲೆ ಮಾರಕ ಹಲ್ಲೆಯಾದ ಸುದ್ದಿ ಕೇಳಿ, ದಾವಣಗೆರೆಯ ನನ್ನ ಹಿತೈಷಿಗಳು ಹಲ್ಲೆಯ ಸ್ಥಳಕ್ಕೆ ಧಾವಿಸಿ ಬಂದರು. ನನ್ನನ್ನು ದಾವಣಗೆರೆಗೆ ಒಯ್ದರು. ಅನಂತರ

ಪೊಲೀಸ್ ವ್ಯಾನಿನಲ್ಲಿ ನನ್ನನ್ನು ಒಯ್ದು ಆಸ್ಪತ್ರೆಗೆ ಸೇರಿಸಲಾಯಿತು.

**ಶಿವು ಎಲ್ಲಿದ್ದ?**

ಇಷ್ಟೆಲ್ಲ ಆಗುವಾಗ ಈ ಎರಡೂ ದಿನಗಳು ಶಿವು ನನ್ನೊಂದಿಗೆ ಇರಲಿಲ್ಲ. ಇದರಿಂದಾಗಿ ಅವನ ಬಗ್ಗೆ ಸಂಶಯಪಟ್ಟ ಕಾರ್ಮಿಕ ಸಂಘದ ಕಾರ್ಯಕರ್ತರು ಅವನನ್ನು ಹತ್ತಿರ ಸೇರಿಸಲು ಒಪ್ಪಲಿಲ್ಲ. ಅವನನ್ನು ಅನುಮಾನದಿಂದಲೇ ನೋಡಿದರು. ಆದರೆ ಶಿವು ಮಾತ್ರ ಆಸ್ಪತ್ರೆಯಲ್ಲಿ ನನ್ನ ಪಕ್ಕದಿಂದ ಕದಲಲಿಲ್ಲ.

ತನಗೆ ಏನಾಗಿತ್ತೆಂದು ಶಿವು ತಿಳಿಸಿದ : ನಿಮ್ಮೊಂದಿಗೆ ನಾನಿದ್ದರೆ ಹಲ್ಲೆ ಮಾಡಲಾಗು ವುದಿಲ್ಲವೆಂದೂ, ಅದಕ್ಕಾಗಿ ನಿಮ್ಮಿಂದ ನನ್ನನ್ನು ದೂರ ಮಾಡಬೇಕೆಂದೂ ಬಾಡಿಗೆ ಗೂಂಡಾಗಳು ಹೇಳಿದ ಕಾರಣ ಪೊಲೀಸರು ಆ ಎರಡು ದಿನಗಳು ಲಾಕಪ್‌ನಲ್ಲಿ ಕೂಡಿಹಾಕಿದ್ದರು; ಆದ್ದರಿಂದ ನನ್ನೊಂದಿಗೆ ಇರಲಾಗಲಿಲ್ಲ ಎಂದು ಶಿವು ನನಗೆ ಹೇಳಿದ. ಇತರರು ನಂಬದಿದ್ದರೂ ನಾನು ಅವನ ಮಾತನ್ನು ನಂಬಿದೆ.

ನನ್ನ ಮೇಲೆ ಮಾರಕ ಹಲ್ಲೆಯಾದ ಸುದ್ದಿ ತಿಳಿದು ನನ್ನ ಅಣ್ಣ, ದಿವಂಗತ ಡಾ॥ ಎ. ತಿಮ್ಮಪ್ಪಯ್ಯ, ಹೊಸಪೇಟೆ ಸರಕಾರಿ ಆಸ್ಪತ್ರೆಯ ಸರ್ಜನ್ ಆಗಿದ್ದವರು, ಮರುದಿನವೇ ಬಂದು ನನ್ನನ್ನು ಆಸ್ಪತ್ರೆಯಲ್ಲಿ ನೋಡಿದರು. ಹತ್ತಿರ ಇದ್ದವರೊಡನೆ ''ಎಸ್.ಐ.ಯವರ ಆಫೀಸೆಲ್ಲಿದೆ?'' ಎಂದು ಕೇಳಿದರು. ಆಗ ಹತ್ತಿರವೇ ಇದ್ದ ಶಿವು ''ನಾನು ತೋರಿಸುತ್ತೇನೆ'' ಎಂದ. ಅವನನ್ನು ಕಾರಿನಲ್ಲಿ ಕೂರಿಸಿಕೊಂಡು ನನ್ನ ಅಣ್ಣ ಎಸ್.ಐ. ಯವರನ್ನು ಕಾಣಲು ಹೋದರು. ಪೊಲೀಸ್ ಕಚೇರಿಯವರು ಸರ್ಜನ್‌ರ ಕಾರಿನ ಮುಂದಿನ ಸೀಟಿನಲ್ಲಿ ಕುಳಿತಿದ್ದ ಶಿವುವನ್ನು ನೋಡಿ ವಿಸ್ಮಿತರಾದರು. ತಕ್ಷಣವೇ ನನ್ನ ಅಣ್ಣನನ್ನು ಎಸ್.ಐ.ಯವರ ಬಳಿ ಕರೆದೊಯ್ದರು.

ನನ್ನ ಅಣ್ಣ ನನ್ನನ್ನು ನೋಡಿ ಹಿಂತಿರುಗಿದ ಬಳಿಕ ಹತ್ತು ಹದಿನೈದು ದಿನಗಳಲ್ಲಿ ನಾನು ಚೇತರಿಸಿಕೊಂಡು ಆಸ್ಪತ್ರೆಯಿಂದ ಹೊರಬಂದೆ. ನನ್ನ ತಲೆಯ ಗಾಯಕ್ಕೆ ಬ್ಯಾಂಡೇಜ್ ಕಟ್ಟಿಕೊಂಡೇ ಕಾರ್ಮಿಕರನ್ನು ಸಂಘಟಿಸುವ ಕೆಲಸ ಮುಂದುವರಿಸಿದೆ. ಆಗಲೂ ಶಿವು ನನ್ನೊಂದಿಗೆ ಇರುತ್ತಿದ್ದ.

**ಭೂಗತನಾದಾಗ**

ಕಾರ್ಮಿಕರ ನ್ಯಾಯಾಲಯದ ಕಲಾಪದ ದಿನ ನಾವು ಪೇಟೆಯಲ್ಲಿ ಒಂದು ದೊಡ್ಡ ಮೆರವಣಿಗೆ ಮಾಡಿದೆವು. ಆಗಲೇ ನನ್ನ ಮತ್ತು ಮುರುಗಯ್ಯನ ಮೇಲೆ ಬಂಧನದ ವಾರೆಂಟ್ ಹೊರಟಿತ್ತು. ಆದ್ದರಿಂದ ನಾನು ಭೂಗತನಾಗಬೇಕಾಯಿತು.

ಹಾಗೆ ನಾನು ಭೂಗತನಾಗಿದ್ದುಕೊಂಡು, ರಾತ್ರಿ ಹೊತ್ತಿನಲ್ಲಿ ಕಾರ್ಮಿಕರನ್ನು ಭೇಟಿಯಾಗುತ್ತಾ ಸಂಘಟನೆಯ ಕೆಲಸ ಮುಂದುವರಿಸಿದಾಗ ನನ್ನನ್ನು ಕಾಣಬೇಕೆಂದು ಶಿವು ಬಹಳ ಹವಣಿಸಿದ್ದ. ಆದರೆ ನನ್ನ ಸಹಚರರು ಯಾರೂ ಅವನನ್ನು ನನ್ನ ಬಳಿಗೆ ಕರೆದು ಕೊಂಡು ಬರಲಿಲ್ಲ. ಹಾಗಾಗಿ ಭೂಗತನಾದ ಬಳಿಕ ನಾನು ಅವನನ್ನು ಭೇಟಿಯಾಗಲಿಲ್ಲ.

''ನಾನಿನ್ನು ಕಳ್ಳತನ ಮಾಡುವುದಿಲ್ಲ. ನಿಮ್ಮೊಂದಿಗೇ ಇದ್ದು ಕೆಲಸ ಮಾಡುವೆ'' ಎಂದು ಶಿವು ಹೇಳಿದ್ದನ್ನು ನಾನು ನಂಬಿದ್ದೆ. ನನಗೆ ಅವನೊಂದು ಸಂಗತಿ ತಿಳಿಸಿದ್ದ. ಜೈಲಿನಲ್ಲಿರುವಾಗ ಸಂತೆಯ ದಿನ ಜೈಲಿನ ಸಿಬ್ಬಂದಿ ತನ್ನನ್ನು ಹೊರಗೆ ಬಿಟ್ಟು, ಕಳ್ಳತನ ಮಾಡಿ ಹಣ ತಂದು ಕೊಡಬೇಕೆಂದು ಹೇಳುತ್ತಿದ್ದರೆಂದೂ ತಾನು ಹಾಗೆ ಮಾಡುತ್ತಿದ್ದುದಾಗಿಯೂ ಶಿವು ನನಗೆ ಹೇಳಿದ್ದ. ಅವನನ್ನು ಯಾರೂ ನಂಬದಿದ್ದಾಗ ಜೀವನ ನಡೆಸಲಿಕ್ಕಾಗಿ ಅವನು ಪುನಃ ಕಳ್ಳತನಕ್ಕಿಳಿದಿರಬೇಕೆಂದು ನಾನಂದುಕೊಂಡೆ.

ಅನಂತರ ನಾನು ಅವನನ್ನು ನೋಡದಿದ್ದರೂ, ನನ್ನ ಅಣ್ಣ ಶಿವುವನ್ನು ಒಮ್ಮೆ ನೋಡಿದ್ದಾಗಿ ತಿಳಿಸಿದ. ಬಳ್ಳಾರಿ ಜೈಲಿನ ಮೇಲುಸ್ತುವಾರಿಗೆ ನನ್ನ ಅಣ್ಣ ವೈದ್ಯಕೀಯ ಅಧಿಕಾರಿಯಾಗಿ ಹೋಗಿದ್ದಾಗ, ಒಬ್ಬ ಖೈದಿ ಸಲಾಂ ಹೊಡೆದನಂತೆ. ''ನೀನು ಯಾರು?'' ಎಂದು ನನ್ನ ಅಣ್ಣ ಕೇಳಿದಾಗ, ''ನಾನು ನಿಮ್ಮ ತಮ್ಮನ ಫ್ರೆಂಡು'' ಎಂದು ಉತ್ತರಿಸಿದನಂತೆ. ದಾವಣಗೆರೆಯಲ್ಲಿ ಎಸ್.ಐ. ಆಫೀಸಿಗೆ ಕರೆದೊಯ್ದದ್ದನ್ನು ಜ್ಞಾಪಿಸಿದನಂತೆ. ''ಜೈಲಿನಲ್ಲಿ ನಿನ್ನ ಫ್ರೆಂಡ್ ನನಗೆ ಸಿಕ್ಕಿದ್ದ'' ಎಂದು ನನ್ನ ಅಣ್ಣ ಹೇಳಿದಾಗ ಅದ್ಯಾರು ಎಂದು ಆಶ್ಚರ್ಯ ಪಟ್ಟಿದ್ದೆ. ಕೊನೆಗೆ ಗೊತ್ತಾಯಿತು - ಅವನು ಡಾಕು ಶಿವು ಅಂತ.

ನನ್ನ ಸಹ ಕಾರ್ಯಕರ್ತರ ಸಲಹೆಗಳನ್ನು ಕಡೆಗಣಿಸಿ ನಾನು ಆ ದಿನಗಳಲ್ಲಿ ಶಿವುನೊಂದಿಗೆ ನನ್ನ ಸಹವಾಸ ಮುಂದುವರಿಸಿದ್ದರೆ ಅವನೂ ಒಬ್ಬ ಒಳ್ಳೆಯ ಮನುಷ್ಯನಾಗಿ ಪರಿವರ್ತನೆ ಆಗುತ್ತಿದ್ದನೇನೋ... ಒಂದು ವೇಳೆ ಶಿವು ಬದಲಾಗಿದ್ದರೂ ಅವನ ಹೆಸರಿಗೆ ಅಂಟಿಕೊಂಡ ಡಾಕು ಎಂಬ 'ಬಿರುದು' ತೊಲಗುತ್ತಿರಲಿಲ್ಲ, ಅಲ್ಲವೇ?

ಎ. ಶಿವಶಂಕರ ರಾವ್. ನಿರೂಪಣೆ : **ಅಡ್ದೂರು ಕೃಷ್ಣರಾವ್**
'ಕೃಷ್ಣಾ ಫಾರ್ಮ್', ಅಡ್ದೂರು, ವಯಾ ಗುರುಪುರ
ಮಂಗಳೂರು ತಾ. ೫೭೪ ೧೪೫

# ಕನಸಾದಳು ಕನ್ನಿಕೆ



ಆ ಹುಡುಗಿ
ಸಪ್ತಸಾಗರಗಳಾಚೆ ದಾಟಿ
ಮಲ್ಲಿಗೆಯ ಬಿಡಿಸಿ ಮಾಲೆಯ ಮಾಡಿ
ಮೋಡಗಳ ಸಂದಿಗೊಂದಿಯಲ್ಲಿ
ಮಾರುತ್ತಾಳೆ ಹೂವಾಡಿಗಿತ್ತಿಯಾಗಿ!
ಮೈಮುರಿದು ಮಗ್ಗಲು ತಿರುವುತ್ತಾಳೆ
ಮೂಡಣದಿ ಎಚ್ಚೆತ್ತ ಬಾಲರವಿ
ಗುಡಿಸಲು ಕಿಂಡಿಯೊಳಗೆ ತೂರಿ
ಕಣ್ಣು ಹೊಡೆಯುತ್ತಾನೆ
ಹುಡುಗಿ ಬೆಚ್ಚಿಬಿದ್ದು ಎದ್ದು ಕೂರುತ್ತಾಳೆ!

ಆ ಹುಡುಗಿ
ಅರಮನೆಯ ಭೋಜನಾಕೂಟದಲಿ
ಸುಖಭೋಜನ ಸವಿದು ಮೈಮುರಿಯುತ್ತಿದ್ದಾಳೆ
ತಂಗಳ ರೊಟ್ಟಿಯ ತಿಂದು ಮಜ್ಜಿಗೆ ಕುಡಿದು
ಮೇಲೇಳುತ್ತಲೂ ಯವ್ವನದ ರವಿ
ಅವಳ ಮೈಬಳಸಿ ಸುಖಿಸುತ್ತಾನೆ
ಅವಳೂ ಅವ್ಯಕ್ತ ಉನ್ಮಾದದಲಿ
ಕಳೆದು ಹೋಗಿದ್ದಾಳೆ!

ಆ ಹುಡುಗಿ
ಸಖಿಯರೊಡಗೂಡಿ ಹಾಡಿ
ನಂದನವನದೊಳಗೆ ಗುಲಾಬಿಗೆ
ಮುತ್ತಿಡುತ್ತಾಳೆ!
ಗೌಡರ ಹೊಲದಲಿ ರಾಗಿಕೊಯ್ಯುತಿಹಳು
ಬೆವರ ಪನ್ನೀರಿನಲಿ ಸ್ನಾನಮಾಡಿ!
ಸಾವಿನಂಚಿನಲಿ ರವಿಯಜ್ಜ ಅವಳಿಗೆ
ಬಿಸಿಲು ತಾಗದಿರಲೆಂದು ಮೋಡದ
ಮರೆಯಲ್ಲಿ ಅಡಗಿದ್ದನ್ನು ನೆನೆದು
ಈಗವಳಗಲಿಕೆಯಿಂದ ಬಳಲಿದ್ದಾನೆ!

ಆ ಹುಡುಗಿ
ರಾತ್ರಿ ಬೆಳದಿಂಗಳ ಬಯಲಲ್ಲಿ
ಪುಟ್ಟ ಹುಡುಗರ ಹಿಂಡಿನ ನಡುವೆ
ಕಥೆ ಹೇಳುತ್ತಾಳೆ, ಕೇಕೆ ಹಾಕಿ ನಗುತ್ತಾಳೆ
ನಿದ್ದೆಯೊಳಗಿನ ರವಿಗೆ
ಕನಸಾದಳು ಕನ್ನಿಕೆ!

**ಅರುಣ್ ಜೋಳದ ಕೂಡ್ಲಿಗಿ**
ಕನ್ನಡ ವಿ. ವಿ. ಹಂಪಿ, ವಿದ್ಯಾರಣ್ಯ - ೫೮೩೨೭೬

# ವಕೀಲರಾದ ನರಿಯಣ್ಣ ಹೆಬ್ಬಾರರು

ರಾಮಣ್ಣ, ಚಂದ್ರಣ್ಣ ಒಳ್ಳೇ ಸ್ನೇಹಿತರು. ಒಟ್ಟಿಗೇ ಸಾಗರಕ್ಕೆ ಹೋಗುವರು. ಸಿನೇಮಾ ನೋಡುವರು. ರಾಮಣ್ಣನ ಬಳಿ ಎತ್ತಿನಗಾಡಿಯಿದೆ. ಚಂದ್ರಣ್ಣನಿಗಿಂತ ಆರ್ಥಿಕವಾಗಿ ಸ್ಥಿತಿವಂತ. ರಾಮಣ್ಣ ತಾನು ಜಾನುವಾರು, ಸಾಮಾನು ತರುವಾಗ ಚಂದ್ರಣ್ಣನಿಗೂ ತಂದುಕೊಡುವನು – ಹೀಗೆ ಇವರ ಸ್ನೇಹಜೀವನ ಸಾಗಿತ್ತು.

ಒಮ್ಮೆ ರಾಮಣ್ಣನಿಗೆ ಹಾಸನದಿಂದ ಎತ್ತು ತರಬೇಕು ಅನಿಸಿತು. ಚಂದ್ರಣ್ಣನನ್ನೂ ಕರೆದ. ತಾನೂ ಒಂದು ಹಸು ತರಬೇಕೆಂದುಕೊಂಡ ಚಂದ್ರಣ್ಣ. ಇಬ್ಬರೂ ಹಾಸನಕ್ಕೆ ಹೋದರು.

ರಾಮಣ್ಣ ಒಂದು ಎತ್ತನ್ನೂ, ಚಂದ್ರಣ್ಣ ಒಂದು ಗಬ್ಬದ ಹಸುವನ್ನೂ ಕೊಂಡರು. ಅವನ್ನು ನಡೆಸಿಕೊಂಡು ಊರಕಡೆ ಹೊರಟರು. ರಾತ್ರಿಯಾದಲ್ಲಿ ಇಬ್ಬರೂ ಎತ್ತು, ಹಸುಗಳನ್ನು ಮರಕ್ಕೆ ಕಟ್ಟಿ ಮಲಗುತ್ತಿದ್ದರು. ಬೆಳಿಗ್ಗೆ ಎದ್ದು ಹೊರಡುತ್ತಿದ್ದರು.

ಊರು ತಲುಪುವ ಹಿಂದಿನ ರಾತ್ರಿ ಅವರು ಉಳಿದ ಸ್ಥಳದಲ್ಲಿ ಒಂದು ಘಟನೆ ನಡೆಯಿತು. ರಾಮಣ್ಣ ಬೆಳಿಗ್ಗೆ ಎದ್ದು ನೋಡಿದಾಗ ಚಂದ್ರಣ್ಣನ ಹಸು ಕರು ಹಾಕಿತ್ತು. ತುಂಬಾ ಸುಂದರವಾದ ಹೆಣ್ಗರು. ಹೂ ಬಾಲ, ಹಣೆ ಚಂದ್ರ, ಚುರುಕು ಕಣ್ಣು. ತನ್ನ ಎತ್ತಿನ ಬಳಿ ಬಂದು ನಿಂತಿದೆ. ಎತ್ತೇ ತನ್ನ ಅಮ್ಮ ಎಂದು ತಿಳಿದು ಹಾಲು ಕುಡಿಯಲು ಮೊಲೆಗಳನ್ನು ಹುಡುಕುತ್ತಿದೆ. ರಾಮಣ್ಣನಿಗೆ ಆ ಕರುವಿನ ಮೇಲೆ ಅಪಾರ ಆಸೆಯಾಯಿತು. ಆ ಕರುವನ್ನು ತನ್ನದಾಗಿಸಿಕೊಳ್ಳಲು ಮನ ಉಪಾಯಗಳನ್ನು ಹೂಡತೊಡಗಿತು. ಇದುವರೆಗಿನ ಸ್ನೇಹ ಜೀವನ ಮರೆತೇ ಹೋಯಿತು.

ಚಂದ್ರಣ್ಣನಿಗೆ ಎಚ್ಚರವಾಯಿತು. ಹೆಣ್ಗರು ನೋಡಿ ಸಂತೋಷಪಟ್ಟ. ಕರುವಿಗೆ ಹಾಲು ಕುಡಿಸಲು ತಾಯಬಳಿ ಕರೆತರಬೇಕೆಂದು ಮುಂದಾದ. ರಾಮಣ್ಣ ಎತ್ತೇ ಈ ಕರು ಹಾಕಿದೆ, ಕರು ತನ್ನದು, ಎಂದು ಗಲಾಟೆ ತೆಗೆದ. ಚಂದ್ರಣ್ಣನಿಗೆ ದಿಗಿಲು, ಆಶ್ಚರ್ಯ. ಪರಮ ಸ್ನೇಹಿತನಾದ ರಾಮಣ್ಣ ಹೀಗೇಕೆ ಮಾಡುತ್ತಿದ್ದಾನೆ. ಇವನೊಳಗೆ ಭೂತ ಹೊಕ್ಕು ಹೀಗೆ ಮಾತನಾಡಿಸುತ್ತಾ? ತಿಳಿಯದಾಯಿತು. ಎತ್ತು ಕರು ಹಾಕೋದುಂಟಾ ಎಂದು ಕೇಳಿದರೂ ಒಪ್ಪಲೊಲ್ಲ. ಎತ್ತಿನ ಬಳಿ ಕರು ಇದೆ. ಹೀಗಾಗಿ ಕರು ಎತ್ತಿನದೇ. ಇದೊಂದೇ ರಾಮಣ್ಣನ ಮಾತು. ಹೇಗೂ ಊರಿನ ಸಮೀಪ ಇದ್ದೇವೆ. ಊರಲ್ಲಿ ಪಂಚಾಯಿತಿ ಮಾಡಿಸುವ ಎಂದು ಯೋಚಿಸಿ ಚಂದ್ರಣ್ಣ ಹಸುವಿನೊಂದಿಗೆ ಊರಿಗೆ ಬಂದ. ಎತ್ತು ಮತ್ತು ಕರುವಿನೊಂದಿಗೆ ರಾಮಣ್ಣ ಊರು ತಲುಪಿದ.

ಹಸು, ಕರು ವಿಚಾರದಲ್ಲಿ ಪರಮ ಸ್ನೇಹಿತರಲ್ಲಿ ವಿರಸ ಉಂಟಾಗಿದ್ದು ಊರಲ್ಲಿ ಸುದ್ದಿಯಾಯಿತು. ಕರು ನನ್ನ ಹಸುವಿನದು. ಎತ್ತಿನದೇ ಕರು ಎಂದು ರಾಮಣ್ಣ ಹೇಳುತ್ತಿರುವನು. ಇದರಿಂದ ನನಗೆ ಅನ್ಯಾಯವಾಗಿದೆ ಎಂದು ಊರಿನ ಪಂಚಾಯಿತರಲ್ಲಿ ನ್ಯಾಯ ದೊರಕಿಸಿಕೊಡಲು ಚಂದ್ರಣ್ಣ ಕೋರಿದ.

ರಾಮಣ್ಣ ಶ್ರೀಮಂತ. ಮೊದಲೇ ಪಂಚಾಯಿತರನ್ನು ಕಂಡು ತೀರ್ಪು ತನಗೇ ಗುಣವಾಗುವಂತೆ ಮಾತಾಡಿ ವ್ಯವಸ್ಥೆ ಮಾಡಿದ. ಪಂಚಾಯಿತಿ ಶುರುವಾಯಿತು. ಚಂದ್ರಣ್ಣ ತನ್ನ ಕೋರಿಕೆ ಮಂಡಿಸಿದ. ಎತ್ತಿನ ಬಳಿ ಕರು ಇರುವುದರಿಂದ ಕರು ರಾಮಣ್ಣನಿಗೇ ಸೇರಿದ್ದು. ಇದೇ ನ್ಯಾಯ ಎಂದು ಪಂಚಾಯಿತರು ತೀರ್ಪು ನೀಡಿದರು. ಈ ತೀರ್ಪಿನಿಂದ ಕೆಲವರಿಗೆ ಆಶ್ಚರ್ಯವಾದರೂ ಶ್ರೀಮಂತರ ಎದುರು ಮಾತಾಡಲಾರದೆ ಸುಮ್ಮನಾದರು. ಚಂದ್ರಣ್ಣ ಪೆಚ್ಚುಮೋರೆಯಲ್ಲಿ ಮನೆಗೆ ಹೋಗುತ್ತಿದ್ದಾಗ ನರಿಯಣ್ಣ ಹೆಬ್ಬಾರರು ಅಡ್ಡ ಬಂದರು. ''ಏಕೆ ಚಂದ್ರಣ್ಣ, ಮುಖ ಬಾಡಿದೆ ?'' – ಕೇಳಿದರು. ಚಂದ್ರಣ್ಣ ನಡೆದ ಕತೆ ಹೇಳಿದ. ''ಹೆದರಬೇಡ. ಶ್ರೀಮಂತರ ನ್ಯಾಯವೇ ಹೀಗೆ. ಈಗ ಸುಧಾರಣೆ ಆಗಿದೆ. ಸಾಗರದಲ್ಲಿ ನ್ಯಾಯಾಲಯ – ಕೋರ್ಟ್ – ಇದೆ. ನ್ಯಾಯ ಬೇಡಿ ಕೋರ್ಟಿಗೆ ಅರ್ಜಿ ಸಲ್ಲಿಸು.'' – ನರಿಯಣ್ಣ ಹೆಬ್ಬಾರರು ಹೇಳಿದರು. ''ನನ್ನ ಬಳಿ ಹಣವಿಲ್ಲ, ಏನು ಮಾಡಲಿ ?'' – ಚಂದ್ರಣ್ಣ ಕೇಳಿದ. ನರಿಯಣ್ಣ ಹೆಬ್ಬಾರರಿಗೆ ಉಪಾಯವೊಂದು ಹೊಳೆಯಿತು. ''ನಾನೇ ವಕಾಲತ್ತು ಮಾಡುತ್ತೇನೆ. ಇಲ್ಲಿ ಸಹಿ ಹಾಕು. ನ್ಯಾಯ ದೊರಕಿಸಿಕೊಡಿರೆಂದು ನ್ಯಾಯಾಧೀಶರಲ್ಲಿ ಮನವಿ ಮಾಡುತ್ತೇನೆ'' – ಎಂದರು ನರಿಯಣ್ಣ ಹೆಬ್ಬಾರರು.

ರಾಮಣ್ಣನಿಗೆ ಕೋರ್ಟ್‌ನೋಟೀಸ್ ಬಂತು. ರಾಮಣ್ಣ ಪ್ರಸಿದ್ಧ ವಕೀಲರನ್ನು ಕಂಡು ತನ್ನ ವಾದ ಮಂಡಿಸಲು ಹೇಳಿದ. ನ್ಯಾಯಾಧೀಶರಲ್ಲಿ ತನ್ನ ಹಣದ ಪ್ರಭಾವ ಬೀರಲೂ ವಕೀಲರಲ್ಲಿ ಮನವಿ ಮಾಡಿದ. ಕೇಸು ಗೆಲ್ಲಲೇಬೇಕೆಂಬುದು ರಾಮಣ್ಣನ ಹಠವಾಗಿತ್ತು. ಪ್ರಸಿದ್ಧ ವಕೀಲರು ಒಪ್ಪಿಕೊಂಡರು. ಎದುರಿಗೆ ಯಾವ ವಕೀಲರು ವಾದಿಸುತ್ತಾರೆ ಎಂದು ಕುತೂಹಲಗೊಂಡರು. ಯಾರಾದರೂ ಆಗಲಿ, ನ್ಯಾಯಾಧೀಶರ ಮೇಲೆ ತಮ್ಮ ಪರವಾಗಿ ನ್ಯಾಯ ನೀಡಲು ಪ್ರಭಾವ ಬೀರುವುದನ್ನು ಮರೆಯಬಾರದು. ರಾಮಣ್ಣ ಶ್ರೀಮಂತನಲ್ಲವೇ ? ಕೇಸು ಗೆದ್ದರೆ ದೊಡ್ಡ ಮೊತ್ತವೇ ಸಿಗುವುದಿಲ್ಲವೇ ? ತಲೆಯಲ್ಲಿ ಆಸೆಯ ಗರಮ ಬಿಗಿದುಕೊಳ್ಳತೊಡಗಿತು !

ನರಿಯಣ್ಣ ಹೆಬ್ಬಾರರು ಪ್ಯಾಂಟು, ಕೋಟು ಹೊಲಿಸಿದರು. ತೀರ್ಪಿನ ದಿನ ಫೈಲು ಹಿಡಿದು ಕೋರ್ಟಿಗೆ ಬಂದರೆ ಎಲ್ಲರಿಗೂ ಆಶ್ಚರ್ಯ. ನರಿಯಣ್ಣ ಹೆಬ್ಬಾರರು ವಾದ ಹೂಡುತ್ತಾರಾ ? ಆಹಾ ! ಇದೇನು ಕತೆ ಎಂದು ಕುತೂಹಲಗೊಂಡರು.

ವಾದ ವಿವಾದ ಪ್ರಾರಂಭವಾಯಿತು. ''ಚಂದ್ರಣ್ಣನವರ ಹಸು ರಾತ್ರಿ ಕರು ಹಾಕಿದೆ. ದಿಕ್ಕು ತಿಳಿಯದೇ ಎತ್ತಿನ ಬುಡದಲ್ಲಿ ನಿಂತಿದೆ ಅಷ್ಟೆ. ಚಂದ್ರಣ್ಣ ಗಬ್ಬದ ಹಸು ಕೊಂಡಿದ್ದಾನೆ. ಕರು ಚಂದ್ರಣ್ಣ ಕೊಂಡ ಹಸುವಿನದು. ಕರು ಚಂದ್ರಣ್ಣನಿಗೇ ಸಲ್ಲುವಂಥದು. ನ್ಯಾಯಾಧೀಶರು ನ್ಯಾಯ, ಅನ್ಯಾಯ ಪರಾಂಬರಿಸಿ ನಮಗೆ ನ್ಯಾಯ ದೊರಕಿಸಿರಿ'' – ಎಂದು ಹೇಳಿದ ನರಿಯಣ್ಣ ಹೆಬ್ಬಾರರು ಕಣ್ಣು ಮುಚ್ಚಿ ತೂಕಡಿಸತೊಡಗಿದರು. ಚಂದ್ರಣ್ಣನಿಗೆ ಹೆದರಿಕೆಯೋ ಹೆದರಿಕೆ. ನರಿಯಣ್ಣ ಹೆಬ್ಬಾರರು ಸರಿಯಾಗಿ ವಾದ ಮಾಡುತ್ತಾರೋ ಇಲ್ಲವೋ ಎಂಬ ಪುಕ್ಕಲು ಮೊದಲಿಂದಲೂ ಚಂದ್ರಣ್ಣನಿಗಿತ್ತು. ಆದರೆ ಹಣವಿಲ್ಲದ ಕಾರಣ ನರಿಯಣ್ಣ ಹೆಬ್ಬಾರರೇ ವಾದ ಹೂಡಲು ಮುಂದಾದ ಕಾರಣ ಒಪ್ಪಿಕೊಂಡಿದ್ದಾಗಿತ್ತು.

ಎತ್ತಿನ ಬಳಿ ಕರು ಇದ್ದಿದ್ದರಿಂದ ಕರು ಎತ್ತಿನದೇ, ಕರು ಹಾಕಿದ್ದು ಎತ್ತೇ. ಆದ್ದರಿಂದ ಕರು ರಾಮಣ್ಣನಿಗೆ ಸಲ್ಲಬೇಕು ಎಂದು ರಾಮಣ್ಣನ ವಕೀಲರು ಪ್ರತಿವಾದ ಮಾಡಿದರು. ಕರು ವಾದಿಗಳದ್ದು ಎಂಬುದಕ್ಕೆ ಸಾಕ್ಷಿ ನೀಡಬಲ್ಲಿರಾ ಎಂದು ನ್ಯಾಯಾಧೀಶರು ಕೇಳಿದಾಗ ನರಿಯಣ್ಣ ಹೆಬ್ಬಾರರು ತೂಕಡಿಸುತ್ತಿದ್ದರು. ನ್ಯಾಯವಾದ ವಾದ ಇಲ್ಲೂ ಬಿದ್ದುಹೋದರೆ ಗತಿ ಏನು ಅನಿಸಿದ ಚಂದ್ರಣ್ಣನಿಗೆ ನಿದ್ರಿಸುತ್ತಿದ್ದ ನರಿಯಣ್ಣ ಹೆಬ್ಬಾರರನ್ನು ನೋಡಿ ದಿಗಿಲಾಯಿತು. ನ್ಯಾಯಾಧೀಶರು ಮತ್ತೊಮ್ಮೆ ಕೇಳಿದರು. ನರಿಯಣ್ಣ ಹೆಬ್ಬಾರರು ತೂಕಡಿಸುತ್ತಲೇ ಇದ್ದಾರೆ. ನ್ಯಾಯಾಧೀಶರಿಗೆ ಸಿಟ್ಟು ಬಂತು. ''ಏನಿದು ಅನುಚಿತ ವರ್ತನೆ ? ಕೋರ್ಟಿನಲ್ಲಿ ನಿದ್ದೆಯೋ ? ಮನೆಯಲ್ಲಿ ಮಲಗಲು ಜಾಗವಿಲ್ಲವೆ ?'' – ಅಬ್ಬರಿಸಿದರು. ನರಿಯಣ್ಣ ಹೆಬ್ಬಾರರನ್ನು ವಕೀಲರಾಗಿ ನೇಮಿಸಿ ಸೋತೆ ಎಂದು ಚಂದ್ರಣ್ಣ ತುಂಬಾ ಬೇಸರ ಮಾಡಿಕೊಂಡ. ಇತ್ತ ರಾಮಣ್ಣನಿಗೆ ಖುಷಿಯೋ ಖುಷಿ. ಗೆಲವು ತನ್ನದು. ಕರು ತನಗೇ ದಕ್ಕಿತು ಅಂದುಕೊಳ್ಳುತ್ತಿರುವಾಗ ನರಿಯಣ್ಣ ಹೆಬ್ಬಾರರು ಎದ್ದರು. ಕೋಟು ಸರಿಮಾಡಿಕೊಂಡರು. ''ವಾದ ಮಾಡೋದು ಬಿಟ್ಟು ನಿದ್ದೆ ಮಾಡ್ತೀರಲ್ಲಾ, ಏನಾಗಿದೆ ನಿಮಗೆ ?'' – ನ್ಯಾಯಾಧೀಶರು ಕೇಳಿದರು. ''ಕ್ಷಮಿಸಿ ಸ್ವಾಮೀ, ನಿನ್ನೆ ರಾತ್ರಿ ವರದಾ ನದಿಗೆ ಬೆಂಕಿ ಬಿದ್ದಿತ್ತು. ನಂದಿಸಲು ಹೋಗಿ ನಿದ್ರೆಗೆಟ್ಟೆ. ಈಗ ತೂಕಡಿಕೆ ಬರುತ್ತಿದೆ'' - ನರಿಯಣ್ಣ ಹೆಬ್ಬಾರರು ಹೇಳುತ್ತಿದ್ದಂತೆ ಕೋರ್ಟಿಗೆ ಕೋರ್ಟೇ ನಕ್ಕಿತು. ನದೀಗೆ ಬೆಂಕಿ ಬೀಳೋದುಂಟಾ ? ಸುಳ್ಳು ಹೇಳೋದಕ್ಕೂ ಒಂದು ಮಿತಿ ಇಲ್ಲವಾ ? ಸತ್ಯವನ್ನೇ ಹೇಳುತ್ತೇನೆ. ಸತ್ಯವನ್ನಲ್ಲದೆ ಬೇರೆ ಏನೂ ಹೇಳುವುದಿಲ್ಲ ಎಂದು ಭಗವದ್ಗೀತೆ ಮುಟ್ಟಿ ಹೇಳಿದ್ದು ಮರೆತುಹೋಯಿತಾ ? ರಾಮಣ್ಣನ ವಕೀಲರು ಕೇಕೆ ಹಾಕುವಂತೆ ಕೇಳಿದರು. ''ಶಾಂತಿ, ಶಾಂತಿ, ಇದು ನ್ಯಾಯಾಲಯ ಕೋರ್ಟ್. ಇಲ್ಲಿ ಸುಳ್ಳು ಹೇಳಬಾರದು. ನದೀಗೆ ಎಂದಾದರೂ ಬೆಂಕಿ ಬೀಳೋದುಂಟಾ?'' - ನ್ಯಾಯಾಧೀಶರು ನರಿಯಣ್ಣ ಹೆಬ್ಬಾರರನ್ನು ಕೇಳಿದಾಗ ಇವರು ಹೇಳಿದರು : ''ನಿಮ್ಮ ಮಾತು ಒಪ್ಪಿಕೊಳ್ತೇನೆ ಸ್ವಾಮೀ, ನಮ್ಮ ಕೇಸೂ ಹೀಗೇ ಅಲ್ವೇ ? ಎತ್ತು ಎಂದಾದರು ಕರು ಹಾಕೋದುಂಟೇ ? ನಮಗೆ ನ್ಯಾಯ ಕೊಡಿ'' ಎಂದಾಗ ಎಲ್ಲರ ಬಾಯಿ ಕಟ್ಟಿತು.

ಪ್ರಸಿದ್ಧ ವಕೀಲರು ಭಗವದ್ಗೀತೆಯ ಪುಸ್ತಕವನ್ನು ತದೇಕ ನೋಡಿದರು. ತಲೆ ತಗ್ಗಿತು. ರಾಮಣ್ಣನ ಕಾಲುಗಳು ಕೋರ್ಟಿನಿಂದ ಹೊರಬೀಳತೊಡಗಿತು.

ಕರು ಹಸುವಿನದು. ಹಸುವಿನ ಯಜಮಾನ ಚಂದ್ರಣ್ಣನಿಗೇ ಕರು ಸಲ್ಲತಕ್ಕದ್ದು ಎಂದು ನ್ಯಾಯಾಧೀಶರು ಹೇಳಿದಾಗ ಚಂದ್ರಣ್ಣನ ಮುಖ ಅರಳಿತು.

ಬಂದಗದ್ದೆ ರಾಧಾಕೃಷ್ಣ
ಕೆಳದಿ-೫೭೭೪೦೧, ಸಾಗರ - ಶಿವಮೊಗ್ಗ

# ಕಪ್ಪು - ಬಿಳಿ, ಮೇಲು - ಕೀಳು : ಒಂದು ಅನಿಸಿಕೆ

ಬಣ್ಣಗಳು ಮನುಷ್ಯನ ಬದುಕಿನಲ್ಲಿ ಎಷ್ಟು ಹಾಸು ಹೊಕ್ಕಾಗಿವೆ ಎಂದರೆ ಬಣ್ಣಗಳಿಂದ ತನ್ನ ಬದುಕನ್ನು ಆತ ಪ್ರತ್ಯೇಕಿಸಲಾರ. ಬಣ್ಣದ ಮೂಲಕ ಆತ ವಸ್ತುಗಳನ್ನು ಪ್ರತ್ಯೇಕಿಸುತ್ತಾನೆ; ಅಲಂಕಾರವಾಗಿ, ಸಂಕೇತವಾಗಿ ಬಳಸುತ್ತಾನೆ. ಆದರೆ ಪ್ರಾಕೃತಿಕವಾದ ಈ ಬಣ್ಣಗಳನ್ನು ಆತ ಒಂದು ಸಮುದಾಯ ಅಥವಾ ಜಾತಿಯನ್ನು ಗುರುತಿಸಲು ಬಳಸಿದ್ದು ಇಂದು ದುರಂತವಾಗಿ ಪರಿಣಮಿಸಿದೆ. ಬಣ್ಣಗಳು ದ್ವೇಷದ ಸಂಕೇತಗಳಾಗಿವೆ. ಮಾನವ ಎಷ್ಟು ಸಂಕುಚಿತನಾಗಿದ್ದಾನೆಂದರೆ ಜೀವವಿಲ್ಲದ ಬಣ್ಣವನ್ನು ದ್ವೇಷಿಸತೊಡಗಿದ್ದಾನೆ.

ಕಪ್ಪು ಕೆಳವರ್ಗದವರನ್ನು, ಅಸ್ಪೃಶ್ಯರನ್ನು, ಸೂಚಿಸುವ ಬಣ್ಣ. ಬಿಳಿ ಶ್ರೇಷ್ಠರನ್ನು ಉತ್ತಮರನ್ನು ಸೂಚಿಸುವ ಬಣ್ಣ. ಹಸಿರು ಮುಸ್ಲಿಮರನ್ನು ಸೂಚಿಸುವ ಬಣ್ಣ. ಕೇಸರಿ ಹಿಂದೂಗಳನ್ನು ಸೂಚಿಸುವ ಬಣ್ಣ. ಇಂದು ಜಾತಿ, ಗುಂಪುಗಳ ಘರ್ಷಣೆ ಎಷ್ಟು ತೀವ್ರವಾಗಿದೆಯೆಂದರೆ ಬಣ್ಣಬಣ್ಣಗಳೇ ಕಚ್ಚಾಡುತ್ತಿರುವಂತೆ ಭಾಸವಾಗುತ್ತದೆ. ಕಪ್ಪು ಮತ್ತು ಬಿಳಿಯ ಬಣ್ಣಗಳನ್ನೇ ತೆಗೆದುಕೊಳ್ಳೋಣ. ವೈಜ್ಞಾನಿಕವಾಗಿ ನೋಡಿದರೆ ಈ ಬಣ್ಣಗಳ ನಡುವೆ ಇರುವ ವ್ಯತ್ಯಾಸ ಅತ್ಯಲ್ಪ. ವಿವಿಧ ಏಳು ಬಣ್ಣಗಳು ಬೆರೆತಾಗ ಬಿಳಿ ಬಣ್ಣ ಉಂಟಾಗುತ್ತದೆ. ಬೆಳಕಿನ ಕಿರಣದ ಬಣ್ಣ ಬಿಳಿಯಾದ್ದರಿಂದ ಅದು ಯಾವುದೇ ಒಂದು ವಸ್ತುವಿನ ಮೇಲೆ ಬಿದ್ದಾಗ ಆ ವಸ್ತು ಎಲ್ಲ ಬಣ್ಣಗಳನ್ನು ಹೀರಿ ಕೇವಲ ಒಂದನ್ನು ಪ್ರತಿಫಲಿಸುತ್ತದೆ. ಹೀಗೆ ಬೇರೆ ಬೇರೆ ವಸ್ತುಗಳು ಬೇರೆ ಬೇರೆ ಬಣ್ಣಗಳನ್ನು ಪ್ರತಿಫಲಿಸುತ್ತವೆ. ಆದರೆ ಕಪ್ಪು ಎಲ್ಲ ಬಣ್ಣಗಳನ್ನು ಹೀರಿಕೊಳ್ಳುತ್ತದೆ. ಯಾವುದನ್ನೂ ಪ್ರತಿಫಲಿಸುವುದಿಲ್ಲ. ಇದನ್ನು ದಲಿತರಿಗೆ ಹಾಗೂ ಶೋಷಕರಿಗೆ ಹೊಂದಿಸಿ ಹೀಗೆ ಹೇಳಬಹುದೇನೋ : ಬಿಳಿಯರು ತಮ್ಮ ಶಕ್ತಿಯನ್ನು ಶೋಷಣೆಯ ಮೂಲಕ ದಲಿತರ ಮೇಲೆ ಹೇರಿದಾಗ, ಎದಿರೇಟು ಕೊಡಲಾಗದ ದಲಿತರು ಎಲ್ಲವನ್ನೂ ಸಹಿಸಿಕೊಂಡು ದಶಕಗಳಿಂದ ಕಪ್ಪಾಗುತ್ತಾ ಬರುತ್ತಿದ್ದಾರೆ. ಒಂದು ವಸ್ತುವು ಕಪ್ಪಾಗಲು ಬಿಳಿ ಬಣ್ಣ ಇರಲೇಬೇಕು. ಹಾಗೆ ಅದು ಕಪ್ಪಾಗಲು ಅದು ಏನನ್ನೂ ಪ್ರತಿಫಲಿಸದೆ ಇರುವುದು ಕೂಡಾ ಕಾರಣವಾಗುತ್ತದೆ. ಅಂತೆಯೇ ಬಿಳಿಯರ ಶೋಷಣೆ, ದಲಿತರ ಜಡತೆ ಇವೆರಡು ಕೂಡಾ ಅಸ್ಪೃಶ್ಯತೆಗೆ ಪೂರಕವಾಗುತ್ತವೆ.

ಈ ಬಣ್ಣಗಳು ಚಾರಿತ್ರಿಕ ಕಾರಣಗಳಿಂದ ಒಂದು ವರ್ಗಕ್ಕೆ ಸಂಕೇತವಾದುವು. ಮೇಲುಕೀಳಾದುವು. ಆಫ್ರಿಕಾ ಕಪ್ಪು ಬಣ್ಣದ ನೀಗ್ರೊ ಜನರ ತವರೂರು. ಸುಮಾರು ಕ್ರಿ.ಪೂ. ೧೩ನೇ ಶತಮಾನದಿಂದ ಗುಲಾಮರ ವ್ಯಾಪಾರ ಯುರೋಪ್, ಅರಬ್, ರಾಷ್ಟ್ರಗಳಲ್ಲಿ ಪ್ರಾರಂಭವಾಯಿತು. ಯೂರೋಪಿಯನ್ನರು ನೀಗ್ರೋಗಳನ್ನು ಬಂಧಿಸಿ, ತಮ್ಮ ಗುಲಾಮರಾಗಿ ಒಯ್ದರು. ಅರಬರ ಮುಖಾಂತರ ಈ ಜನರು ಯುರೋಪಿನ ಬಹುಭಾಗವನ್ನೆಲ್ಲಾ ಹರಡಿಕೊಂಡರು. ಇಲ್ಲಿಂದ ಕಪ್ಪು ಬಿಳಿಯರ ನಡುವಿನ ಅಂತರ ಶುರುವಾಯಿತೆನ್ನಬಹುದು. ಬಿಳಿಯರು ಆಳುವ ವರ್ಗದವರಾದರು. ಕಪ್ಪು ಜನ ಗುಲಾಮರಾದರು. ಅನಂತರ ಅಮೆರಿಕ, ಆಫ್ರಿಕಾದಲ್ಲಿ ಅನೇಕ ಹೋರಾಟಗಳು ನಡೆದು ಕಪ್ಪುಜನರು ಬಿಳಿಯರಂತೆಯೇ ಹಕ್ಕುಗಳನ್ನು ಪಡೆದಿದ್ದಾರೆ. ಆದರೆ ಸಾಮಾಜಿಕ ದೃಷ್ಟಿಯಲ್ಲಿ ಅವರಿಗೆ ಸ್ಥಾನಮಾನವಿದೆಯೇ ಎಂಬುದೇ ಪ್ರಶ್ನೆ.

ಭಾರತದಲ್ಲಿ ನಾವು ಆರ್ಯರ ಆಗಮನದ ಮೂಲಕ ಈ ಕಪ್ಪು ಬಿಳುಪಿನ ವ್ಯತ್ಯಾಸವನ್ನು ವಿಶ್ಲೇಷಿಸಬಹುದು. ಆರ್ಯರು ಭಾರತಕ್ಕೆ ಬಂದಾಗ ಇಲ್ಲಿನ ನಿವಾಸಿಗಳಾದ ದಾಸರು ಕಪ್ಪು ಬಣ್ಣದವರು. ಆರ್ಯರು ಹಾಗೂ ದಸ್ಯುಗಳ ನಡುವೆ ಹೋರಾಟ ನಡೆದಾಗ ದಸ್ಯುಗಳು ಸೋತರು. ಅಲ್ಲಿಂದ ಆರ್ಯರು ಅವರನ್ನು ಗುಲಾಮರನ್ನಾಗಿ ಕಾಣತೊಡಗಿದರು. ಅವರ ಸಂಸ್ಕೃತಿ, ಆಡುವ ಭಾಷೆ ಎಲ್ಲವೂ ಆರ್ಯರಿಗೆ ಅಪರಿಚಿತವಾಗಿದ್ದವು. ತ್ರಿವರ್ಣಗಳಿದ್ದ ಅವರ ಸಮಾಜದಲ್ಲಿ, ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ,ದಸ್ಯುಗಳ ಜೊತೆಗೆ ಶೂದ್ರ ಎಂಬ ಇನ್ನೊಂದು ವರ್ಣವೂ ಸೇರಿತು. ಕೊನೆಗೆ ಈ ವರ್ಣಕ್ಕೆ ಅಸಹಾಯಕರ ಹೊಸ ಸೇರ್ಪಡೆಗಳಾದುವು. ಮುಂದೆ ಪುರೋಹಿತಶಾಹಿ ಬೆಳೆಯುತ್ತಿದ್ದಂತೆ ಇವರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳಲಾಯಿತು. ಹೀಗೆ ಬೆಳೆದುಬಂದ ಈ ಪರಂಪರೆ ಭಾರತದಲ್ಲಿ ಗಟ್ಟಿಯಾಗಿ ಬೇರೂರಿತು. ಶೂದ್ರರಿಗೆ ಕಪ್ಪು ಬಣ್ಣ ಆರೋಪಿಸಿ, ಅವರೊಡನೆ ಕಪ್ಪು ಬಣ್ಣವು ಕೀಳಾಯಿತು. ಅನಂತರ ಬ್ರಿಟಿಷರ ಆಳ್ವಿಕೆಯಲ್ಲಿ ನಾವು ಈ ವ್ಯತ್ಯಾಸವನ್ನು ಗಮನಿಸಬಹುದು. ಬ್ರಿಟಿಷರು ಬಿಳಿಯರು, ಭಾರತದವರು ಅವರಿಗೆ ಹೋಲಿಸಿದರೆ ಹೆಚ್ಚಾಗಿ ಕಪ್ಪಿನವರು. ಈ ಎಲ್ಲಾ ಅಂಶಗಳು ಇಡೀ ಭಾರತೀಯ ಸಮಾಜವನ್ನು ಕಪ್ಪು ಕೀಳೆಂದು, ಬಿಳಿ ಶ್ರೇಷ್ಠವೆಂದು ಪ್ರಭಾವಿತಗೊಳಿಸಿವೆ. ಈ ಭಾವನೆಯ ಜೊತೆಗೇ ದಲಿತರು ನಿರಂತರವಾಗಿ ದಮನಕ್ಕೆ ಒಳಗಾಗುತ್ತಿದ್ದಾರೆ.

ಇತಿಹಾಸದಿಂದ ಈ ಬಣ್ಣಗಳಿಗೆ ಇಂತಹ ಅರ್ಥ ಬಂತು ಎನ್ನುವುದಾದರೆ ಒಂದು ವೇಳೆ ಇತಿಹಾಸದ ಘಟನೆಗಳು ಬೇರೆ ರೀತಿ ನಡೆದಿದ್ದರೆ, ಕರಿಯರ ಬದಲು ಬಿಳಿಯರು ಸೋತಿದ್ದರೆ, ಇವತ್ತಿನ ಪರಿಸ್ಥಿತಿ ಭಿನ್ನವಾಗಿರುತ್ತಿತ್ತು. ಅದಲ್ಲದೆ ಮನುಷ್ಯನ ಬಣ್ಣ ಬದಲಾಗುವುದು ಪ್ರಾಕೃತಿಕ ಅಥವಾ ಜನಾಂಗೀಯ ಕಾರಣಗಳಿಂದಾಗಿ ಎನ್ನುತ್ತಾರೆ. ಆದ್ದರಿಂದ ಬಣ್ಣವನ್ನೇ ಆಧಾರವಾಗಿಟ್ಟುಕೊಂಡು ಒಬ್ಬರನ್ನು ಹಳಿಯುವುದು, ಅವರ ಜೀವನ ವಿಧಾನ, ವಿಚಾರಗಳನ್ನು ತುಚ್ಛೀಕರಿಸುವುದು ಹಾಸ್ಯಾಸ್ಪದವಾಗಿ ಕಾಣುತ್ತದೆ. ಇನ್ನೂ ಹೇಳುವುದಾದರೆ ಬಣ್ಣವಲ್ಲದೆ ಜಾತಿ, ಧರ್ಮದ ಆಧಾರದ ಮೇಲೆ ವ್ಯಕ್ತಿಯನ್ನು ಅಳೆಯುವುದು ಕೂಡಾ ಹಾಸ್ಯಾಸ್ಪದವೇ.

ಈ ಬೆಳವಣಿಗೆಗೆ ದಲಿತ ವರ್ಗದ ಮೌನ, ಜಡತೆ ಕೂಡಾ ಪೂರಕವಾಗುತ್ತದೆ. ದಲಿತರು ಅನ್ಯಾಯ ನಡೆದಾಗ ಕೂಡಾ 'ಪೂರ್ವಜನ್ಮದ ಕರ್ಮ', 'ಹಣೆಬರಹ' ಎಂದೆಲ್ಲಾ ಬಡಬಡಿಸಿ ಸುಮ್ಮನೆ ಸಹಿಸಿಬಿಡುತ್ತಾರೆ. ಯಾರೋ ಒಂದಿಬ್ಬರು ಪ್ರತಿಭಟಿಸಿದರು ಕೂಡಾ ತಮ್ಮದೇ ಜನರ ಸಹಕಾರವಿಲ್ಲದೆ ಸೋತುಹೋಗುತ್ತಾರೆ. ಹೀಗಿರುವಾಗ ದಲಿತರಲ್ಲಿ ಜಾಗೃತಿ ಮೂಡಿಸುವುದು ಅಗತ್ಯವಾಗುತ್ತದೆ. ಹಲವು ದಶಕಗಳಿಂದ ಮೀಸಲಾತಿ ಹಾಗೂ ಇನ್ನಿತರ ಕಾರ್ಯಕ್ರಮಗಳ ಮೂಲಕ ದಲಿತರು ಅಲ್ಪಸ್ವಲ್ಪ ಪ್ರಯೋಜನ ಪಡೆದರು, ನಿಜ. ಆದರೆ ಅದೆಲ್ಲ ಕೆಲವೇ ಕೆಲವು ದಲಿತರ ಪಾಲಾಗುತ್ತಿದೆ. ಅವರೇ ಅದರ ಎಲ್ಲ ಪ್ರಯೋಜನಗಳನ್ನು ಬಾಚಿಕೊಳ್ಳುತ್ತಿದ್ದಾರೆ. ದಲಿತ ನಾಯಕರಿಂದಲೇ ದಲಿತರಿಗೆ ಸಹಾಯ ಸಿಗುತ್ತಿಲ್ಲ.

ಇಂತಹ ಸಂದರ್ಭದಲ್ಲಿ ಕರಿ, ಬಿಳಿಗಳೆರಡು ಒಂದಕ್ಕೊಂದು ಪೂರಕವಾಗಿರಬೇಕು. ದಲಿತೇತರ ಜನರಲ್ಲಿ ಈ ಭೇದದ ಟೊಳ್ಳುತನದ ಬಗ್ಗೆ ಅರಿವು ಮೂಡಬೇಕು. ಜೊತೆಗೆ ದಲಿತರು ಸಾಮೂಹಿಕವಾಗಿ ಎದ್ದು ನಿಲ್ಲಬೇಕು. ಇಲ್ಲಿ ದಲಿತರು ಹೋರಾಡಬೇಕಿರುವುದು ತಮ್ಮದೇ ವಿಶಿಷ್ಟ ಹಿನ್ನೆಲೆಯಲ್ಲಿ. ಇಲ್ಲದಿದ್ದರೆ ಅವರು ಕೂಡಾ ಅಧಿಕಾರಿಶಾಹಿ ಜೊತೆ ಒಂದಾಗಿಬಿಡಬಹುದು. ತಮ್ಮದೇ ಆದ ಸಂಸ್ಕೃತಿ, ಜೀವನ ವಿಧಾನವನ್ನು ತಿರಸ್ಕರಿಸದೆ, ಅದರ ಜೊತೆಗೆ ಅವರು ಮೇಲ್ವರ್ಗದವರೆಂದು ಎನಿಸಿಕೊಂಡಿರುವವರ ಜೊತೆಗೆ ಸರಿಸಮಾನರಾಗಿ ಬಾಳಬೇಕು. ಹೀಗೆ ಎರಡೂ ವರ್ಗಗಳಲ್ಲಿ ಜಾಗೃತಿ ಉಂಟಾದಾಗ ಕಪ್ಪು, ಬಿಳಿ ಬಣ್ಣಗಳು, ಬಣ್ಣಗಳಾಗಿಯೇ ಉಳಿಯಬಹುದು, ದ್ವೇಷದ ಸಂಕೇತಗಳಾಗಿ ಅಲ್ಲ.

**ಅಮೀನಾ ಮೆಂಡೋನ್ಸಾ**
ಜೋಗಲ್ ಬೆಟ್ಟು, ಎಸ್. ಬಿ. ಸಿ. ರಸ್ತೆ, ಕಾರ್ಕಳ - ೫೭೪ ೧೦೪




ಮೈಸೂರಿನ ಸಂತಫಿಲೋಮಿನ ಕಾಲೇಜಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಸೆಪ್ಟೆಂಬರ್ ೪ರಿಂದ ೬ರವರೆಗೆ ನಡೆಯಿತು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಪ್ರಾಂಶುಪಾಲರಾದ ರೆ. ಫಾ. ಎಂ. ವಿನ್ಸೆಂಟ್, ಪ್ರಾಧ್ಯಾಪಕ ಸದೆಬೋಸ್ ಜೇಕಬ್ ಚಾಂಡಿ, ಜಾನ್ ಸಿಲ್ವೆ ಮತ್ತು ಶ್ರೀಮತಿ ಮಂಜುಳಾ.

**HOSATHU** Kannada Monthly / October 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ನಿಮ್ಮ ಅರಿವಿನ ವಿಸ್ತರಣೆಗಾಗಿ
# ನವಕರ್ನಾಟಕದ ಪದಕೋಶಗಳು




**ರೂ. 160 ಪುಟ : 280**




**ರೂ. 150 ಪುಟ : 448**



**ರೂ. 500 ಪುಟ : 460**




**ರೂ. 200 ಪುಟ : 372**




**ರೂ. 100 ಪುಟ : 248**




**ರೂ. 140 ಪುಟ : 352**

ಸ್ಥಳೀಯ ಪುಸ್ತಕದಂಗಡಿಯಲ್ಲಿ ವಿಚಾರಿಸಿ ಇಲ್ಲವೇ ನಮಗೆ ಬರೆಯಿರಿ.

ರಿಜಿಸ್ಟರ್ಡ್ ಬುಕ್ ಪೋಸ್ಟ್ ಮೂಲಕ ಪಡೆಯಲು ಪುಸ್ತಕದ ಬೆಲೆಯೊಂದಿಗೆ ರೂ. 25 ಸೇರಿಸಿ, ಎಂ. ಓ. ಅಥವಾ ಡಿ. ಡಿ.ಯನ್ನು ಈ ವಿಳಾಸಕ್ಕೆ ಕಳಿಸಿಕೊಡಿ



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159, ಬೆಂಗಳೂರು - 560 001

✆ : 2203580/81/82 E-mail: nkp@bgl.vsnl.net.in Website : www.navakarnatakabooks.com

ಶಾಖೆಗಳು : ಬೆಂಗಳೂರು ✆ 2251382 ■ ಮಂಗಳೂರು ✆ 2441016 ■ ಮೈಸೂರು ✆ 424094 ■ ಗುಲ್ಬರ್ಗಾ ✆ 424302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna